# ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ






ಡಾ. ಅಕ್ಕಮಹಾದೇವಿ



ಡಾ. ಅಕ್ಕಮಹಾದೇವಿ

22 ನವೆಂಬರ್ 1956ರಲ್ಲಿ ಮೈಸೂರಿನಲ್ಲಿ ಜನನ. ಮೈಸೂರು ವಿಶ್ವವಿದ್ಯಾನಿಲಯದಿಂದ 1979ರಲ್ಲಿ ಎಂ.ಎ. (ಕನ್ನಡ): 1980ರಲ್ಲಿ ಭಾಷಾಂತರದಲ್ಲಿ ಡಿಪ್ಲೊಮಾ, 1987ರಲ್ಲಿ ಪಿಎಚ್.ಡಿ. ಪದವಿ ಗಳಿಕೆ. ಸುಮಾರು 50 ಲೇಖನಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಪ್ರಕಟಿತ ಕೃತಿಗಳು : ಬುಡಕಟ್ಟು ನ್ಯಾಯ (ಅನು.), ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ.

# ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ





ಡಾ. ಅಕ್ಕಮಹಾದೇವಿ
ಸಂಶೋಧನ ಸಹಾಯಕಿ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ, ಮೈಸೂರು 570006

1989

*PURANDARADASARA MATTU ANNAMACHARYARA KIRTANEGALA SAMSKRITIKA ADHYAYANA (A Cultural Study of the Kirtana's of Purandaradasa and Annamacharya) by Dr.Akkamahadevi, Research Assistant, Institute of Kannada Studies, University of Mysore, Manasagangotri, Mysore-6.*

*First Edition, 1989, Pp. viii + 234. 1000 Copies*

ಮೊದಲ ಮುದ್ರಣ 1989



ಬೆಲೆ : ರೂ. 30-00

ಮುಖಚಿತ್ರ : ಶ್ರೀ ಬಾಪು

ಅಕ್ಷರ ವಿನ್ಯಾಸ : ಶ್ರೀ ಕೆ. ಬಿ. ಸದಾನಂದ

ಮುದ್ರಣ : ಮಿತ್ರ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು.

# ಅರಿಕೆ

ನಾನು ಕನ್ನಡ ಎಂ. ಎ. ಅಭ್ಯಾಸ ಮಾಡುವಾಗ ದ್ರಾವಿಡ ಅಧ್ಯಯನವನ್ನು ಐಚ್ಛಿಕ ವಿಷಯವಾಗಿ ಆಯ್ದುಕೊಂಡಿದ್ದೆ. ಅನಂತರ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ವಿಭಾಗದಲ್ಲಿ ಲಿಪಿಕಾರ್ತಿಯಾಗಿ ಕೆಲಸಕ್ಕೆ ಸೇರಿದೆ. ಇದರ ಫಲವಾಗಿ ತೌಲನಿಕ ವಿಷಯವನ್ನು ತೆಗೆದುಕೊಂಡು ಪಿಎಚ್.ಡಿ. ಮಾಡಬೇಕೆಂಬ ಆಸಕ್ತಿ ನನ್ನಲ್ಲಿ ಮೂಡಿತು. ಹೀಗಾಗಿ ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಅಳವಡಿಸಿಕೊಂಡೆ. ಇವರಿಬ್ಬರ ಕೀರ್ತನೆಗಳಲ್ಲಿ ಬರುವ ಸಾಂಸ್ಕೃತಿಕ ವಿಷಯದ ಬಗೆಗೆ ಅಧ್ಯಯನ ನಡೆಸಿ, ಮಹಾಪ್ರಬಂಧವನ್ನು ಸಿದ್ಧಪಡಿಸಿ 1986ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದೆ. 1987ರಲ್ಲಿ ನನಗೆ ಪಿಎಚ್.ಡಿ. ಪದವಿ ದೊರೆಯಿತು.

ಡಾ. ಆರ್ವಿಯಸ್ ಸುಂದರಂ ಅವರು ನನ್ನ ಗುರುಗಳು ಹಾಗೂ ಮಾರ್ಗದರ್ಶಕರು. ಅವರ ಪ್ರೋತ್ಸಾಹವಿಲ್ಲದಿದ್ದಲ್ಲಿ ಬಹುಶಃ ನಾನು ಈ ಮಹಾಪ್ರಬಂಧವನ್ನು ಸಿದ್ಧಪಡಿಸುತ್ತಿರಲಿಲ್ಲ. ಹೆಜ್ಜೆಹೆಜ್ಜೆಗೂ ನನ್ನನ್ನು ತಿದ್ದಿ ನಾನು ಈ ಹಂತ ತಲುಪುವಂತೆ ಮಾಡಿದವರು ಅವರು. ನನ್ನ ಯಶಸ್ಸು ಅವರಿಗೇ ಸಲ್ಲಬೇಕು.

ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನೆ ನಡೆಸಲು ಅನುಮತಿ ನೀಡಿದ ಡಾ. ಹಾ. ಮಾ. ನಾಯಕ ಅವರಿಗೆ ನನ್ನ ವಂದನೆಗಳು.

ಈ ಪುಸ್ತಕ ಬೆಳಕು ಕಾಣಲು ಧನಸಹಾಯ ನೀಡಿದ ತಿರುಮಲ ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಕೃತಜ್ಞತೆಗಳು.

ನನ್ನ ಪ್ರಬಂಧದ ಪ್ರಗತಿಯ ಬಗೆಗೆ ಆಗಾಗ ಪ್ರೋತ್ಸಾಹದ ಮಾತುಗಳನ್ನಾಡಿ, ಹಸ್ತಪ್ರತಿಯನ್ನು ನೋಡಿ ಸಲಹೆ ಸೂಚನೆಗಳನ್ನು ನೀಡಿದ ಡಾ. ಟಿ. ಎನ್. ನಾಗರತ್ನ ಅವರಿಗೆ ಹೃತ್ಪೂರ್ವಕ ಧನ್ಯವಾದಗಳು. ಸಂಶೋಧನೆಯ ಕಾಲದಲ್ಲಿ ನನ್ನ ಸಹೋದ್ಯೋಗಿಗಳು ಮತ್ತು ಮಿತ್ರರು ಅನೇಕ ವಿಧಗಳಲ್ಲಿ ನೆರವಾಗಿದ್ದಾರೆ. ಅವರೆಲ್ಲರಿಗೂ ನನ್ನ ಅನಂತ ಅಭಿವಂದನೆಗಳು.

ಸುಪ್ರಸಿದ್ಧ ಚಿತ್ರಕಲಾವಿದರೂ ಚಲನಚಿತ್ರ ನಿರ್ದೇಶಕರೂ ಆದ ಶ್ರೀ ಬಾಪು ಅವರು ಕೇಳಿದ ಕೂಡಲೇ ಮುಖಚಿತ್ರ ಬರೆದು ಕಳುಹಿಸಿದರು. ಅವರಿಗೂ ಅಕ್ಷರ ವಿನ್ಯಾಸ ಮಾಡಿಕೊಟ್ಟ ಶ್ರೀ ಕೆ. ಬಿ. ಸದಾನಂದ ಅವರಿಗೂ ಆಭಾರಿಯಾಗಿದ್ದೇನೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ 'ಮಿತ್ರ ಪ್ರಿಂಟರ್ಸ್'ನ ಮಾಲೀಕರಾದ ಶ್ರೀ ರಘುವೀರ್ ಹಾಗೂ ಅವರ ಸಿಬ್ಬಂದಿ ವರ್ಗದವರಿಗೆ ವಂದನೆಗಳು.

ಫೆಬ್ರವರಿ 1989 — ಅಕ್ಕಮಹಾದೇವಿ

ಮೈಸೂರು

# ಸಂಕೇತಾಕ್ಷರ ಪದಸೂಚಿ

## ಕನ್ನಡ

ಉ. ಪ್ರ. ಪುರಂದರದಾಸರ ಕೀರ್ತನೆಗಳು 1-5, ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ.

ಕಾವ್ಯಪ್ರೇಮಿ ಪುರಂದರದಾಸರ ಹಾಡುಗಳು, ಸಮಾಜ ಪುಸ್ತಕಾಲಯ.

ಪು.ಸಾ.ದ. ಪುರಂದರದಾಸರ ಸಾಹಿತ್ಯ ದರ್ಶನ, ಸಂಪುಟ 1-4, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ.

ಹ.ಕೀ.ತ. ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ, ಪುರಂದರದಾಸರ ಹಾಡುಗಳು, ಭಾಗ 1-2, ಸುಬೋಧ ಪ್ರಕಟಣಾಲಯ.

## ತೆಲುಗು

ಅ.ಚ. ಅನ್ನಮಾಚಾರ್ಯ ಚರಿತ್ರಮು, ತಿ. ತಿ. ದೇವಸ್ಥಾನಮುಲು, ತಿರುಪತಿ.

ಅಧ್ಯಾ. ಸಂ. ಅಧ್ಯಾತ್ಮ ಸಂಕೀರ್ತನಮುಲು (18ನೆಯ ಸಂಪುಟದ ಅನಂತರದವು), ತಿ. ತಿ. ದೇ., ತಿರುಪತಿ.

ಸೂಚನೆ : ಕನ್ನಡ ಉಲ್ಲೇಖಗಳನ್ನು ಕೊಡುವಾಗ 5-25 ಇತ್ಯಾದಿ ಸಂಖ್ಯೆಗಳಿದ್ದರೆ ಅವು ಮಿಂಚಿನ ಬಳ್ಳಿ ಪ್ರಕಾಶನದ ಸಂಪುಟದ ಸಂಖ್ಯೆ ಮತ್ತು ಕೀರ್ತನೆಯ ಸಂಖ್ಯೆಯನ್ನು ಸೂಚಿಸುತ್ತವೆ. ಉಳಿದೆಡೆಗಳಲ್ಲಿ ಮೇಲಿನ ಸಂಕ್ಷಿಪ್ತ ಪದ ಮತ್ತು ಪುಟ ಸಂಖ್ಯೆ ಕೊಟ್ಟಿದೆ. ತೆಲುಗು ಉಲ್ಲೇಖಗಳನ್ನು ಕೊಡುವಾಗ 5-25 ಇತ್ಯಾದಿ ಸಂಖ್ಯೆಗಳಿದ್ದರೆ ಅವು 1 ರಿಂದ 15ರ ವರೆಗಿನ ಸಂಕೀರ್ತನ ಸಂಪುಟಗಳ ಸಂಖ್ಯೆ ಮತ್ತು ಕೀರ್ತನೆಯ ಸಂಖ್ಯೆಯನ್ನು ಸೂಚಿಸುತ್ತವೆ. 11ನೆಯ ಸಂಪುಟದಲ್ಲಿ 3 ಭಾಗಗಳು, 16ನೆಯ ಸಂಪುಟದಲ್ಲಿ 2 ಭಾಗಗಳು ಇವೆ. ಆದುದರಿಂದ 11-3-80, 16-2-80 ಮುಂತಾದ ಸಂಖ್ಯೆಗಳಿಂದ ಸಂಪುಟ-ಭಾಗ-ಕೀರ್ತನ ಸಂಖ್ಯೆಗಳನ್ನು ಕ್ರಮವಾಗಿ ಸೂಚಿಸಲಾಗಿದೆ. 18 ಸಂಪುಟಗಳಲ್ಲದೆ ಉಳಿದ ಪುಸ್ತಕಗಳ ಉಲ್ಲೇಖಗಳನ್ನು ಸೂಚಿಸಲು ಮೇಲಿನ ಸಂಕ್ಷಿಪ್ತ ಪದ ಮತ್ತು ಪುಟ ಸಂಖ್ಯೆ ಕೊಟ್ಟಿದೆ.

# ವಿಷಯಾನುಕ್ರಮಣಿಕೆ

# ಉದ್ದೇಶ ಮತ್ತು ವ್ಯಾಪ್ತಿ

ದಕ್ಷಿಣ ಭಾರತದ ಕೀರ್ತನ ಸಾಹಿತ್ಯದಲ್ಲಿ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಚಿರಸ್ಮರಣೀಯರು. ಸಂಗೀತ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಇವರಿಬ್ಬರ ಕೊಡುಗೆ ಅಸಾಮಾನ್ಯವಾದುದು. ಈ ಇಬ್ಬರು ಕೀರ್ತನಕಾರರಿಗೂ ಹಲವು ಹೋಲಿಕೆಗಳಿವೆ. ಮುಖ್ಯವಾಗಿ ಇವರು ಹರಿಭಕ್ತಿಯನ್ನು ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಬೋಧಿಸಿದರು. ವಿಜಯನಗರ ಕಾಲದ ಕರ್ನಾಟಕಾಂಧ್ರ ಸಂಸ್ಕೃತಿಯ ಸ್ವರೂಪವನ್ನು ತಿಳಿದುಕೊಳ್ಳಲು ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳು ಬಹಳಷ್ಟು ನೆರವಾಗುತ್ತವೆ. ಶಿಷ್ಟ ಹಾಗೂ ಜನಪದ ಸಂಸ್ಕೃತಿಯ ನಿಕಟ ಪರಿಚಯವಿದ್ದ ಈ ಇಬ್ಬರು ಕೀರ್ತನಕಾರರು ತಮ್ಮ ರಚನೆಗಳಲ್ಲಿ ಸಂದರ್ಭ ಬಂದಾಗಲೆಲ್ಲಾ ಜನಜೀವನವನ್ನು ಪ್ರತಿಬಿಂಬಿಸಿದರು. ಸಮಕಾಲೀನ ಸಂಸ್ಕೃತಿಯ ಪ್ರತಿನಿಧಿಗಳಾದ ಈ ಮಹನೀಯರ ಕೃತಿಗಳ ತೌಲನಿಕ ಅಧ್ಯಯನ ಅಗತ್ಯವಾದುದು.

ಕನ್ನಡ ಮತ್ತು ತೆಲುಗು ಒಂದೇ ಕುಟುಂಬಕ್ಕೆ ಸೇರಿದ ಭಾಷೆಗಳು. ಈ ಭಾಷೆಗಳನ್ನಾಡುವ ಪ್ರದೇಶಗಳನ್ನು ನೂರಾರು ವರ್ಷಗಳ ಕಾಲ ಒಂದೇ ರಾಜವಂಶಗಳು ಆಳಿದುವು. ಕರ್ನಾಟಕದಿಂದ ಆಂಧ್ರಕ್ಕೆ, ಆಂಧ್ರದಿಂದ ಕರ್ನಾಟಕಕ್ಕೆ ಜನರು ವಲಸೆ ಹೋದರು. ತೆಲುಗು ಮಾತನಾಡುವ ಜನ ಕರ್ನಾಟಕದಲ್ಲಿ, ಕನ್ನಡ ಮಾತನಾಡುವ ಜನ ಆಂಧ್ರದಲ್ಲಿ ಹೇರಳವಾಗಿದ್ದಾರೆ. ಈ ಎರಡು ಪ್ರದೇಶಗಳ ನಡುವೆ ಸಾವಿರಾರು ವರ್ಷಗಳಿಂದ ಸಾಂಸ್ಕೃತಿಕ ವಿನಿಮಯ ನಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನದಿಂದ ಕುತೂಹಲಕರವಾದ ಅನೇಕ ವಿಷಯಗಳು ತಿಳಿದುಬರುತ್ತವೆ.

ಯಾವುದಾದರೊಂದು ಸಂಸ್ಕೃತಿಯ ಹಿನ್ನೆಲೆಯಲ್ಲಿ ಬೆಳೆದುಬಂದ ವ್ಯಕ್ತಿಗಳ ಸಾಧನೆಯನ್ನು ವಿಮರ್ಶಾತ್ಮಕವಾಗಿ ನೋಡುವುದು ಒಂದು ಪದ್ಧತಿ. ವ್ಯಕ್ತಿಯ ಸಾಧನೆಯ ಪರಿಶೀಲನೆಯಿಂದ ಒಂದು ಸಂಸ್ಕೃತಿಯ ಸ್ವರೂಪವನ್ನು ತಿಳಿಯಲು ಪ್ರಯತ್ನಿಸುವುದು ಇನ್ನೊಂದು ಪದ್ಧತಿ. ವ್ಯಕ್ತಿ ಮತ್ತು ಸಮಾಜಗಳ ನಡುವೆ ಬಿಡಿಸಲಾರದ ಸಂಬಂಧವಿದೆ. ವ್ಯಕ್ತಿಗಳಿಲ್ಲದೆ ಸಮಾಜವಿಲ್ಲ, ಸಮಾಜವಿಲ್ಲದೆ ವ್ಯಕ್ತಿಗೆ ಉಳಿವಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ನಡವಳಿಕೆಯಿಂದ, ಮಾತುಕತೆಗಳಿಂದ, ರಚನೆಗಳಿಂದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತಾನೆ. ಕೆಲವರು ಮಹತ್ತರ ಸಾಧನೆಯಿಂದ ಸಾಂಸ್ಕೃತಿಕ ಪ್ರತಿನಿಧಿಗಳಾಗುವ ಮಟ್ಟಕ್ಕೆ ಬೆಳೆಯುವರು. ಅಂಥವರ ಜೀವನ ಮತ್ತು ಸಾಧನೆಗಳ ವಿಶ್ಲೇಷಣೆಯಿಂದ ಅವರಿಗೆ ಹಿನ್ನೆಲೆಯಾಗಿರುವ ಸಂಸ್ಕೃತಿಯ ಸ್ವರೂಪ ಮನದಟ್ಟಾಗುವುದು. ಪುರಂದರದಾಸರು

ಮತ್ತು ಅನ್ನಮಾಚಾರ್ಯರು ಈ ರೀತಿಯ ವ್ಯಕ್ತಿಗಳು. ತಮ್ಮ ಸಾಧನೆಯಿಂದ ಅನೇಕರಿಗೆ ಸ್ಫೂರ್ತಿ ನೀಡಿದ ಮಹನೀಯರು. ಇವರ ಪ್ರಭಾವ ಸಮಕಾಲೀನ ಜನಸಮುದಾಯದ ಮೇಲೆ ಮಾತ್ರವಲ್ಲದೆ, ಇಂದಿಗೂ ಮುಂದುವರಿದಿದೆ. ರಸಭರಿತ ಸಂಗೀತ-ಸಾಹಿತ್ಯ ಕೃತಿಗಳ ರಚನೆಯಿಂದ ಇಂದಿಗೂ ರಸಿಕರ ಮನಸ್ಸನ್ನು ರಂಜಿಸುತ್ತಿರುವ ಈ ಕೀರ್ತನಕಾರರ ವ್ಯಕ್ತಿತ್ವ ಮತ್ತು ರಚನೆಗಳು ಅಧ್ಯಯನಯೋಗ್ಯವಾದವು.

ಅನ್ನಮಾಚಾರ್ಯರು ಕ್ರಿ.ಶ. 15ನೆಯ ಶತಮಾನದಲ್ಲಿ ಬಾಳಿದವರು. ಪುರಂದರ ದಾಸರು ಕ್ರಿ.ಶ. 15ನೆಯ ಶತಮಾನದ ಉತ್ತರಾರ್ಧದಲ್ಲಿ ಹಾಗೂ 16ನೆಯ ಶತಮಾನದ ಪೂರ್ವಾರ್ಧದಲ್ಲಿ ಬಾಳಿದವರು. ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲವೆಂದು ತಿಳಿಯಲಾದ ಅವಧಿಯಲ್ಲಿ ಬಾಳಿದ ಈ ಇಬ್ಬರು ಕೀರ್ತನಕಾರರ ರಚನೆಗಳಲ್ಲಿ ಸಮಕಾಲೀನ ಜೀವನವಿಧಾನ ಪ್ರತಿಫಲಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ. 15–16 ಶತಮಾನಗಳ ಹೊತ್ತಿಗೆ ತೆಲುಗು, ಕನ್ನಡಗಳ ಸಾಹಿತ್ಯ ಮತ್ತು ಸಂಸ್ಕೃತಿಗಳು ಸನ್ನಿಹಿತ ಸಂಬಂಧವನ್ನು ಬೆಳೆಸಿಕೊಂಡಿದ್ದುವು. ಈ ಬಾಂಧವ್ಯಕ್ಕೆ ಒಂದು ಸುದೀರ್ಘ ಪರಂಪರೆ ಇದೆ.

ಶಾತವಾಹನರ ಕಾಲದಲ್ಲೇ ಕನ್ನಡಿಗರು ಮತ್ತು ತೆಲುಗರು ಒಂದೇ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿದ್ದರು. ಹಾಲನ 'ಗಾಥಾಸಪ್ತಶತಿ'ಯಲ್ಲಿ ಕನ್ನಡ ಪದಗಳಿರುವಂತೆ, ತೆಲುಗು ಪದಗಳೂ ಇವೆ. 'ಗಾಥಾಸಪ್ತಶತಿ' ಈ ಎರಡು ಭಾಷೆಗಳನ್ನಾಡುವ ಜನರ ಸಂಸ್ಕೃತಿಯನ್ನು ಹಲವು ಗಾಥೆಗಳಲ್ಲಿ ಸೂಚಿಸುತ್ತದೆ. ಶಾತವಾಹನರ ಅನಂತರ ಆಳ್ವಿಕೆ ನಡೆಸಿದ ಅನೇಕ ರಾಜಮನೆತನಗಳ ಕಾಲದಲ್ಲೂ ಆಂಧ್ರ ಮತ್ತ ಕರ್ನಾಟಕಗಳ ನಡುವೆ ಸಾಂಸ್ಕೃತಿಕ ಸಂಬಂಧಗಳು ದೃಢವಾಗತೊಡಗಿದುವು. ಚಾಲುಕ್ಯರು ತಮ್ಮ ರಾಜ್ಯವನ್ನು ಆಂಧ್ರದ ತೀರ ಪ್ರದೇಶಗಳವರೆಗೂ ವಿಸ್ತರಿಸಿದರು. ಇವರ ಕಾಲದಲ್ಲಿ ಕನ್ನಡ ಮತ್ತು ತೆಲುಗಿನ ನಡುವಿನ ಸಂಬಂಧ ಇನ್ನಷ್ಟು ಬಲವಾಯಿತು. ಪೂರ್ವಚಾಲುಕ್ಯರು ತೆಲುಗು ಸಾಹಿತ್ಯಕ್ಕೆ ನೀಡಿದ ಪೋಷಣೆ ಚಿರಸ್ಮರಣೀಯವಾದುದು. ಚಾಲುಕ್ಯರ ಕಾಲದಿಂದ ಬೆಳೆಯುತ್ತಾ ಬಂದ ತೆಲುಗು-ಕನ್ನಡ ಬಾಂಧವ್ಯ ವಿಜಯನಗರ ಕಾಲಕ್ಕೆ ಅತ್ಯಂತ ನಿಕಟ ವಾಯಿತು. ಅಂದಿನ ಕರ್ನಾಟಕ ಸಾಮ್ರಾಜ್ಯ ಕನ್ನಡ ಮತ್ತು ತೆಲುಗು ಮಾತನಾಡುವ ಪ್ರದೇಶಗಳಲ್ಲಿ ಪ್ರಧಾನವಾಗಿತ್ತು. ನಾಚನಸೋಮನಾಥನೆಂಬ ತೆಲುಗುಕವಿಗೆ ವಿಜಯ ನಗರರಾಜರು ಆಶ್ರಯ ನೀಡಿದ್ದರು. ಶ್ರೀನಾಥನೆಂಬ ಮಹಾಕವಿ ಪ್ರೌಢದೇವರಾಯ ನಿಂದ ಕನಕಾಭಿಷೇಕ ಗೌರವ ಪಡೆದು 'ಕವಿಸಾರ್ವಭೌಮ'ನೆಂದೂ ಹೆಸರಾದನು. ವಿಜಯನಗರ ರಾಜರ ಕಾಲಕ್ಕೆ ತಿರುಪತಿ ದಕ್ಷಿಣಭಾರತದ ಪ್ರಸಿದ್ಧ ಪುಣ್ಯಕ್ಷೇತ್ರವಾಯಿತು. ವಿಜಯನಗರ ರಾಜರಲ್ಲಿ ಹಲವರಿಗೆ ವೆಂಕಟರಮಣ ಇಷ್ಟದೈವವಾದನು. ಸಾಹಿತ್ಯ ಸಂಗೀತಾದಿ ಕಲೆಗಳಿಗೆ ತಿರುಪತಿ ಕಾರ್ಯಕ್ಷೇತ್ರವೂ ಆಯಿತು. ತಾಳ್ಳಪಾಕ ಎಂಬ ಹಳ್ಳಿ ಯಿಂದ ಬಂದ ಅನ್ನಮಾಚಾರ್ಯರು ವೇಂಕಟೇಶ್ವರನ ಸನ್ನಿಧಿಯಲ್ಲೇ ಸಂಕೀರ್ತನ ರಚನೆಗೆ ತೊಡಗಿದರು. ಪುರಂದರದಾಸರು ಕೂಡ ತಿರುಪತಿ ವೇಂಕಟೇಶ್ವರನನ್ನು ಸಂದರ್ಶಿಸಿದರು. ಇಂಥ ಸಮಾನಾಂಶಗಳ ಮತ್ತು ಸನ್ನಿಹಿತ ಸಂಬಂಧದ ಹಿನ್ನೆಲೆ

ಅನ್ನಮಾಚಾರ್ಯರ ಮತ್ತು ಪುರಂದರದಾಸರ ಕೃತಿಗಳ ತೌಲನಿಕ ಅಧ್ಯಯನ ನಡೆಸಲು ಪ್ರೇರಣೆ ನೀಡುವಂಥದು.

ಸಾಂಸ್ಕೃತಿಕ ಪ್ರತಿನಿಧಿಗಳಾದ ಪುರಂದರದಾಸರು ಮತ್ತು ಅನ್ನಮಾಚಾರ್ಯರಂಥ ಉನ್ನತ ವ್ಯಕ್ತಿಗಳು ಇಡೀ ಸಮಾಜದ ಮೇಲೆ ಪ್ರಭಾವ ಬೀರಬಲ್ಲ ಶಕ್ತಿಯುಳ್ಳವರು. ಇವರ ರಚನೆಗಳ ಅಧ್ಯಯನದಿಂದ 15-16 ಶತಮಾನಗಳ ಕರ್ನಾಟಕಾಂಧ್ರ ಸಂಸ್ಕೃತಿಯ ಹಲವು ಮುಖಗಳ ಪರಿಚಯವಾಗುತ್ತದೆ. ವಿಜಯನಗರ ಕಾಲದ ಕರ್ನಾಟಕಾಂಧ್ರ ಬಾಂಧವ್ಯ ಇವರ ಕೀರ್ತನೆಗಳಲ್ಲಿ ಎಷ್ಟರಮಟ್ಟಿಗೆ ಪ್ರತಿಫಲಿಸಿದೆ, ಇವರ ರಚನೆಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಬಾಂಧವ್ಯವನ್ನು ಎಷ್ಟರಮಟ್ಟಿಗೆ ಗುರುತಿಸಬಹುದು ಎಂಬುದನ್ನು ಪರಿಶೀಲಿಸುವುದು ಪ್ರಕೃತ ಪ್ರಬಂಧದ ಮುಖ್ಯೋದ್ದೇಶ.

ಈ ಮಹಾಪ್ರಬಂಧದ ವ್ಯಾಪ್ತಿಯನ್ನು ನಿರ್ಧರಿಸುವಾಗ 'ಸಂಸ್ಕೃತಿ'ಯನ್ನು ಯಾವ ಅರ್ಥದಲ್ಲಿ ಬಳಸಲಾಯಿತೆಂಬುದನ್ನು ಹೇಳಬೇಕಾಗಿದೆ. ಇಂಗ್ಲಿಷಿನ 'ಕಲ್ಚರ್' ಎಂಬ ಪದಕ್ಕೆ ಸಂವಾದಿಯಾಗಿ ನಾವು 'ಸಂಸ್ಕೃತಿ' ಎಂಬ ಪದವನ್ನು ಬಳಸುತ್ತೇವೆ. 'ಕಲ್ಚರ್' ಮತ್ತು 'ಸಂಸ್ಕೃತಿ' ಎರಡನ್ನೂ ಅನೇಕರು ಸೀಮಿತವಾದ ಅರ್ಥದಲ್ಲೇ ಬಳಸುತ್ತಾರೆ. 'ಸಂಸ್ಕೃತಿ' ಎಂಬ ಶಬ್ದಕ್ಕೆ 'ಗುರುಬಾಲಪ್ರಬೋಧಿಕಾ'ದಂಥ ನಿಘಂಟುಗಳು ಕೂಡ ವ್ಯುತ್ಪತ್ತಿ ಹೇಳಿಲ್ಲ. ಆದರೆ ಈ ಶಬ್ದ 'ಸಂಸ್ಕೃತ'ಕ್ಕೆ ಸಂಬಂಧಿಸಿದ್ದೆಂಬುದು ಸ್ಪಷ್ಟ. 'ಸಂಸ್ಕೃತ' ಮತ್ತು 'ಸಂಸ್ಕೃತಿ' ಎಂಬವು 'ಸಂಸ್ಕಾರ' ಶಬ್ದದಿಂದ ನಿಷ್ಪನ್ನವಾದವೆಂದು ಡಿ. ಎನ್. ಮುಜುಂದಾರ್ ಮತ್ತು ಟಿ. ಎನ್. ಮದನ್ ಅಭಿಪ್ರಾಯ ಪಟ್ಟಿದ್ದಾರೆ.[1]

ಸಾಮಾನ್ಯ ವ್ಯವಹಾರದಲ್ಲಿ 'ಸಂಸ್ಕೃತಿ' ಎಂಬುದು ಉನ್ನತ ಜೀವನಾದರ್ಶಗಳಿಗೂ ಉತ್ತಮ ವ್ಯಕ್ತಿತ್ವಕ್ಕೂ ಸಂಕೇತವಾಗಿದೆ. "ಸಂಸ್ಕೃತಿ ಎಂಬುದು ಕೇವಲ ಹಲವು ಚಟುವಟಿಕೆಗಳ ಮೊತ್ತವಾಗಿರದೆ ಒಂದು ಜೀವನ ವಿಧಾನವಾಗಿದೆ" ಎಂಬುದು ಟಿ. ಎಸ್. ಇಲಿಯಟ್‌ನ ಅಭಿಪ್ರಾಯ.[2] ನಾವು ಏನನ್ನು ಪಡೆದಿದ್ದೇವೆ ಎನ್ನುವುದಕ್ಕಿಂತ ನಾವು ಏನಾಗಬೇಕೆಂದಿದ್ದೇವೆ ಎನ್ನುವುದೇ ಸಂಸ್ಕೃತಿ ಎನಿಸಿಕೊಳ್ಳುತ್ತದೆ–ಎಂಬ ಅಭಿಪ್ರಾಯ ಮ್ಯಾಥ್ಯೂ ಆರ್ನಾಲ್ಡನದು.[3] "ನೈತಿಕ ಕಾನೂನನ್ನು ಅಭ್ಯಸಿಸುವುದೇ ಸಂಸ್ಕೃತಿಯೆನಿಸಿ ಕೊಳ್ಳುತ್ತದೆ"[4] ಎಂಬ ಇನ್ನೊಂದು ಅಭಿಪ್ರಾಯವಿದೆ. ಸ್ವಾಮಿ ವಿವೇಕಾನಂದ ಒಂದು ಸಂದರ್ಭದಲ್ಲಿ "ಪ್ರಬಲ ಆಘಾತಗಳನ್ನು ಸಹಿಸಿ ನಿಲ್ಲಬಲ್ಲಂಥದು ಸಂಸ್ಕೃತಿ" ಎಂದಿದ್ದಾರೆ.

---

[1] *An Introduction to Social Anthropology*, p. 13

[2] "Culture is not merely the sum of several activities but a way of life"-*Notes towards a definition of culture*, p. 15

[3] *Culture and Anarchy*, p. 48

[4] "Cultivation of the moral law is called culture" - *Text Book of Indian Culture*, p. 14

ಹಾಗೆಯೇ 'ಸಂವಹನವೇ ಸಂಸ್ಕೃತಿ' ಎಂದಿದ್ದಾರೆ ಸರ್ವೇಪಲ್ಲಿ ರಾಧಾಕೃಷ್ಣ. ಈ ಕೆಲವು ಅಭಿಪ್ರಾಯಗಳು 'ಸಂಸ್ಕೃತಿ' ಎಂಬುದನ್ನು ಸಾಂಪ್ರದಾಯಿಕ ಅರ್ಥದಲ್ಲೇ ಸ್ವೀಕರಿಸಿವೆ.

ಶಾಸ್ತ್ರೀಯ ಪರಿಭಾಷೆಯಲ್ಲಿ 'ಸಂಸ್ಕೃತಿ' ವಿಸ್ತೃತಾರ್ಥವನ್ನು ಪಡೆದಿದೆ. ಕೇವಲ ಶಿಷ್ಟರಿಗೆ ಸಂಬಂಧಿಸಿದ ಆಚಾರ-ವ್ಯವಹಾರಗಳು, ವೇಷ-ಭೂಷಣಗಳು, ಸಾಧನೆ-ಸತ್ಕೃತಿಗಳು ಮಾತ್ರ ಸಂಸ್ಕೃತಿಯ ಪರಿಧಿಯೊಳಗೆ ಬರುತ್ತವೆಂಬುದನ್ನು ಅನೇಕ ವಿದ್ವಾಂಸರು ಒಪ್ಪುವುದಿಲ್ಲ. ಮಾನ್ಯರು ಮಾತ್ರವಲ್ಲದೆ ಸಾಮಾನ್ಯರೂ ಸಂಸ್ಕೃತಿಯ ಪ್ರತಿನಿಧಿಗಳಾಗಬಲ್ಲರೆಂಬುದನ್ನು ತೋರಿಸಿಕೊಡಲಾಯಿತು. ಜಾನಪದರು ನಾಗರಿಕರು ಎಂಬ ಭೇದವಿಲ್ಲದೆ ಎಲ್ಲರೂ ತಮ್ಮ ಏಳಿಗೆಗಾಗಿ ಮಾಡುವ ಕೆಲಸವೆಲ್ಲ ಸಂಸ್ಕೃತಿಯ ಭಾಗವೆಂದೇ ಹೇಳಲಾಗಿದೆ. ಮಾನವ ಕೃತಿಯೆಲ್ಲ ಸಂಸ್ಕೃತಿ ಆಗಬಲ್ಲುದು–ಎಂಬುದು ಜಾನಪದ ವಿದ್ವಾಂಸರು, ಮಾನವ ಶಾಸ್ತ್ರಜ್ಞರು ಮುಂತಾದವರ ಅಭಿಪ್ರಾಯ.

ಸಂಸ್ಕೃತಿಯನ್ನು ನಾಗರಿಕತೆ ಎಂಬ ಅರ್ಥದಲ್ಲೂ ಕೆಲವರು ಬಳಸುವುದುಂಟು. ನಾಗರಿಕತೆ ಸಂಸ್ಕೃತಿಯ ಭಾಗವಾಗಬಹುದೇ ಹೊರತು ಇಡೀ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದಿಲ್ಲ. ಕೆ. ಎಂ. ಮುನ್ಷಿ "ನಾಗರಿಕತೆ ಸಂಸ್ಕೃತಿ ಅಲ್ಲ"[1] ಎಂದು ಸ್ಪಷ್ಟ ವಾಗಿ ಹೇಳಿ "ಸಂಸ್ಕೃತಿ ಗತಕಾಲದಿಂದ ಬರುತ್ತಾ ವರ್ತಮಾನವನ್ನು ಅನುಸರಿಸುತ್ತಾ ಭವಿಷ್ಯತ್ಪಥವನ್ನು ನಿರ್ದೇಶಿಸುವುದು"[2] ಎಂದು ಅದರ ಸ್ವರೂಪವನ್ನು ಚೆನ್ನಾಗಿ ವಿವರಿಸಿದರು. ಚಮನ್‌ಲಾಲ್ ಎಂಬ ವಿದ್ವಾಂಸರು ಸಂಸ್ಕೃತಿ ಮತ್ತು ನಾಗರಿಕತೆಗಳಿಗಿರುವ ವ್ಯತ್ಯಾಸವನ್ನು ಕುರಿತು ಹೇಳುತ್ತಾ ಹೀಗೆನ್ನುತ್ತಾರೆ: "ಸಂಸ್ಕೃತಿ ಮತ್ತು ನಾಗರಿಕತೆಗಳ ಬಗ್ಗೆ ಬಹಳ ಗೊಂದಲವಿದೆ. ಸಂಸ್ಕೃತಿ ಒಂದು ಜೀವನ ವಿಧಾನ, ಜೀವನ ತತ್ತ್ವ. ನಾಗರಿಕತೆ ವೈಜ್ಞಾನಿಕ ಸಾಧನೆ"[3] ಮೌಲ್ಯವನ್ನು ನಿರ್ಧರಿಸತಕ್ಕದ್ದು ನಾಗರಿಕತೆ ಯೆಂದೂ ಅಮೂಲ್ಯವಾದುದು ಸಂಸ್ಕೃತಿಯೆಂದೂ ಹೇಳುವುದುಂಟು. ನಾಗರಿಕತೆ ಬಾಹ್ಯ ಸೌಂದರ್ಯಕ್ಕೆ ಸಂಬಂಧಿಸಿದ್ದಾರೆ, ಸಂಸ್ಕೃತಿ ಆತ್ಮಸೌಂದರ್ಯಕ್ಕೆ ಸಂಬಂಧಿಸಿದ್ದು ಎಂದು ಹೇಳುತ್ತಾರೆ. ಒಟ್ಟಿನಲ್ಲಿ ಸಂಸ್ಕೃತಿಯನ್ನು ಅನುಸರಿಸಿ ನಾಗರಿಕತೆ ಇರುತ್ತದೆಯೇ ಹೊರತು ನಾಗರಿಕತೆಯನ್ನು ಅನುಸರಿಸಿ ಸಂಸ್ಕೃತಿ ಇರುವುದಿಲ್ಲವೆಂದು ಹೇಳಬಹುದು.

ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳುವಾಗ ಯಾವ ಯಾವ ವಿಷಯಗಳನ್ನು ಅಧ್ಯಯನದ ಪರಿಧಿಗೆ ಒಳಪಡಿಸಬೇಕೆಂಬುದು ಪ್ರಶ್ನೆ. ಕೆಲವು ಭಾರತೀಯ ವಿದ್ವಾಂಸರು ಸಂಸ್ಕೃತಿಯಲ್ಲಿ ವೈದಿಕ ಸಂಸ್ಕೃತಿ ಮತ್ತು ಲೌಕಿಕ ಸಂಸ್ಕೃತಿ ಎಂಬ ಎರಡು ವಿಭಾಗಗಳನ್ನು ಗುರುತಿಸಿದರು. ವೇದಾದಿ ಶಾಸ್ತ್ರಗಳಲ್ಲಿ ವಿಧಿಸಲಾದ ನಿಯಮಗಳಿಗೆ ಒಳಪಟ್ಟದ್ದು ವೈದಿಕ ಸಂಸ್ಕೃತಿ, ಲೋಕ ವ್ಯವಹಾರಕ್ಕೆ ತಕ್ಕಂತೆ ಕೆಲವು ಕಟ್ಟುಪಾಡುಗಳಿಗೆ ಒಳಗಾದುದು ಲೌಕಿಕ ಸಂಸ್ಕೃತಿ. ಕೆಲವರು ಭೌತಿಕ ಸಂಸ್ಕೃತಿ, ಭಾವ ಸಂಸ್ಕೃತಿ ಎಂಬ ಎರಡು ವಿಧಗಳನ್ನು

1 *Foundations of Indian Culture*, p. 3
2 ಅದೇ, ಪು. 4
3 *Text Book of Indian Culture*, p. 15.

ಗುರುತಿಸಿದ್ದಾರೆ. ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಸಂಸ್ಕೃತಿಯಲ್ಲಿ ಭೌತಿಕ, ಮಾನಸಿಕ ಮತ್ತು ಸಾಮಾಜಿಕ ಎಂಬ ಮೂರು ಮುಖ್ಯ ವಿಭಾಗಗಳನ್ನು ಗುರುತಿಸಿದ್ದಾರೆ. ಸಾಂಸ್ಕೃತಿಕ ಮಾನವಶಾಸ್ತ್ರ, ಜಾನಪದ, ಸಮಾಜಶಾಸ್ತ್ರ ಮುಂತಾದವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಸ್ತುತ ಮಹಾಪ್ರಬಂಧದಲ್ಲಿ ಸಂಸ್ಕೃತಿಯ ಅಧ್ಯಯನಕ್ಕೆ ಒಳಪಡುವ ಅಂಶಗಳನ್ನು ಆರಿಸಿಕೊಳ್ಳಲಾಗಿದೆ. ಮಹಾಪ್ರಬಂಧದ ಮುಖ್ಯ ಅಧ್ಯಾಯಗಳನ್ನು ಮುಂದಿನಂತೆ ರೂಪಿಸಿಕೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೀರ್ತನೆಯ ಸ್ವರೂಪವನ್ನು ಕುರಿತು ಸಂಕ್ಷಿಪ್ತವಾಗಿ ವಿವೇಚಿಸಿ, ಕನ್ನಡ ಮತ್ತು ತೆಲುಗುಗಳಲ್ಲಿ ಕೀರ್ತನ ಸಾಹಿತ್ಯ ಬೆಳೆದು ಬಂದ ರೀತಿಯನ್ನು ವಿವರಿಸಲಾಗುವುದು. ಮೂರನೆಯ ಅಧ್ಯಾಯದಲ್ಲಿ ಪುರಂದರದಾಸರ ಕಾಲ, ದೇಶ, ವ್ಯಕ್ತಿತ್ವ, ರಚನೆಗಳು ಮುಂತಾದವನ್ನು ಕುರಿತು ಹೇಳಲಾಗುವುದು. ನಾಲ್ಕನೆಯ ಅಧ್ಯಾಯದಲ್ಲಿ ಅನ್ನಮಾಚಾರ್ಯರ ಇತಿವೃತ್ತವನ್ನು ಚಿತ್ರಿಸಲಾಗುವುದು. ಈ ನಾಲ್ಕು ಅಧ್ಯಾಯಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಹಿನ್ನೆಲೆಯಾಗಿರುತ್ತವೆ. ಈ ಪ್ರವೇಶದಿಂದ ಅಧ್ಯಯನಕ್ಕೆ ಕೈಗೊಂಡಿರುವ ಇಬ್ಬರು ಕವಿಗಳ ವ್ಯಕ್ತಿತ್ವ ಮತ್ತು ಸಾಧನೆಯ ಸ್ಥೂಲ ಪರಿಚಯವಾಗುತ್ತದೆ. ಕನ್ನಡ ಮತ್ತು ತೆಲುಗು ಭಾಷೆಗಳ ಕೀರ್ತನ ಸಾಹಿತ್ಯದ ಪರಿಚಯದಿಂದ ಇವರಿಬ್ಬರ ಕೊಡುಗೆಯ ಬಗೆಗೂ ತಿಳಿಯುತ್ತದೆ.

ಐದನೆಯ ಅಧ್ಯಾಯದಿಂದ ಮಹಾಪ್ರಬಂಧದ ಅತ್ಯಂತ ಮುಖ್ಯ ಭಾಗ ಪ್ರಾರಂಭವಾಗುತ್ತದೆ. ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಗೆ ಒಳಪಡುವ ಸಾಮಾಜಿಕ ಸಂಸ್ಥೆಗಳಾದ ಮದುವೆ, ಕುಟುಂಬ ಮತ್ತು ಬಾಂಧವ್ಯದ ಸ್ವರೂಪವನ್ನು ಕವಿಗಳ ಕೀರ್ತನೆಗಳ ಸಹಾಯದಿಂದ ವಿವರಿಸಲಾಗುವುದು. ಆರನೆಯ ಅಧ್ಯಾಯದಲ್ಲಿ ವಸ್ತುಸಂಸ್ಕೃತಿ ಅಥವಾ ಭೌತಿಕ ಸಂಸ್ಕೃತಿಯ ಭಾಗವಾದ ಆಭರಣಗಳು, ಉಡುಪು, ಗೃಹೋಪಕರಣಗಳು, ವಾಸ್ತುಶಿಲ್ಪ ಇತ್ಯಾದಿಗಳನ್ನು ಕುರಿತು ವಿವೇಚಿಸಲಾಗುತ್ತದೆ. ಏಳನೆಯ ಅಧಾಯದಲ್ಲಿ ಮಾನಸಿಕ ವಿಚಾರಗಳಾದ ಆಚಾರಗಳು, ನಂಬಿಕೆಗಳು ಮತ್ತು ಧಾರ್ಮಿಕ ವಿಷಯಗಳನ್ನು ವಿವರಿಸಲಾಗುವುದು. ಎಂಟನೆಯ ಅಧ್ಯಾಯದಲ್ಲಿ ಕಲಾತ್ಮಕ ರೂಪಗಳಾದ ನೃತ್ಯ ಸಂಗೀತ, ರೂಪಕ ಮುಂತಾದವನ್ನು ಕುರಿತ ಉಲ್ಲೇಖಗಳನ್ನು ಪರಿಶೀಲಿಸಲಾಗುವುದು. ಗಾದೆ, ನುಡಿಗಟ್ಟು, ಅಲಂಕಾರ ಮುಂತಾದ ಅಂಶಗಳನ್ನೂ ಈ ಅಧ್ಯಾಯದಲ್ಲೇ ಪರಿಶೀಲಿಸಲಾಗುತ್ತದೆ.

ಒಂಬತ್ತನೆಯ ಅಧ್ಯಾಯವನ್ನು ತೌಲನಿಕ ವಿವೇಚನೆಗೆ ಮೀಸಲಿಡಲಾಗುತ್ತದೆ. ಪುರಂದರದಾಸರ ಮತ್ತು ಅನ್ನಮಾಚಾರ್ಯರ ರಚನೆಗಳಿಂದ ತಿಳಿದುಬರುವ ಕರ್ಣಾಟಾಂಧ್ರ ಸಂಸ್ಕೃತಿಗಳ ಪರಿಚಯವನ್ನು ನೀಡಿ, ಈ ಎರಡೂ ಸಂಸ್ಕೃತಿಗಳ ನಡುವಿನ ಸಂಬಂಧವನ್ನು ವಿವೇಚಿಸಲಾಗುವುದು. ಹತ್ತನೆಯ ಅಧ್ಯಾಯ ಉಪಸಂಹಾರ. ಪ್ರಕೃತ ಅಧ್ಯಯನದ ಮುಖ್ಯ ಫಲಿತಾಂಶಗಳನ್ನು ನಿರೂಪಿಸುವುದರೊಂದಿಗೆ ಮಹಾಪ್ರಬಂಧ ಮುಕ್ತಾಯವಾಗುತ್ತದೆ.

# ಕನ್ನಡ ಮತ್ತು ತೆಲುಗುಗಳಲ್ಲಿ ಕೀರ್ತನ ಸಾಹಿತ್ಯ

ಕೀರ್ತನ ಸಾಹಿತ್ಯ ಬೆಳೆದು ಬಂದ ರೀತಿಯನ್ನು ವಿವರಿಸುವ ಮೊದಲು ಸಂಕೀರ್ತನೆ ಮತ್ತು ಅದರ ಸ್ವರೂಪವನ್ನು ಹೇಳಿದರೆ ತಪ್ಪಾಗದು. ಪದ, ವಾಗ್ಗೇಯಕಾರ ಮುಂತಾದ ಪಾರಿಭಾಷಿಕ ಪದಗಳ ಬಗೆಗಿನ ವಿವರಣೆಯೂ ಈ ಸಂದರ್ಭದಲ್ಲಿ ಅಗತ್ಯ.

ಬ್ರಹ್ಮಾನಂದ ಅನುಭವಕ್ಕೆ ರಸರಾಗಲಯಬದ್ಧವಾದ ನಾದೋಪಾಸನೆಗಾಗಿ ವಾಗ್ಗೇಯಕಾರರು ಕಂಡುಕೊಂಡ ಪರಮೋಚ್ಚ ಸಾಧನೆಗಳಲ್ಲಿ 'ಕೀರ್ತನೆ' ಒಂದು. ಕೀರ್ತನೆ ಎಂಬುದಕ್ಕೆ ಸ್ತುತಿ, ವರ್ಣನೆ ಎಂದು ಅರ್ಥ. ನವವಿಧ ಭಕ್ತಿಗಳಲ್ಲಿ ಕೀರ್ತನವೂ ಒಂದು. ಭಗವಂತನನ್ನು ಸ್ತುತಿಸುತ್ತಾ ಮಾಡುವ ಗಾನವೇ ಕೀರ್ತನಭಕ್ತಿ ಎನಿಸಿಕೊಳ್ಳುವುದು. "ಅಖಿಲಭುವನ ಸೃಷ್ಟಿ ಸ್ಥಿತಿಲಯ ಕಾರಣಭೂತನಾದ ಸರ್ವೇಶ್ವರನ ನಾಮಸಂಕೀರ್ತನ ಮಾಡಲು ಒಂದು ಧಾತುಶೈಲಿಯನ್ನು ಅನುಸರಿಸಿ ಬರೆದ ಸಾಹಿತ್ಯ ಕೀರ್ತನೆಯೆನಿಸಿ ಕೊಳ್ಳುತ್ತದೆ" ಎಂದು ಶ್ರೀನಿವಾಸ ಅಯ್ಯಂಗಾರ್ ತಮ್ಮ 'ಗಾನಭಾಸ್ಕರ'ದಲ್ಲಿ ಹೇಳಿರುತ್ತಾರೆ.[1] ಭಗವಂತನ ನಾಮವನ್ನು ಕೀರ್ತಿಸಲು ಬಳಸುತ್ತಿರುವುದರಿಂದ ಕೀರ್ತನೆಯನ್ನು ಕನ್ನಡದಲ್ಲಿ 'ದೇವರನಾಮ'ವೆಂದು ಸಾರ್ಥಕವಾಗಿ ಕರೆಯುತ್ತಾರೆ.

ಕೀರ್ತನೆಯಲ್ಲಿ ಪಲ್ಲವಿ ಅನುಪಲ್ಲವಿ ಮತ್ತು ನುಡಿ ಎಂಬ ತ್ರಿಧಾತುಗಳಿರುತ್ತವೆ. ಪಲ್ಲವಿಯಲ್ಲಿ ಪ್ರತಿಪಾದಿತಾಂಶ ಮುಂದುವರಿಯುತ್ತದೆ. ನುಡಿಗಳಲ್ಲಿ ವಾಗ್ಗೇಯಕಾರನ ಅಭಿಪ್ರಾಯಗಳು ವಿಸ್ತಾರವಾಗುತ್ತವೆ. ಈ ಸಂದರ್ಭದಲ್ಲಿ ಸಂಗೀತ ಪ್ರಪಂಚದಲ್ಲಿ ಬಳಕೆಯಲ್ಲಿರುವ ಪದ, ವಾಗ್ಗೇಯಕಾರ ಎಂಬ ಶಬ್ದಗಳನ್ನು ಕುರಿತು ಸ್ವಲ್ಪಮಟ್ಟಿಗೆ ವಿಚಾರ ಮಾಡಬೇಕು.

## ಪದ

'ಪದ' ಎಂಬ ಪಾರಿಭಾಷಿಕ ಶಬ್ದ ಬಹಳ ಪ್ರಾಚೀನ ಕಾಲದಿಂದ ಸಂಗೀತಶಾಸ್ತ್ರದಲ್ಲಿ ಬಳಕೆಯಲ್ಲಿದೆ.[2] ಅರ್ಥಸಹಿತವೂ ಅಕ್ಷರಯುತವೂ ಆದುದು ಪದ. ಇದು ನಿಬದ್ಧ

---

[1] ಬಿ. ರಜನೀಕಾಂತರಾವ್, ಆಂಧ್ರವಾಗ್ಗೇಯಕಾರ ಚರಿತ್ರಮು, ಪು. 76ರ ಉಲ್ಲೇಖ.

[2] "ಗಾಂಧರ್ವಂಯನ್ಮಯಾಪ್ರೋಕ್ತಂ ಸ್ವರತಾಳಪದಾತ್ಮಕಮ್
ಪದ್ಯಂ ತಸ್ಯಭವೇದ್ವಸ್ತು ಸ್ವರತಾಲಾನುಭಾವಕಮ್
ಯತ್ಕಿಂಚಿದಕ್ಷರಕೃತಂ ತತ್ಸರ್ವಂ ಪದ ಸಂಜ್ಞಿತಮ್
ನಿಬದ್ಧಂಚಾನಿಬದ್ಧಂಚ ತತ್ಪದಂ ದ್ವಿವಿಧಂ ಸ್ಮೃತಮ್
ಅತಾಲಂಚ ಸತಾಲಂಚ ದ್ವಿಪ್ರಕಾರಂಚ ತದ್ಭವೇತ್
ಸತಾಲಂಚ ಧ್ರುವಾರ್ಥೇಷು ನಿಬದ್ಧಂಚ ವೈಸ್ಮೃತಮ್"

—ನಾಟ್ಯಶಾಸ್ತ್ರ, 32ಅ, 25. 27 ಶ್ಲೋ.

ಮತ್ತು ಅನಿಬದ್ಧ ಎಂದು ಎರಡು ಬಗೆಯಾಗಿರುತ್ತವೆ. ಇವು ಒಂದೊಂದು ಮತ್ತೆ ಅತಾಲ, ಸತಾಲ ಎಂಬ ಎರಡು ವರ್ಗಗಳಾಗುತ್ತವೆ. ಧ್ರುವಾಗಾನದಲ್ಲಿ ಸತಾಲವೂ, ನಿಬದ್ಧವೂ ಆದ ಪದ ಬಳಕೆಯಾಗುತ್ತದೆ. ನಿಯತಾಕ್ಷರ ಸಂಬಂಧವಿರುವ, ಛಂದೋಯತಿ ಸಮನ್ವಿತವಾದ, ತಾಲ-ಪಾತಗಳಿಂದ ಕೂಡಿದ ಪದಕ್ಕೆ 'ನಿಬದ್ಧ' ಎಂದು ಹೆಸರು. ಸಂಗೀತ ಪರಿಭಾಷೆಯಲ್ಲಿ ಪದಗಳನ್ನು ಪ್ರಬಂಧ ಎನ್ನುತ್ತಾರೆ. ಪ್ರಬಂಧದಲ್ಲಿ ನಾಲ್ಕು ಭಾಗಗಳಿರುತ್ತವೆ. ಅವುಗಳಿಗೆ ಧಾತುಗಳೆಂದು ಹೆಸರು. ಉದ್ಗ್ರಾಹ, ಮೇಲಾಪಕ, ಧ್ರುವ, ಆಭೋಗ ಇವೇ ಆ ನಾಲ್ಕು ಧಾತುಗಳು. ಈ ಧಾತುಗಳ ಅಸ್ತಿತ್ವದ ಪ್ರಕಾರ ದ್ವಿಧಾತುಕ, ತ್ರಿಧಾತುಕ, ಚತುರ್ಧಾತುಕ ಎಂಬ ಮೂರು ಪ್ರಬಂಧಗಳು ಏರ್ಪಡುತ್ತವೆ. ಪದಗಳಲ್ಲಿ ಅಧ್ಯಾತ್ಮ ಮತ್ತು ಶೃಂಗಾರ ಎಂಬ ಎರಡು ಬಗೆಗಳನ್ನು ವಸ್ತುದೃಷ್ಟಿಯಿಂದ ಗುರುತಿಸಲಾಗಿದೆ. 'ಪದಕವಿತಾಪಿತಾಮಹ'ರಾದ ಅನ್ನಮಾಚಾರ್ಯರು ಸಂಸ್ಕೃತದಲ್ಲಿ ಬರೆದ 'ಸಂಕೀರ್ತನಲಕ್ಷಣ'ದಲ್ಲಿ ಸಂಕೀರ್ತನವನ್ನು ಪದವೆಂದು ಹೇಳಿ ಶೃಂಗಾರ ಮತ್ತು ವೈರಾಗ್ಯ ಪದಗಳ ವಿಭಾಗವನ್ನು ಮಾಡಿದ್ದಾರೆ. ಇದು ಚಿನತಿರುಮಲಾರ್ಯನ ತೆಲುಗು ಅನುವಾದದಿಂದ ತಿಳಿದು ಬರುತ್ತದೆ. ವೈರಾಗ್ಯಪದ "ಅಗ್ರಾಮ್ಯರಮ್ಯವಿಷ್ಣುಚರಿತೋದಾರ"ವಾಗಿರಬೇಕು. ಎಂದರೆ ಅನ್ನಮಯ್ಯನ ಪ್ರಕಾರ ವೈರಾಗ್ಯ ಪದಗಳು ಅಗ್ರಾಮ್ಯವಾಗಿಯೂ ರಮ್ಯವಾಗಿಯೂ ವಿಷ್ಣುಸಂಕೀರ್ತನೆಗಳಾಗಿಯೂ ಇರಬೇಕು. ಅನಂತರ ಕಾಲದಲ್ಲಿ ವೈರಾಗ್ಯಪದ ಅಥವಾ ದೇವರನಾಮಗಳಿಗೆ ಕೀರ್ತನೆಗಳೆಂದೂ ಶೃಂಗಾರ ಪ್ರಧಾನ ರಚನೆಗಳಿಗೆ ಪದಗಳೆಂದೂ ಹೆಸರಾಯಿತು. ತೆಲುಗಿನಲ್ಲಿ ಕ್ಷೇತ್ರಯ್ಯನ ಶೃಂಗಾರ ರಚನೆಗಳಿಗೆ 'ಪದ' ಎಂಬುದು ಪಾರಿಭಾಷಿಕ ಪದವಾಯಿತು. ಹೀಗಾಗಿ ಅನ್ನಮಯ್ಯನಿಗೆ 'ಪದಕವಿತಾಪಿತಾಮಹ'ನೆಂಬ ಬಿರುದಿದ್ದರೂ ಅವರ ರಚನೆಗಳಿಗೆ ಕೀರ್ತನೆ ಅಥವಾ ಸಂಕೀರ್ತನೆಯೆನ್ನುವುದೇ ರೂಢಿ.

### ವಾಗ್ಗೇಯಕಾರ [1]

> ವಾಙ್ಮಾತುರುಚ್ಯತೇ ಗೇಯಂ ಧಾತುರಿತ್ಯಭಿಧೀಯತೇ
> ವಾಚಂಗೇಯಂಚ ಕುರುತೇಯಃ ಸವಾಗ್ಗೇಯಕಾರಕಃ

ಹಾಡಿನಲ್ಲಿರುವ ವಾಕ್ಕುಗಳಿಗೆ 'ಮಾತು' ಎಂದು ಹೆಸರು. ಸಂಗೀತಕ್ಕೆ ಸಂಬಂಧಿಸಿದ ಜೋಡಣೆಯಾದ ಗೇಯಕ್ಕೆ 'ಧಾತು' ಎಂದು ಹೆಸರು. ವಾಕ್ಯವನ್ನು ಗೇಯ ಮಾಡುವವನು ವಾಗ್ಗೇಯಕಾರ : ಎಂದರೆ ಮಾತುಗಳಿಗೆ ಸಂಗೀತದ ಬಂಧಗಳನ್ನು ಸೇರಿಸಿ ಹಾಡು ಬರೆಯಬಲ್ಲವನು. ವಾಗ್ಗೇಯಕಾರನಿಗೆ ಮೂಲಭೂತವಾಗಿ ಇರಬೇಕಾದುದು ವಾಕ್ಶಕ್ತಿ ಮತ್ತು ಗೇಯನಿರ್ಮಾಣ ಚಾತುರ್ಯಗಳಾದರೂ ಆತನ ಘನತೆಗೆ ಬೇಕಾದ ಲಕ್ಷಣಗಳನ್ನೂ ಶಾರ್ಙ್ಗದೇವ ಹೇಳಿದ್ದಾನೆ.

1 ಇಲ್ಲಿಯ ವಾಗ್ಗೇಯಕಾರ ಲಕ್ಷಣ ಶ್ಲೋಕಗಳನ್ನು ಶಾರ್ಙ್ಗದೇವನ 'ಸಂಗೀತ ರತ್ನಾಕರ'ದ ಪ್ರಕೀರ್ಣಕ ಅಧ್ಯಾಯದಿಂದ ತೆಗೆದುಕೊಳ್ಳಲಾಗಿದೆ.

ಶಬ್ದಾನುಶಾಸನ ಜ್ಞಾನಮಭಿಧಾನ ಪ್ರವೀಣತಾ
ಛನ್ದಃ ಪ್ರಭೇದವೇದಿತ್ವಮಲಂಕಾರೇಷು ಕೌಶಲಮ್

ಸುಶಬ್ದ ಯಾವುದು, ಅಪಶಬ್ದ ಯಾವುದು ಎಂದು ತಿಳಿಯುವ ಶಬ್ದಾನುಶಾಸನ ಜ್ಞಾನ ವಾಗ್ಗೇಯಕಾರನಿಗಿರಬೇಕು. ಶಬ್ದಗಳಿಗೆ ಲೋಕಪ್ರಮಾಣದಿಂದ ಯಾವ ಅರ್ಥವಿದೆ ಎಂಬುದನ್ನು ತಿಳಿದ ಅಭಿಧಾನ ಪ್ರವೀಣತೆ ಇರಬೇಕು. ಎಲ್ಲ ರೀತಿಯ ಛಂದಸ್ಸುಗಳ ಜ್ಞಾನವೂ ವಾಗ್ಗೇಯಕಾರನಿಗೆ ಇರಬೇಕಾದ ಇನ್ನೊಂದು ಲಕ್ಷಣ. ಉಪಮಾದಿ ಅಲಂಕಾರಗಳ ಪರಿಜ್ಞಾನ ಮತ್ತು ಪ್ರಯೋಗ ಕೌಶಲ ಇರಬೇಕು.

ರಸಭಾವ ಪರಿಜ್ಞಾನಂ ದೇಶಸ್ಥಿತಿಷುಚಾತುರೀ
ಅಶೇಷ ಭಾಷಾವಿಜ್ಞಾನಂ ಕಲಾಶಾಸ್ತ್ರೇಷು ಕೌಶಲಮ್

ನವರಸಗಳು, ಸ್ಥಾಯೀಭಾವಗಳು, ವಿಭಾವಾನುಭಾವ ಸಂಚಾರೀ ಭಾವಗಳು ಮುಂತಾದ ವನ್ನು ವಾಗ್ಗೇಯಕಾರ ಚೆನ್ನಾಗಿ ತಿಳಿದುಕೊಂಡಿರಬೇಕು. ವಿವಿಧ ದೇಶ ಮತ್ತು ಜನಾಂಗಗಳ ಪರಿಚಯ, ಪಾಂಚಾಲೀ, ಗೌಡೀ, ವೈದರ್ಭೀ ಮುಂತಾದ ರೀತಿಗಳ ಪರಿಚಯವೂ ಅಗತ್ಯ. ಅನೇಕ ಭಾಷೆಗಳಲ್ಲಿ ಪಾಂಡಿತ್ಯ, ಕಲೆಗಳಲ್ಲಿ, ಶಾಸ್ತ್ರಗಳಲ್ಲಿ ಕೌಶಲ ಇರಬೇಕು. ಈ ಹಿನ್ನೆಲೆಯಿಂದ ರೂಪುಗೊಳ್ಳುವ ವಾಗ್ಗೇಯಕಾರನಿಗೆ ಸಂಗೀತ ಸಂಬಂಧ ವಾಗಿ ಇರಬೇಕಾದ ಲಕ್ಷಣಗಳನ್ನು ಶಾರ್ಙ್ಗದೇವ ಹೀಗೆ ವಿವರಿಸಿದ್ದಾನೆ :

ತೂರ್ಯತ್ರಿತಯ ಚಾತುರ್ಯಂ ಹೃದ್ಯಶಾರೀರ ಶಾಲಿತಾ
ಲಯತಾಲ ಕಲಾಜ್ಞಾನಂ ವಿವೇಕೋಽ ನೇಕ ಕಾಕುಷು

ನೃತ್ಯಗೀತವಾದ್ಯಗಳೆಂಬ ಮೂರರಲ್ಲಿ ಚಾತುರ್ಯ, ಹೃದ್ಯವಾದ ಕಂಠಶ್ರೀ, ಲಯತಾಲ ಕಲಾಜ್ಞಾನ, ವಿವಿಧ ಕಾಕುಗಳಲ್ಲಿ ವಿವೇಕ ಇರಬೇಕು.

ಪ್ರಭೂತ ಪ್ರತಿಭೋದ್ಭೇದ ಭಾವತ್ವಂ ಸುಭಗಗೇಯತಾ
ದೇಶಿರಾಗೇಷ್ವಭಿಜ್ಞಾನಂ ವಾಕ್ಪಟುತ್ವಂ ಸಭಾಜ್ಯತೇ

ನವನವೋನ್ಮೇಷಶಾಲಿನಿಯಾದ ಪ್ರತಿಭೆಯು ವಾಗ್ಗೇಯಕಾರನಿಗೆ ಅವಶ್ಯಕ. ಆತ ಒಳ್ಳೆಯ ಗಾಯಕನೂ ಆಗಿರಬೇಕೆಂದು ಹೇಳಲಾಗಿದೆ. ದೇಶಿರಾಗಗಳನ್ನು ಕುರಿತ ಜ್ಞಾನವೂ ಇರಬೇಕೆಂದು ಹೇಳಿರುವುದು ಗಮನಾರ್ಹ. ದೇಶಿರಾಗಗಳ ಪರಿಜ್ಞಾನವಿಲ್ಲದೆ ದೇಶ ಭಾಷೆಗಳಲ್ಲಿ ಕೀರ್ತನ ರಚನೆ ಕೈಗೊಳ್ಳುವುದು ಅಸಾಧ್ಯ, ವಾಕ್ಪಟುತ್ವವೂ ವಾಗ್ಗೇಯಕಾರ ನಿಗೆ ಇರಬೇಕಾದ ಒಂದು ಲಕ್ಷಣ. ರೋಷ ದ್ವೇಷಗಳನ್ನು ಬಿಟ್ಟವನು, ಆರ್ದ್ರತೆಯುಳ್ಳ ವನು, ಉಚಿತಜ್ಞನು, ಅನ್ಯರನ್ನು ಅನುಸರಿಸದವನು, ನೂತ್ನಧಾತುಗಳನ್ನು ನಿರ್ಮಿಸ ಬಲ್ಲವನು, ಪರಿಚಿತ್ತ ಪರಿಜ್ಞಾನವುಳ್ಳವನು, ಪ್ರಬಂಧಗಳಲ್ಲಿ ಪ್ರಗಲ್ಭತೆಯುಳ್ಳವನು, ಬೇಗನೆ ಗೀತಗಳನ್ನು ಬರೆಯುವ ಶಕ್ತಿಯುಳ್ಳವನು, ವಿವಿಧ ಪದಗಳನ್ನು ವಿದಗ್ಧತೆ, ಮಂದ್ರಮಧ್ಯತಾರಸ್ಥಾಯಿಗಳಲ್ಲಿ ಗಮಕಗಳನ್ನು ಪ್ರಯೋಗಿಸುವ ಪ್ರೌಢಿ, ಆಲಾಪನಾ ಪದ್ಧತಿಗಳಜ್ಞಾನ, ಅವಧಾನ ಗುಣಗಳುಳ್ಳವನು ಒಳ್ಳೆಯ ವಾಗ್ಗೇಯಕಾರನಾಗಬಲ್ಲ.

## ಕೀರ್ತನೆಯ ಸ್ವರೂಪ

ಕೀರ್ತನೆಯ 'ಮಾತು' ದೇವತಾಸ್ತುತಿ ಪರವಾಗಿರುತ್ತದೆ ; ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳಿಂದ ಕೂಡಿರುತ್ತದೆ. ಮೊದಲನೆಯ ಚರಣದ ಕೊನೆಯಭಾಗ ಅನು ಪಲ್ಲವಿಯ ಧಾತುವನ್ನು ಅನುಸರಿಸುತ್ತದೆ. ಇನ್ನೆರಡು ಚರಣಗಳು ಮೊದಲ ಚರಣದ ಧಾತುವನ್ನು ಅನುಸರಿಸುತ್ತವೆ. ಕೆಲವು ಕೀರ್ತನೆಗಳಲ್ಲಿ ಅನುಪಲ್ಲವಿ ಮತ್ತು ಚರಣಗಳ ಕೊನೆಯ ಭಾಗಗಳು ಮಧ್ಯಮಕಾಲದ ಆವರ್ತನಗಳಾಗಿರುತ್ತವೆ. ಅನುಪಲ್ಲವಿ ಮತ್ತು ಚರಣಗಳ ಅಂತ್ಯದಲ್ಲಿ ಪಲ್ಲವಿಯನ್ನು ಹೇಳುವುದರಿಂದ ಮಾತುವಿನಲ್ಲಿ ಭಾವ ಪೂರ್ತಿ ಯಾಗುತ್ತದೆ. ಪಲ್ಲವಿ ಒಂದು ಖಂಡವಾಗಿದ್ದರೆ, ಅನುಪಲ್ಲವಿ ಎರಡು ಖಂಡಗಳಾಗಿಯೂ ಚರಣಗಳು ನಾಲ್ಕು ಖಂಡಗಳಾಗಿಯೂ ಇರುತ್ತವೆ. ಪಲ್ಲವಿ ಎರಡು ಖಂಡಗಳಾಗಿದ್ದರೆ ಉಳಿದವು ಅದಕ್ಕೆ ಇಮ್ಮಡಿಯಾಗಿರುತ್ತವೆ.

ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ಪಲ್ಲವಿ ಎರಡು ಖಂಡಗಳಾಗಿರುತ್ತದೆ. ಅನುಪಲ್ಲವಿ ಎಂಬುದು ಬೇರೆ ಇಲ್ಲದೆ ನಾಲ್ಕು ಪಾದಗಳುಳ್ಳ ಮೂರು ಚರಣಗಳಿರುತ್ತವೆ. ಅನ್ನಮಾಚಾರ್ಯರ ಕೀರ್ತನ ರಚನೆಗೆ ನಿಜಗುಣ ಶಿವಯೋಗಿ, ಶ್ರೀಪಾದರಾಯ ಮುಂತಾದವರಿಂದ ಸ್ಫೂರ್ತಿ ದೊರಕಿರಬಹುದೆಂದು ಭಾವಿಸಲಾಗಿದೆ. 'ಗೀತಗೋವಿಂದ' ಕರ್ತನಾದ ಜಯದೇವನೂ (12ನೆಯ ಶತಮಾನ) ಮಾರ್ಗದರ್ಶಕನಾಗಿರಬಹುದೆಂದು ಕಾಣುತ್ತದೆ. ಜಯದೇವನ ಅಷ್ಟಪದಿಗಳಲ್ಲಿ ಮೊದಲ ಉದ್ಗ್ರಾಹವೆಂಬ ಖಂಡ ಅನುಪಲ್ಲವಿಯಾಗಿ, ಧ್ರುವವೆಂಬ ಖಂಡ ಪಲ್ಲವಿಯಾಗಿ ಪರಿಣಮಿಸಿದುವೆಂದು ವಿದ್ವಾಂಸರು ಭಾವಿಸಿದ್ದಾರೆ.[1]

ಕೀರ್ತನೆಗಳಲ್ಲಿ ನಾಮಮುದ್ರೆ ಬರುವುದೊಂದು ಲಕ್ಷಣವಾಗಿ ಪರಿಣಮಿಸಿದೆ. ಇದು ಕನ್ನಡ ಮತ್ತು ತೆಲುಗು ಕೀರ್ತನೆಗಳೆರಡಕ್ಕೂ ಅನ್ವಯಿಸುತ್ತದೆ. ಅಂಕಿತವನ್ನು ಗುರುಮುಖದಿಂದ ಪಡೆಯುವ ವಿಶಿಷ್ಟ ಸಂಪ್ರದಾಯ ಹರಿದಾಸರಲ್ಲಿದೆ. ಜಯದೇವನ ಅಷ್ಟಪದಿಗಳಲ್ಲಿ ಮುದ್ರೆ ಸತೀಸಹಿತ ಸ್ವನಾಮಾಂಕಿತವಾಗಿದೆ. ತಾಳ್ಳಪಾಕ ಅನ್ನಮಾ ಚಾರ್ಯರ ಮತ್ತು ಅವರ ಕುಟುಂಬದ ಇತರ ವಾಗ್ಗೇಯಕಾರರ ರಚನೆಗಳು ವೇಂಕಟೇಶ್ವರ ನಾಮಾಂಕಿತವಾಗಿವೆ. ಕ್ಷೇತ್ರಯ್ಯನ ಕೀರ್ತನೆಗಳಲ್ಲಿ ಕೆಲವು ಕಡೆ ಪಲ್ಲವಿಯಲ್ಲೇ ಮುದ್ರೆ ಬರುವುದುಂಟು. ತ್ಯಾಗರಾಜರ ಕೃತಿಗಳು ಸ್ವನಾಮಾಂಕಿತವಾಗಿವೆ.

ಪ್ರಾಚೀನ ಕೀರ್ತನೆಗಳಲ್ಲಿ 5-6-10-15 ಚರಣಗಳಿರುವುದನ್ನು ನೋಡುತ್ತೇವೆ. ತೆಲುಗಿನಲ್ಲಿ ಕ್ಷೇತ್ರಯ್ಯನ ತನಕ ಬಹುಪಾಲು ಕೀರ್ತನೆಗಳಲ್ಲಿ ಮೂರು ಮೂರು ಚರಣ ಗಳಿರುವುದು ಕಂಡುಬರುತ್ತದೆ. ತ್ಯಾಗರಾಜರು, ದೀಕ್ಷಿತರು ಮುಂತಾದವರ ಕೆಲವು ರಚನೆಗಳಲ್ಲಿ ಒಂದೇ ಚರಣ ಇರುತ್ತದೆ. 'ರಾಯಪ್ರಬಂಧ', 'ಗೀತ'ವೆಂಬ ಪರಿಭಾಷೆಯ ರಚನೆಗಳಿಗಿಂತ ಕೀರ್ತನೆಗಳ ಶೈಲಿ ಕಿರಿಗಿಂಪಾದುದೆಂದು ಭಾವಿಸಲಾಗಿದೆ. ಕೀರ್ತನೆಗಳಲ್ಲಿ

[1] ಬಿ. ರಜನೀಕಾಂತರಾವ್, ಆಂಧ್ರವಾಗ್ಗೇಯಕಾರಚರಿತ್ರಮು, ಪು. 77.

ಧಾತು ಮಾತುಗಳು ಸಮಪ್ರಾಧಾನ್ಯ ಹೊಂದಿರಂತ್ತವೆ. ಕ್ಷೇತ್ರಯ್ಯನ ಕಾಲದಿಂದ ಧಾತು ಅಧಿಕವಾಗಿ ಮಾತು ವಿಲಂಬವಾಗಿ ವಿವಿಧ ವಿನ್ಯಾಸಗಳಿಂದ ಗಾನಮಾಡುವ ಪದಶೈಲಿ ಎಂಬುದೊಂದು ಏರ್ಪಟ್ಟಿತು. ತ್ಯಾಗರಾಜರ ಕಾಲದಲ್ಲಿ ವಿಲಂಬಪದಶೈಲಿ ಮಧ್ಯಮ ಕಾಲ ಸಂಗತಿಗಳಿಂದ ಕೂಡಿತ್ತು. ಕೀರ್ತನೆಯು ಧಾತುವಿನೊಂದಿಗೆ ಸಂಗತಿಗಳಿಂದ ಕೂಡಿದ ಪ್ರಸ್ತಾರಸೇರಿ ಕೀರ್ತನೆಗೆ 'ಕೃತಿ'ಯೆಂಬ ಪರಿಭಾಷೆ ಉಂಟಾಯಿತು.

ದೇವರನಾಮವನ್ನು 'ಅನಂತಾನಂತ' ಎಂದು ಮತ್ತೆ ಮತ್ತೆ ಹಾಡುವ ಸಂಪ್ರದಾಯದಿಂದ 'ತಾನ' ಎಂಬ ಪದವೇರ್ಪಟ್ಟಿತು. ಕೀರ್ತನೆಯು ಪಲ್ಲವಿಯನ್ನು ಮಾತ್ರ ತೆಗೆದುಕೊಂಡು ಪ್ರಸ್ತಾರಾನುಸಾರವಾಗಿ ತ್ರಿಕಾಲಗಳಲ್ಲಿ, ಷಟ್ಕಾಲಗಳಲ್ಲಿ ಹಾಡುವ ಸಂಪ್ರದಾಯವೂ ಉಂಟಾಯಿತು. ಹೀಗೆ ಕೀರ್ತನೆಯೆಂಬುದು ಅನೇಕ ಅವತಾರಗಳನ್ನೆತ್ತಿ ಸಂಗೀತ ಪ್ರಪಂಚವನ್ನು ಸುಸಂಪನ್ನವಾಗುವಂತೆ ಮಾಡಿತು.

## ಕನ್ನಡ ಕೀರ್ತನ ಸಾಹಿತ್ಯ

ಕನ್ನಡದ ಕೀರ್ತನ ಸಾಹಿತ್ಯ ಪುರಂದರದಾಸರ ಪೂರ್ವಕಾಲ ಮತ್ತು ಪುರಂದರ ದಾಸರ ಅನಂತರದ ಕಾಲ ಎಂಬ ಎರಡು ಪ್ರಧಾನ ವಿಭಾಗಗಳಲ್ಲಿ ಪರಿಶೀಲಿಸತಕ್ಕದ್ದು. ಶ್ರೀಪಾದರಾಜರ ಕಾಲದಿಂದ ಸ್ಪಷ್ಟರೂಪ ಪಡೆಯಿತೆನ್ನಲಾದ ಹರಿದಾಸ ಸಾಹಿತ್ಯ ಪುರಂದರದಾಸರಲ್ಲಿ ಸಂಗೀತ-ಸಾಹಿತ್ಯಸಿದ್ಧಿಯನ್ನು ಪಡೆಯಿತು. ಹದಿನಾರನೆಯ ಶತಮಾನದಿಂದೀಚಿನ ಕೀರ್ತನ ಸಾಹಿತ್ಯದ ಮೇಲೆ ಪುರಂದರದಾಸರು ತುಂಬ ಪ್ರಭಾವ ಬೀರಿದ್ದಾರೆ. ಪುರಂದರದಾಸರು ಕರ್ನಾಟಕ ಹರಿದಾಸ ಸಾಹಿತ್ಯಹಾರದ ನಾಯಕಮಣಿ.

ಕವಿರಾಜಮಾರ್ಗ ಪೂರ್ವಕಾಲದಲ್ಲೆ 'ಬೆದಂಡೆ'ಯಂಥ ಹಾಡುಗಬ್ಬಗಳು ರಚಿತ ವಾದುವು. ಲಲಿತಶೃಂಗಾರದಿಂದ ಕೂಡಿದ ಈ ಹಾಡುಗಳ ರೀತಿಯನ್ನು ಭಕ್ತಿಮಾರ್ಗಕ್ಕೆ ಬದಲಾಯಿಸಿಕೊಂಡವರು ಶಿವಶರಣರು. 12ನೆಯ ಶತಮಾನದ ಶಿವಶರಣರ ಪದಗಳೇ ಕನ್ನಡದ ಮೊದಲ ಕೀರ್ತನೆಗಳೆಂದು ಹೇಳಲಾಗಿದೆ. ವಿವಿಧ ರಾಗಗಳಲ್ಲಿ ಹಾಡಲನುವಾದ ವಚನಸಾಹಿತ್ಯ ಕನ್ನಡ ಹರಿದಾಸ ಸಾಹಿತ್ಯಕ್ಕೆ ಸ್ಫೂರ್ತಿನೀಡಿದೆ ಎನ್ನುವುದರಲ್ಲಿ ಸಂದೇಹ ವಿಲ್ಲ. ಛಂದೋಗಂಧಿಗಳಾದ ವಚನಗಳಿಂದ ಸ್ವಲ್ಪಮಟ್ಟಿಗೆ ಭಿನ್ನವಾದ ಹಾಡುಗಳನ್ನು ಸ್ವರವಚನ, ಸ್ವರಪದ ಎಂದು ವ್ಯವಹರಿಸುವ ರೂಢಿಯಾಯಿತು. ಸಕಳೇಶ ಮಾದರಸನ 'ತಂಗಾಳಿಗಲಿರುಮರನೆ, ಎನ್ನಂಗದೊಳಿರ್ಪ ಶಿವಲಿಂಗದ ಮರನೆ....' ಎಂಬ ಹಾಡೇ ಅತ್ಯಂತ ಪ್ರಾಚೀನವಾದುದೆಂದು ಹೇಳಲಾಗಿದೆ.[1] ಕೀರ್ತನೆಯ ಮೊಟ್ಟಮೊದಲ ಕೃತಿ ಯಾಗಿ ಇದನ್ನು ಗುರುತಿಸಲಾಗಿದೆ.

ಭಾಗವತಧರ್ಮ ಕನ್ನಡನಾಡಿನಲ್ಲಿ ಬಹಳ ಹಿಂದಿನಿಂದಲೂ ಇದ್ದುದನ್ನು ಅನೇಕ ವಿದ್ವಾಂಸರು ಗಮನಿಸಿದ್ದಾರೆ. "ದಾಸಸಾಹಿತ್ಯದ ಉಗಮ 9ನೆಯ ಶತಮಾನದಷ್ಟು

---

[1] ಎಲ್. ಬಸವರಾಜು, ಶಿವದಾಸಗೀತಾಂಜಲಿ, ಪು. 144.

ಹಿಂದೆಯೇ ಆಯಿತೆಂಬುದರಲ್ಲಿ ಲೇಶವಾದರೂ ಸಂಶಯವಿಲ್ಲ. ಶಾ. ಶ. 801 ಅಂದರೆ ಕ್ರಿ. ಶ. 879ರಲ್ಲಿದ್ದ ಅಚಲಾನಂದರು ಇದುವರೆಗೆ ದೊರೆತಿರುವ ಇತಿಹಾಸದಂತೆ ದಾಸ ಸಾಹಿತ್ಯ ರಚನೆಗೆ ಮೊದಲಿಗರು"[1]– ಮುಂತಾದ ಅಭಿಪ್ರಾಯಗಳು ಅಲ್ಲಲ್ಲಿ ವ್ಯಕ್ತ ವಾಗಿವೆ. ಆದರೆ ಶ್ರೀಪಾದರಾಯರ ತನಕ ಖಚಿತವಾಗಿ ದಾಸಸಾಹಿತ್ಯದ ರೂಪರೇಷೆಗಳನ್ನು ಗುರುತಿಸಲು ಸ್ಪಷ್ಟ ಆಧಾರಗಳಿಲ್ಲ.

ಕನ್ನಡ ಹರಿದಾಸಕೀರ್ತನ ಪರಂಪರೆಯ ಆದ್ಯರೆಂದು ನರಹರಿತೀರ್ಥರನ್ನು (13–14 ಶ.) ಹೆಸರಿಸಲಾಗಿದೆ. 'ಹರಿಯೇ ಇದು ಸರಿಯೆ', 'ತಿಳಕೊ ನಿನ್ನೊಳಗೆ ನೀನೆ', 'ಎಂತು ಮರುಳಾದೆ ನಾನೆಂತು ಮರುಳಾದೆ' ಮುಂತಾದ ಕೆಲವು ಕೀರ್ತನೆಗಳನ್ನು ಬರೆದ ನರಹರಿತೀರ್ಥರ ರಚನೆಗಳಲ್ಲಿ ಹರಿದಾಸದೀಕ್ಷೆಯ ಸೂಚನೆಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. "ಗುರು, ಅಂಕಿತ ಮತ್ತು ದ್ವೈತ ಸಿದ್ಧಾಂತನಿಷ್ಠೆ ಇವುಗಳು ಹರಿದಾಸ ದೀಕ್ಷೆಯ ತ್ರಿಪುಟಿಗಳೆನಿಸುತ್ತವೆ. ನರಹರಿತೀರ್ಥರ ಕವಿತೆಯಲ್ಲಿ ಇವು ಮೂರು ಇವೆ. ಅಷ್ಟೇ ಅಲ್ಲ, ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಾದ ಪಶ್ಚಾತ್ತಾಪ, ಶರಣಾಗತಿ ಮತ್ತು ವೈರಾಗ್ಯ ಭಾವಗಳು ಅವರ ಕೀರ್ತನೆಗಳಲ್ಲಿ ಅಭಿವ್ಯಕ್ತಗೊಂಡಿವೆ"[2] ಎಂಬ ಅಭಿಪ್ರಾಯವನ್ನು ಗಮನಿಸಬಹುದು.

ನರಹರಿತೀರ್ಥರಿಂದ ಶ್ರೀಪಾದರಾಜರ ತನಕ ಆದ್ಯರೆನ್ನುವ ಕೆಲವು ಕೀರ್ತನಕಾರ ರಿದ್ದರೆಂಬ ಅಭಿಪ್ರಾಯವಿದ್ದರೂ ಅದನ್ನು ಖಚಿತಪಡಿಸುವ ಬಲವಾದ ಆಧಾರಗಳಿಲ್ಲ. ಶ್ರೀಪಾದರಾಜರು (1422-1480) ಹರಿದಾಸ ಸಾಹಿತ್ಯದ ಸ್ವರ್ಣಯುಗಕ್ಕೆ ನಾಂದಿಗೀತೆ ಹಾಡಿದರು. ದೇವರ ನಾಮಗಳನ್ನು ಪೂಜಾಸಮಯದಲ್ಲಿ ಹಾಡುವ ಸಂಪ್ರದಾಯವನ್ನು ಇವರು ಬಳಕೆಗೆ ತಂದರು. ತಮಿಳುನಾಡಿನ ವೈಷ್ಣವ ದೇವಾಲಯಗಳಲ್ಲಿ ಭಕ್ತಿಪ್ರಬಂಧ ಗಳನ್ನು ಹಾಡುವ ಸಂಪ್ರದಾಯದಿಂದ ಇವರು ಪ್ರಭಾವಿತರಾದರೆಂದು ಹೇಳುತ್ತಾರೆ. ಸರಳವಾದ ಮತ್ತು ಭಾವನಿರ್ಭರವಾದ ವಿಶಿಷ್ಟ ಗೀತೆಗಳನ್ನು ಬರೆದ ಶ್ರೀಪಾದರಾಜರು ಒಂದು ಸತ್ಪರಂಪರೆಗೆ ಮಾರ್ಗದರ್ಶಕರಾದರು.

ಹರಿದಾಸಸಾಹಿತ್ಯ ಸ್ಥಿರವಾಗಿ ನೆಲೆಗೊಳ್ಳಲು ನೆರವಾದ ಮಹನೀಯರೆಂದರೆ ವ್ಯಾಸರಾಯರು (1446-1539). ಲೌಕಿಕರಿಗೆ ದೀಕ್ಷೆನೀಡುವ ಯತಿಗಳಾಗಿ ದಾಸ ಸಾಹಿತ್ಯಕ್ಕೆ ಧಾರ್ಮಿಕ ಹಿನ್ನೆಲೆಯ ಗಾಂಭೀರ್ಯವನ್ನು ಒದಗಿಸಿದವರೂ ಇವರೇ. ಶ್ರೀಪಾದರಾಯರಿಂದ ಮಧ್ವಶಾಸ್ತ್ರಸಾರವನ್ನು ಗ್ರಹಿಸಿ ಸಾಹಿತ್ಯಕ್ಕೆ ಅದನ್ನು ಅಳವಡಿಸಿದರು. 'ಶ್ರೀಕೃಷ್ಣ' ಎಂಬ ಅಂಕಿತದಲ್ಲಿ ಹಲವು ಪ್ರಕಾರದ ಕೀರ್ತನೆಗಳನ್ನು ರಚಿಸಿದರು. ಇಷ್ಟೇ ಅಲ್ಲದೆ ಸಂಸ್ಕೃತದಲ್ಲೂ ಇವರು ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಶ್ರೀಪಾದರಾಯರಿಂದ ಆರಂಭವಾದ ವೃತ್ತನಾಮ ವ್ಯಾಸರಾಯರಿಂದ ಪುಷ್ಟಿ ಪಡೆಯಿತು.

1 ಬೇಲೂರು ಕೇಶವದಾಸರು, ಶ್ರೀಹರಿದಾಸ ಸಾಹಿತ್ಯ–ಒಂದು ಅಧ್ಯಯನ, ಪು. 35.

2 ಕೊರಟ ಶ್ರೀನಿವಾಸರಾವ್, ಹರಿದಾಸ ಸಾಹಿತ್ಯ ಪರಂಪರೆ, ಪು. 23.

ಇವರ ಕಾಲದ ವ್ಯಾಸಕೂಟ ದಾಸಕೂಟಗಳು ನಾಡಿನ ಧಾರ್ಮಿಕ ಹಾಗೂ ಸಾಹಿತ್ಯ ಕ್ಷೇತ್ರಗಳಿಗೆ ಗಣನೀಯ ಸೇವೆ ಸಲ್ಲಿಸಿದವು.

ಪುರಂದರದಾಸರು ದಾಸಸಾಹಿತ್ಯಕ್ಕೆ ಮಹೋನ್ನತ ಸ್ಥಾನವನ್ನು ಗಳಿಸಿಕೊಟ್ಟವರು. ಇವರ ರಚನೆಗಳು ಗಾತ್ರದಲ್ಲಿ ಮಾತ್ರವಲ್ಲದೆ ಗುಣದಲ್ಲೂ ಉನ್ನತವಾಗಿದೆ. ಧರ್ಮ ಮತ್ತು ಸಮಾಜಗಳ ಅನಿವಾರ್ಯ ಸಂಬಂಧವನ್ನು ಗುರುತಿಸಿ ಜನಪ್ರಜ್ಞೆಯನ್ನು ಬೆಳೆಸಿಕೊಂಡ ಬಸವಣ್ಣನವರಿಗೂ ಪುರಂದರದಾಸರಿಗೂ ಹೋಲಿಕೆಯಿದೆ. ''ಇವರಿಬ್ಬರೂ ಒಂದೇ ಗೊಂಚಲದ ಎರಡು ಹೂಗಳು''[1] ಎಂದಿರುವ ಡಾ. ಎಂ. ಚಿದಾನಂದ ಮೂರ್ತಿಯವರ ಮಾತು ಗಮನಾರ್ಹ.

ಸಾಮಾನ್ಯ ಜನರಿಗೂ ಅರ್ಥವಾಗುವ ತಾತ್ತ್ವಿಕ ವಿಚಾರಗಳ ಜತೆಗೆ ಸಾಹಿತ್ಯ ಸೌಂದರ್ಯವನ್ನೂ ಪುರಂದರದಾಸರ ಕೀರ್ತನೆಗಳಲ್ಲಿ ನೋಡಬಹುದು. ವಾಗ್ಗೇಯ ಕಾರರಾಗಿ ಕರ್ಣಾಟಕ ಸಂಗೀತಕ್ಕೆ ಇವರು ನೀಡಿದ ಕಾಣಿಕೆ ಅಮೂಲ್ಯವಾದುದು. ವ್ಯಾಸ ರಾಯರಿಂದ ಮಧ್ವಮತದೀಕ್ಷೆಯನ್ನು ಪಡೆದು 'ಪುರಂದರವಿಠಲ' ಎಂಬ ಅಂಕಿತ ಸ್ವೀಕರಿಸಿದರು. ಇವರ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಅಪಾರವಾದ ಲೋಕಾನುಭವವನ್ನೂ ವೇದಾಂತಸಾರವನ್ನೂ ನೋಡಬಹುದು. ಮಾನವಜನ್ಮ ದೊಡ್ಡ ದೆಂದೂ ಅದನ್ನು ಹಾನಿಮಾಡಿಕೊಳ್ಳಬೇಡಿರೆಂದೂ ಪುರಂದರದಾಸರು ಬೋಧಿಸುತ್ತಾರೆ.

ಆದಿಕೇಶವನ ಅಂಕಿತದಲ್ಲಿ ಅಧ್ಯಾತ್ಮಗೀತೆಗಳನ್ನು ಬರೆದದ್ದು ಮಾತ್ರವಲ್ಲದೆ 'ಮೋಹನ ತರಂಗಿಣಿ', 'ನಳಚರಿತ್ರೆ', 'ಹರಿಭಕ್ತಿಸಾರ', 'ರಾಮಧಾನ್ಯ ಚರಿತ್ರೆ'ಯಂಥ ರಸವತ್ಕಾವ್ಯಗಳನ್ನು ಸೃಷ್ಟಿಸಿದ ಕನಕದಾಸರಿಗೆ (1509-1607) ಕನ್ನಡ ಸಾಹಿತ್ಯಚರಿತ್ರೆ ಯಲ್ಲಿ ವಿಶಿಷ್ಟ ಸ್ಥಾನವಿದೆ. ಇವರದು ಸ್ವತಂತ್ರ ಚಿತ್ತವೃತ್ತಿ. ವ್ಯಾಸರಾಯರಿಂದ ದಾಸದೀಕ್ಷೆ ಸ್ವೀಕರಿಸಿದ ಅನಂತರ ದಾಸಸಂಪ್ರದಾಯದಂತೆ ಇವರೂ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದರು. ಇವರು ಮಧ್ವಮತೀಯರೇ ಅಲ್ಲವೇ ಎಂಬ ಸಂಶಯಗಳು ವ್ಯಕ್ತ ವಾಗಿವೆ. ''ಅವರು ಯಾವ ಮತವನ್ನೂ ತಿರಸ್ಕರಿಸದೆ, ಯಾವ ದೇವರನ್ನೂ ಬಹಿಷ್ಕರಿಸದೆ, ವಿಷ್ಣು ಶಿವರಲ್ಲಿ ಭೇದವೆಣಿಸದೆ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡು, ಕಾವ್ಯಕ್ಷೇತ್ರ– ಅಧ್ಯಾತ್ಮ ಕ್ಷೇತ್ರಗಳೆರಡರಲ್ಲೂ ಸಮಾನ ಖ್ಯಾತಿಯನ್ನು ಗಳಿಸಿದ ಮಹಾನುಭಾವರು''[2] ಎಂಬ ಅಭಿಪ್ರಾಯವನ್ನು ಒಪ್ಪಬಹುದು.

ಪುರಂದರದಾಸರು ಮತ್ತು ಕನಕದಾಸರಂತೆಯೇ ವ್ಯಾಸರಾಯರ ಶಿಷ್ಯರೂ ಮಠಾಧೀಶರೂ ಆಗಿ ದಾಸಸಾಹಿತ್ಯಕ್ಕೆ ಸೇವೆಸಲ್ಲಿಸಿದ ವಾದಿರಾಜರನ್ನೂ (1480-1600) ಈ ಸಂದರ್ಭದಲ್ಲಿ ನೆನೆಯಬೇಕು. ಬಹುಮುಖ ಪ್ರತಿಭೆಯುಳ್ಳ ವಾದಿರಾಜರು ಸಂಸ್ಕೃತ ಮತ್ತು ಕನ್ನಡಗಳಲ್ಲಿ ಗ್ರಂಥರಚನೆ ಮಾಡಿದ್ದಾರೆ. ''ತಾಳುವಿಕೆಗಿಂತ ತಪವು

---

[1] 'ಉಗಾಭೋಗಗಳು ಮತ್ತು ವಚನಗಳು', ಸಂಶೋಧನ ತರಂಗ, ಪು. 41.

[2] ದೇ.ಜ.ಗೌ. ನಳಚರಿತ್ರೆ, ಪ್ರಸ್ತಾವನೆ, ಪು. 29.

ಇಲ್ಲ'' ಎಂದು ಬೋಧಿಸಿದ ಇವರು ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ.

ವ್ಯಾಸರಾಯರ ಕಾಲದಲ್ಲಿ ದಾಸಸಾಹಿತ್ಯದ ಶ್ರೇಷ್ಠ ಕೃತಿಗಳು ಹೊರಬಂದಿವೆ. ಈ ಕಾಲವನ್ನು ದಾಸಸಾಹಿತ್ಯದ ಸ್ವರ್ಣಯುಗವೆಂದು ಕರೆಯುವರು. ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ದಾಸಸಾಹಿತ್ಯವೂ ಕಳೆಗುಂದಿತು. ಪುರಂದರದಾಸರ ಕಾಲಕ್ಕೂ ವಿಜಯದಾಸರ ಕಾಲಕ್ಕೂ ನಡುವೆ ಕೀರ್ತನಸಾಹಿತ್ಯದ ಸೇತುವೆಯಂತಿರುವವರು ಮಹೀಪತಿರಾಯರು. ಕ್ರಿ. ಶ. 1564-1687 ಅವಧಿಯಲ್ಲಿ ಕೀರ್ತನಸಾಹಿತ್ಯ ಕ್ಷೇತ್ರದಲ್ಲಿ ಏನು ಕೃಷಿ ನಡೆಯಿತೆಂಬುದರ ಅರಿವು ನಮಗೆ ಆಗಿರಲಿಲ್ಲ. ಮಹೀಪತಿರಾಯರು ಮತ್ತು ಅವರ ಮಗ ಶ್ರೀಕೃಷ್ಣರಾಯರು ಈ ಅವಧಿಯಲ್ಲಿ ಸಾಕಷ್ಟು ಕೃಷಿ ಮಾಡಿರುವರೆಂಬ ಅಂಶ ತುಂಬ ಪ್ರಶಸ್ತವಾದುದು. ಯೋಗ್ಯಗುರುವಿನಿಂದ ಅಂಕಿತವನ್ನು ಸ್ವೀಕರಿಸಲಿಲ್ಲ ಎಂಬ ಕಾರಣದಿಂದ ಮಹೀಪತಿರಾಯರನ್ನು ಕೆಲವರು ದಾಸಪರಂಪರೆಗೆ ಸೇರಿಸುವುದಿಲ್ಲ. ಆದರೆ ಇವರ ದೇವರನಾಮಗಳು ತಪ್ಪದೆ ಪರಿಶೀಲಿಸಬೇಕಾದಂಥವು.

17ನೆಯ ಶತಮಾನದ ಕೊನೆಯ ಭಾಗದಿಂದ ದಾಸಸಾಹಿತ್ಯ ಸಮೃದ್ಧರ ಫಲಗಳನ್ನು ಕಂಡಿತು. ದಾಸಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದರೆಂದು ಖ್ಯಾತಿ ಪಡೆದವರು ವಿಜಯದಾಸರು (1687-1755). ವಿಜಯದಾಸರು ಭಾರತಾದ್ಯಂತ ಪ್ರವಾಸಮಾಡಿ ಅಪಾರ ಲೋಕಾನುಭವವನ್ನು ಗಳಿಸಿದರು. ಇವರು ಕಾಶಿಯಲ್ಲಿದ್ದಾಗ ಪುರಂದರದಾಸರು ಕನಸಿನಲ್ಲಿ ಪ್ರತ್ಯಕ್ಷವಾಗಿ ದೀಕ್ಷೆ ನೀಡಿದರೆಂದು ಹೇಳಲಾಗಿದೆ. ಅಂದಿನಿಂದ 'ವಿಜಯವಿಠಲ' ಅಂಕಿತದಲ್ಲಿ ಕೃತಿರಚನೆ ಮಾಡಿದರೆಂದು ತಿಳಿದುಬರುತ್ತದೆ. ಜೀವನ ಚರಿತ್ರೆಯ ಅಂಶಗಳನ್ನೊಳಗೊಂಡ ಕೀರ್ತನೆಗಳನ್ನು ಇವರು ಬರೆದಿರುವುದರಿಂದ ಅವು ಹರಿದಾಸ ಸಾಹಿತ್ಯ ಚರಿತ್ರೆಯನ್ನು ಬರೆಯುವಲ್ಲಿ ನೆರವಾಗುತ್ತದೆ. ಹರಿದಾಸ ಸಾಹಿತ್ಯ ಪರಂಪರೆಗೆ ಕಾಣಿಕೆ ನೀಡಿದವರಲ್ಲಿ ನಾಲ್ವರನ್ನು ಪರಮಪ್ರೀತಿಯಿಂದ ಭಕ್ತರು ಸ್ಮರಿಸುವುದುಂಟು. ಆ ನಾಲ್ವರಲ್ಲಿ ವಿಜಯದಾಸರೂ ಒಬ್ಬರು.[1] ಸುಳಾದಿಗಳಲ್ಲಿ ಇವರು ತೋರಿದ ಶಾಸ್ತ್ರಜ್ಞಾನ ಇವರಿಗೊಂದು ಮಹತ್ತ್ವದ ಸ್ಥಾನ ನೀಡಿದೆ. ಇವರನ್ನು ಸುಳಾದಿದಾಸರೆಂದೂ ಕರೆಯುವುದುಂಟು. ಇವರು ಪ್ರಮುಖ ಕೀರ್ತನಕಾರರಾಗಿ ಮಾತ್ರ ಉಳಿಯದೆ, ಶಿಷ್ಯ ಪರಂಪರೆಯೊಂದನ್ನು ಸೃಷ್ಟಿಸಿದ ಮಹನೀಯ ವ್ಯಕ್ತಿಯೂ ಆಗಿದ್ದಾರೆ.

ವಿಜಯದಾಸರ ಶಿಷ್ಯ ಪರಂಪರೆಯಲ್ಲಿ ಗೋಪಾಲದಾಸರು (1728-65) ಒಬ್ಬರು. ಭಕ್ತಿರಸವನ್ನು ಅತ್ಯಂತ ಶಕ್ತಿಯುತವಾಗಿ ನಿರೂಪಿಸಿದವರೆಂದು ಇವರನ್ನು ಹೊಗಳಲಾಗಿದೆ. ತಮ್ಮ ಮೂರುಜನ ಸೋದರರಿಗೂ ದಾಸದೀಕ್ಷೆಯನ್ನು ಕೊಟ್ಟು

---

1 ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ

ಜಗನ್ನಾಥದಾಸರಿಗೆ ಸ್ಫೂರ್ತಿ ನೀಡಿದರೆನ್ನಲಾಗಿದೆ. 'ಗೋಪಾಲವಿಠಲ' ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಜನಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ಮಧ್ವತತ್ತ್ವವನ್ನು ಪ್ರತಿಪಾದಿಸುವಲ್ಲಿ ಇವರು ಯಶಸ್ವಿಯಾದರು.

ಈ ಕಾಲದ ಹರಿದಾಸ ಶ್ರೇಣಿಯಲ್ಲಿ ಜಗನ್ನಾಥದಾಸರಿಗೆ ಉನ್ನತ ಸ್ಥಾನವಿದೆ. ಪುರಂದರದಾಸರು, ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರನ್ನು ದಾಸಚತುಷ್ಟಯ ಎನ್ನುತ್ತಾರೆ. ಜಗನ್ನಾಥದಾಸರ 'ಹರಿಕಥಾಮೃತಸಾರ' ಒಂದು ಮಹತ್ತ್ವದಗ್ರಂಥ. 'ಜಗನ್ನಾಥವಿಠಲ' ಎಂಬ ಅಂಕಿತದಿಂದ ಇವರು ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳನ್ನು ಬರೆದಿದ್ದಾರೆ. ಇವರ ಕೀರ್ತನೆಗಳಲ್ಲಿ ಹೆಚ್ಚಾಗಿ ಹರಿ ಗುರುಸ್ತುತಿ ಮತ್ತು ಆಧ್ಯಾತ್ಮಿಕ ಅನುಭವಗಳು ಕಂಡುಬರುತ್ತವೆ.

ವಿಜಯದಾಸರ ಶಿಷ್ಯಪರಂಪರೆಗೆ ಸೇರಿದ ಮೋಹನದಾಸರನ್ನೂ ಇಲ್ಲಿ ಹೆಸರಿಸ ಬಹುದು. 'ಮೋಹನವಿಠಲ' ಎಂಬ ಅಂಕಿತದಲ್ಲಿ ಇವರು ಸುಲಭ ಶೈಲಿಯ ಕೀರ್ತನೆ ಗಳನ್ನು ಬರೆದರು. ವಿಜಯದಾಸರ ಸಾಕುಮಗನಾಗಿದ್ದ ಇವರು ವಿಜಯದಾಸರನ್ನು ಕುರಿತು ಹಲವು ಸ್ತುತಿಪದಗಳನ್ನು ಬರೆದಿದ್ದಾರೆ. ಜನಪದಧಾಟಿಯ 217 ನುಡಿಗಳಿರುವ ಇವರ 'ಕೋಲುಹಾಡು' ಮಹತ್ತ್ವದ ರಚನೆ.

ಇದೇ ಕಾಲಕ್ಕೆ ಸೇರಿದ ಪ್ರಸನ್ನವೆಂಕಟದಾಸರು ಅನೇಕ ಕೀರ್ತನೆಗಳನ್ನು ಬರೆದದ್ದು ಮಾತ್ರವಲ್ಲದೆ ಭಾಗವತದ ದಶಮಸ್ಕಂಧದ ಪೂರ್ವಾರ್ಧವನ್ನೂ ಕನ್ನಡಕ್ಕೆ ತಂದಿದ್ದಾರೆ. ಜಗನ್ನಾಥದಾಸರ ಶಿಷ್ಯರಲ್ಲಿ ಒಬ್ಬರಾದ ಪ್ರಾಣೇಶದಾಸರು 'ಪ್ರಾಣೇಶ ವಿಠಲ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ತತ್ತ್ವಪದಗಳು ಸ್ವಲ್ಪಮಟ್ಟಿಗೆ ಕ್ಲಿಷ್ಟಭಾಷೆ ಮತ್ತು ಭಾವಗಳಿಂದ ಕೂಡಿವೆ.

ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ಮಹಿಳೆಯರ ಪಾತ್ರವನ್ನೂ ಸ್ಮರಿಸಬೇಕಾಗಿದೆ. ಗಲಗಲಿಯ ಅವ್ವನವರು 'ರಾಮೇಶ' ಎಂಬ ಮುದ್ರಿಕೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಹೆಳವನಕಟ್ಟೆ ಗಿರಿಯಮ್ಮ ಕೇವಲ ಕೀರ್ತನೆಗಳನ್ನೇ ಅಲ್ಲದೆ 'ಚಂದ್ರಹಾಸನ ಕಥೆ', 'ಉದ್ದಾಳಿಕನ ಕಥೆ' ಮುಂತಾದ ಕೃತಿಗಳನ್ನೂ ರಚಿಸಿದ್ದಾರೆ. 'ಹೆಳವನಕಟ್ಟೆ ರಂಗ' ಇವರ ಅಂಕಿತ. ಈಕೆ 'ದಾಸರದಾಸರದಾಸಿ' ಎಂದು ತನ್ನನ್ನು ಅತಿವಿನಯದಿಂದ ಕರೆದುಕೊಂಡಿದ್ದಾರೆ. ಹರಪನಹಳ್ಳಿ ಭೀಮವ್ವ ಇನ್ನೊಬ್ಬ ಪ್ರಸಿದ್ಧ ಕೀರ್ತನಕಾರ್ತಿ. 'ಭೀಮೇಶಕೃಷ್ಣ' ಈಕೆಯ ಮುದ್ರಿಕೆ. 'ಮಯ್ಯದ ಹಾಡು', 'ಸುಭದ್ರಾಕಲ್ಯಾಣ', 'ಸುಂದಾಮುಚರಿತೆ', 'ಕೃಷ್ಣದಾನವ್ರತ' ಮುಂತಾದವು ಇವರ ರಚನೆಗಳು. ಇವರಷ್ಟೇ ಜನರಲ್ಲದೆ ಇನ್ನೂ ಅನೇಕರಿಂದ ದಾಸಸಾಹಿತ್ಯ ಕೃಷಿ ನಡೆದಿದೆ. ಆದರೆ ಇಲ್ಲಿ ಪ್ರಮುಖರಾದ ಕೆಲವರನ್ನು ಮಾತ್ರ ಉಲ್ಲೇಖಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಒಂದು ಪ್ರತ್ಯೇಕವಾದ ಸ್ಥಾನವನ್ನು ಪಡೆದಿರುವ ಹಾಗೂ ಕರ್ನಾಟಕ ಸಂಗೀತಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿರುವ ಹರಿದಾಸ ಸಾಹಿತ್ಯ ಪುರಂದರದಾಸರಂಥ ಭಕ್ತಶಿಖಾಮಣಿಯನ್ನು ಭಾರತೀಯ ಸಂಸ್ಕೃತಿಗೆ ನೀಡಿದೆ.

ಭಗವಾನ್ನಾಮ ಸಂಕೀರ್ತನೆಯನ್ನು ಮಾತ್ರ ತನ್ನ ಗುರಿಯಾಗಿಟ್ಟುಕೊಳ್ಳದೆ, ಸಾಮಾಜಿಕ ನಿಷ್ಠೆಯನ್ನೂ ಈ ಸಾಹಿತ್ಯ ತೋರಿಸಿದೆ. ಮೂಲಭೂತವಾಗಿ ಮಧ್ವಮತದೀಕ್ಷೆಯನ್ನು ಹಿನ್ನೆಲೆಯಾಗಿಟ್ಟುಕೊಂಡರೂ ಭಾಗವತಧರ್ಮದ ವಿಶಾಲಮನೋಭಾವವೇ ಈ ಸಾಹಿತ್ಯದಲ್ಲಿ ಹೆಚ್ಚಾಗಿ ಕಾಣುತ್ತದೆ. ಇದರಿಂದ ದಾಸಸಾಹಿತ್ಯವನ್ನು ಕೇವಲ ಮತೀಯ ಸಾಹಿತ್ಯವೆನ್ನಲು ಸಾಧ್ಯವಿಲ್ಲ. ಸಾಮಾಜಿಕವಾಗಿ ಹಿಂದುಳಿದವರಿಗೂ ಮಹಿಳೆಯರಿಗೂ ಸಾಹಿತ್ಯ ನಿರ್ಮಾಣದ ಅವಕಾಶ ನೀಡಿರುವುದು ದಾಸಸಾಹಿತ್ಯದ ವೈಶಿಷ್ಟ್ಯ.

## ತೆಲುಗು ಕೀರ್ತನ ಸಾಹಿತ್ಯ

ತೆಲುಗು ಕೀರ್ತನ ಸಾಹಿತ್ಯಕ್ಕೂ ಭವ್ಯವಾದ ಇತಿಹಾಸವಿದೆ. ನನ್ನೆಚೋಡ (12ಶ.),[1] ಪಾಲ್ಕುರಿಕೆ ಸೋಮನಾಥ (13ಶ.)[2] ಮುಂತಾದ ತೆಲುಗು ಕವಿಗಳು ಅನೇಕ ರೀತಿಯ 'ಪದ'ಗಳನ್ನು ಹೆಸರಿಸಿರುವುದನ್ನು ನೋಡಿದರೆ ತೆಲುಗಿನ ಪದಸಾಹಿತ್ಯ ಕ್ರಿ. ಶ. ಸು. 10-11 ಶತಮಾನಗಳಿಂದಲೂ ಅಸ್ತಿತ್ವದಲ್ಲಿತ್ತೆಂಬುದು ತಿಳಿದುಬರುತ್ತದೆ. ಈ ಪದಸಾಹಿತ್ಯ ಅನ್ನಮಾಚಾರ್ಯರ ಕಾಲಕ್ಕೆ ಸ್ಪಷ್ಟರೂಪವನ್ನು ಪಡೆಯಿತು. ಅನ್ನಮಾಚಾರ್ಯರಿಂದೀಚೆಗೆ ಸಮೃದ್ಧವಾದ ಕೀರ್ತನ ಸಾಹಿತ್ಯ ಪರಂಪರೆಯನ್ನು ನೋಡುತ್ತೇವೆ.

ಕ್ರಿ. ಶ. 12-13 ಶತಮಾನಕ್ಕೆ ಸೇರಿದ ಕೃಷ್ಣಮಾಚಾರ್ಯ ತೆಲುಗಿನ ಮೊದಲ ವಾಗ್ಗೇಯಕಾರ ಎನ್ನಲಾಗಿದೆ. ಇವರ ವೈಷ್ಣವ ಭಕ್ತಿ ಸಂಕೀರ್ತನೆಗಳನ್ನು ದೇವಸ್ಥಾನಗಳಲ್ಲಿ ಹಾಡುತ್ತಿದ್ದರೆಂದು ತಿಳಿದುಬರುತ್ತದೆ. ಕೃಷ್ಣಮಾಚಾರ್ಯರಿಗಿಂತ ಮೊದಲೇ ಪದ ರಚನೆ ನಡೆಯುತ್ತಿತ್ತೆಂಬುದಕ್ಕೆ ಮೇಲೆ ಹೇಳಿದಂತೆ ಕೆಲವು ಗ್ರಂಥಸ್ಥ ಆಧಾರಗಳಿದ್ದರೂ ವಿಸ್ತೃತವಾಗಿ ಸಂಕೀರ್ತನ ಸಾಹಿತ್ಯ ಸೃಷ್ಟಿಮಾಡಿದವರಲ್ಲಿ ಇವರನ್ನೇ ಮೊದಲು ಹೇಳಬೇಕು. ಸಿಂಹಾಚಲವೆಂಬ ಆಂಧ್ರದ ಪುಣ್ಯಕ್ಷೇತ್ರದಲ್ಲಿ ನೆಲೆಸಿರುವ ನರಸಿಂಹಸ್ವಾಮಿಗೆ ಸಮರ್ಪಿತವಾಗಿರುವ ಕೃಷ್ಣಮಾಚಾರ್ಯರ ಸಂಕೀರ್ತನೆಗಳಿಗೆ ವಚನ, ಚೂರ್ಣಿಕ, ಸಂಕೀರ್ತನ ಎಂಬ ಪದವನ್ನು ಬಳಸಲಾಗಿದೆ. ಇವುಗಳಿಗೆ ರಾಗ ತಾಳ ನಿರ್ದೇಶನವಿಲ್ಲ. ತಂಬುರದ ಶ್ರುತಿಯಿಂದ ಯಾವುದಾದರೊಂದು ರಾಗದಲ್ಲಿ ಭಕ್ತಿಯಿಂದ ಹಾಡಿಕೊಳ್ಳಬಹುದಾದ ರಚನೆಗಳಿವು. ಇತ್ತೀಚೆಗೆ ಕೃಷ್ಣಮಾಚಾರ್ಯರ ರಾಮನಾಮ, ನೃಸಿಂಹನಾಮ ಎಂಬ ರಚನೆಗಳನ್ನು ಪತ್ತೆಮಾಡಲಾಗಿದೆ. 'ದೇವರನಾಮ' ಎಂಬ ಹೆಸರಿಗೆ ಹತ್ತಿರವಾಗಿರುವ ತೆಲುಗಿನ ಈ ರಾಮನಾಮ, ನೃಸಿಂಹನಾಮಗಳು 12-13 ಶತಮಾನಗಳಿಗೆ ಸೇರಿದವೆಂಬುದು ಗಮನಾರ್ಹ. ಈ ರಚನೆಗಳನ್ನು ತಾಳಕ್ಕೂ ಅಳವಡಿಸಬಹುದೆಂದು ಸಂಗೀತ ವಿದ್ವಾಂಸರು ಹೇಳುತ್ತಾರೆ.

---

[1] ಕುಮಾರಸಂಭವಮು, 3-38, 4-89, 4-112, 6-47, 48, 6-79, 9-135.

[2] ಪಂಡಿತಾರಾಧ್ಯ ಚರಿತ್ರ, ಪರ್ವತ ಪ್ರಕರಣ.

ಕೃಷ್ಣಮಾಚಾರ್ಯರ ಅನಂತರ ಹೆಸರಿಸಬೇಕಾದವರು ಏಗಂಟಿ ಲಕ್ಷ್ಮಯ್ಯ (15ಶ.). ಇವರ ತತ್ತ್ವದ ಪದಗಳು ಪ್ರಸಿದ್ಧವಾಗಿವೆ. 'ಏಗಂಟಿ' ಎಂಬ ಮುಂದ್ರಾಂಕಿತದಿಂದ ಕೂಡಿರುವ ಇವರ ಪದಗಳು ಶೈವ ಕೀರ್ತನೆಗಳಾಗಿವೆ. ಇವರು ಅನ್ನಮಾಚಾರ್ಯರಿಗೆ ಸಮಕಾಲೀನರೆಂದು ತಿಳಿದುಬಂದಿದೆ. ಏಗಂಟಿ ಅವರು ಅನ್ನಮಾಚಾರ್ಯರನ್ನು ವಾದದಲ್ಲಿ ಸೋಲಿಸಿದರೆಂದು 'ಗುರುರಾಜ ಚಾರಿತ್ರ್ಯ' (ಸಂಧಿ 13, ಪ. 80-82) ಹೇಳುತ್ತದೆ. ಈ ವಿಷಯದ ಬಗ್ಗೆ ಬೇರೆ ಏನಾದರೂ ವಾದ ವಿವಾದ ಇರಲಿ ಅನ್ನಮಾಚಾರ್ಯರಿಗೆ ಏಗಂಟಿ ಅವರು ಸಮಕಾಲೀನರೆಂಬುದಕ್ಕೆ ಇದನ್ನೇ ಒಂದು ಆಧಾರವಾಗಿ ಸ್ವೀಕರಿಸಬಹುದು. ಏಲ, ಪದ ಮತ್ತು ವಚನ ಎಂಬ ಹೆಸರಿನಲ್ಲಿ ಹಾಡುಗಳನ್ನು ರಚಿಸಿದ ಏಗಂಟಿ ಅವರು ಅನಂತರಕಾಲದ ಕೀರ್ತನಕಾರರಿಗೆ ಪ್ರೇರಣೆಯನ್ನು ನೀಡಿರಬಹುದು.

ಅನ್ನಮಾಚಾರ್ಯರ ಕುಟುಂಬವೆಲ್ಲಾ ಕವಿ ಕುಟುಂಬ. ತಾಳ್ಳಪಾಕ ಅನ್ನಮಾಚಾರ್ಯರು ಬರೆದ 32,000 ಕೀರ್ತನೆಗಳಲ್ಲಿ ಈಗ ಲಭ್ಯವಾಗಿರುವ 12,000 ಸಂಕೀರ್ತನೆಗಳು ಇವರ ಕಾವ್ಯಸತ್ತ್ವವನ್ನು, ಸಂಗೀತಜ್ಞಾನವನ್ನು ತಿಳಿಸುತ್ತವೆ. ಕರ್ಣಾಟಕ ಸಂಗೀತದಲ್ಲಿ ಇವರದು ದೊಡ್ಡ ಹೆಸರು. ಶ್ರೀಪಾದರಾಯ, ವಾಗ್ಗೇಯಕಾರರಿಗೆ ಮಾರ್ಗದರ್ಶಕರು. ಜೀವನವೆಲ್ಲಾ ವೆಂಕಟರಮಣನ ಸೇವೆಗೆ ಮೀಸಲಿಟ್ಟ ಅನ್ನಮಾಚಾರ್ಯರು ಶೃಂಗಾರ ಸಂಕೀರ್ತನೆಗಳು, ಅಧ್ಯಾತ್ಮ ಸಂಕೀರ್ತನೆಗಳು, ವೈರಾಗ್ಯ ಸಂಕೀರ್ತನೆಗಳನ್ನು ರಚಿಸಿದರು. ಇವರು "ಆಡಿದಮಾತೆಲ್ಲ ಅಮೃತ ಕಾವ್ಯವಾಯಿತು; ಹಾಡಿದ ಹಾಡೆಲ್ಲ ಪರಮಗಾನವಾಯಿತು." ಇವರ ಸಂಕೀರ್ತನ ಸೃಷ್ಟಿ ಸುಮಾರು 70 ವರ್ಷಗಳ ಕಾಲ ನಡೆಯಿತು. ಸಂಕೀರ್ತನಾಚಾರ್ಯರೆನಿಸಿಕೊಂಡ ಅನ್ನಮಾಚಾರ್ಯರು ಸಂಸ್ಕೃತದಲ್ಲಿ 'ಸಂಕೀರ್ತನ ಲಕ್ಷಣ'ವನ್ನು ರಚಿಸಿದರು. ಈ ಕೃತಿಯ ತೆಲುಗು ಅನುವಾದ ಮಾತ್ರ ಸಿಕ್ಕಿದೆ. ಇದರ ಕರ್ತೃ ಅನ್ನಮಯ್ಯನ ಮೊಮ್ಮಗನಾದ ಚಿನ ತಿರುಮಲಾರ್ಯ.

ಅನ್ನಮಾಚಾರ್ಯರ ಮಗ ಪೆದತಿರುಮಲಾಚಾರ್ಯರೂ ಅನೇಕ ಶೃಂಗಾರ, ಅಧ್ಯಾತ್ಮ ಸಂಕೀರ್ತನೆಗಳನ್ನು ರಚಿಸಿದರು. ಇವರ ಮಗ ಚಿನತಿರುಮಲಾಚಾರ್ಯರು ಈ ಸಂಪ್ರದಾಯವನ್ನು ಮುಂದುವರಿಸಿದರು. ಈತನ ತಮ್ಮ ಚಿನ್ನನ್ನ ಕೂಡ ಸಂಕೀರ್ತನಕಾರರೇ. ಹೀಗೆ ಅನ್ನಮಾಚಾರ್ಯರ ಕುಟುಂಬವೆಲ್ಲಾ ಆಂಧ್ರ ಸಂಕೀರ್ತನ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದೆ.

1620ರಿಂದ 1680ರ ತನಕ ಜೀವಿಸಿದ್ದ ಕಂಚರ್ಲ ಗೋಪನ್ನ ಭದ್ರಾಚಲ ರಾಮದಾಸರೆಂದು ಹೆಸರು ಪಡೆದವರು. ತೆಲುಗಿನ ಭಜನಕೀರ್ತನೆಗಳಿಗೆ ಇವರಿಂದಾದ ಪ್ರಚಾರ ಅನನ್ಯವಾದುದು. ರಾಮದಾಸರ ಕೀರ್ತನೆಗಳು ಮಾತ್ರವಲ್ಲದೆ ಅವರ ಜೀವನ ಚರಿತ್ರೆಯೂ ಹರಿಕಥೆಗಳ, ಯಕ್ಷಗಾನಗಳ ಮೂಲಕ ಅತ್ಯಂತ ಪ್ರಚಾರ ಪಡೆದಿದೆ. ತೆಲುಗು ಕೀರ್ತನ ಸಾಹಿತ್ಯಕ್ಕೆ ರಾಮದಾಸರ ಕೊಡುಗೆ ಗಣನೀಯವಾದುದು. ಆನಂದ

ಭೈರವಿರಾಗವನ್ನು ಮೊದಲು ಬಳಸಿದ ವಾಗ್ಗೇಯಕಾರರು ಇವರೇ ಎಂದು ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ.[1] ಇದೇನಿದ್ದರೂ ಇವರ ಹಲವು ಪ್ರಸಿದ್ಧ ಕೀರ್ತನೆಗಳು ಆನಂದಭೈರವಿ ರಾಗದಲ್ಲೇ ಇವೆ.

"ಪಲುಕೇ ಬಂಗಾರಮಾಯೆನಾ ಕೋದಂಡಪಾಣಿ"

"ಎಟುಬೋತಿವೋ ರಾಮ ಎಟುಬೋತಿವೋ"

"ಕಲಿಯುಗ ವೈಕುಂಠಮು ಭದ್ರಾಚಲನಿಲಯಮು"

"ರಾಮುನಿವಾರಮು ಮಾಕೇಮಿ ವಿಚಾರಮು" ಮುಂತಾದವನ್ನು ಈ ಸಂದರ್ಭ ದಲ್ಲಿ ಉದಾಹರಿಸಬಹುದು. ಈ ರಾಗವನ್ನಲ್ಲದೆ ಶಂಕರಾಭರಣ, ನೀಲಾಂಬರಿ, ನಾದನಾಮಕ್ರಿಯ, ಧನ್ಯಾಸಿ, ಮುಖಾರಿ ಮುಂತಾದ ರಾಗಗಳನ್ನೂ ರಾಮದಾಸರು ಬಳಸಿದ್ದಾರೆ. ಉತ್ತರದ ರಾಗಗಳಾದ ಕಾಪಿ, ಕಾನಡ, ಬೇಗಡ ಮುಂತಾದ ರಾಗ ಗಳಲ್ಲಿಯೂ ಬರೆದಿದ್ದಾರೆ. ಭಜನಗೋಷ್ಠಿಗಳಲ್ಲಿ ಇವರ ಹಲವು ಕೀರ್ತನೆಗಳು ಬಳಕೆ ಯಾಗಿ ಆ ಮೂಲಕ ಜನಪ್ರಿಯವಾಗಿವೆ.

"ಪಲುಕೇ ಬಂಗಾರ ಮಾಯೆನಾ...."

"ಅಂತಾ ರಾಮಮಯಂ ಈ ಜಗಮಂತಾ ರಾಮಮಯಂ"

"ತಾರಕ ಮಂತ್ರಮು ಕೋರಿನ ದೊರಕೆನು"

"ಏ ತೀರುಗ ನನು ದಯಜೂಚೆದವೋ ಇನವಂಶೋತ್ತಮ ರಾಮಾ"

"ಶ್ರೀರಾಮ ನೀನಾಮ ಮೇಮಿ ರುಚಿರಾ"

"ನನುಬ್ರೋವಮನಿ ಚೆಪ್ಪವೇ ಸೀತಮ್ಮ ತಲ್ಲಿ"

"ಗೋವಿಂದ ಸುಂದರಮೋಹನ ದೀನ ಮಂದಾರ ಗರುಡವಾಹನ"

17ನೆಯ ಶತಮಾನದಲ್ಲಿ ಬಾಳಿದ ಕ್ಷೇತ್ರಯ್ಯನವರದು ಕರ್ಣಾಟಕ ಸಂಗೀತದಲ್ಲಿ ದೊಡ್ಡಹೆಸರು. ತೆಲುಗಿನ ಶೃಂಗಾರ ಸಂಕೀರ್ತನಗಳಿಗೆ ಇವರ ಕಾಲದಲ್ಲೇ 'ಪದ'ವೆಂಬ ಹೆಸರು ಪಾರಿಭಾಷಿಕ ಶಬ್ದವಾಯಿತು. ಮೊವ್ವ ಎಂಬ ಊರಿನ ವರದಯ್ಯ ಹಲವು ಕ್ಷೇತ್ರಗಳನ್ನು ಸಂದರ್ಶಿಸಿ, ಕ್ಷೇತ್ರಯ್ಯ ಆದರೆಂದು ಹೇಳುತ್ತಾರೆ. "ಕಾಮಿ ಆಗದವನು ಮೋಕ್ಷಗಾಮಿ ಆಗುವುದಿಲ್ಲ"ವೆಂಬ ಮಾತಿನಂತೆ ಮೊದಲು ಕಾಮಿಯಾಗಿದ್ದ ವರದಯ್ಯ ಅನಂತರ ಕಾಲದಲ್ಲಿ ಪರಮ ಭಾಗವತೋತ್ತಮರಾಗಿ ತನ್ನ ರಸಿಕತೆಯನ್ನು ಭಗವದ್ಭಕ್ತಿ ಯಾಗಿ ಮಾರ್ಪಡಿಸಿಕೊಂಡರು. ಕ್ಷೇತ್ರಯ್ಯನವರ ಪದಗಳಲ್ಲಿ ಭಾವಾನುಗುಣವಾದ ರಾಗ ವಿನ್ಯಾಸ, ರಾಗಾನುಗುಣವಾದ ಮಾತು ಇರುತ್ತದೆ. ಇವರು ರಚಿಸಿದ ಸಾವಿರಾರು ಪದಗಳ ಪೈಕಿ ಕೆಲವು ನೂರು ಪದಗಳು ಮಾತ್ರ ಸಿಕ್ಕಿವೆ. ಪ್ರೊ. ವಿಸ್ಸಾ ಅಪ್ಪಾರಾವ್ ಪ್ರಕಟಿಸಿದ ಕ್ಷೇತ್ರಯ್ಯನ ಪದಗಳ ಸಂಪುಟದಲ್ಲಿ 39 ರಾಗಗಳಲ್ಲಿರುವ 334 ಪದಗಳಿವೆ.

---

[1] ತೆಲುಗಿನ ಮಟ್ಟಿಗೆ ಇದು ನಿಜವಿರಬಹುದು.

ಕ್ಷೇತ್ರಯ್ಯ 18 ಕ್ಷೇತ್ರಗಳನ್ನು ಸಂದರ್ಶಿಸಿದರೆಂದು ಅವರ ಪದಗಳಿಂದ ತಿಳಿದು ಬರುತ್ತದೆ. ಇವರ ಪದಗಳಲ್ಲಿ ಕೆಳಗೆ ಹೆಸರಿಸಿರುವ ಕ್ಷೇತ್ರಾಧಿದೇವತೆಗಳಿದ್ದಾರೆ. 1. ಕಂಚಿಯ ವರದರಾಜ 2. ಯದುಗಿರಿಯ ಚೆಲುವರಾಯ 3. ತಿರುಪತಿ ವೆಂಕಟರಮಣ 4. ಶ್ರೀರಂಗದ ರಂಗನಾಥ 5. ಮಧುರೆಯ ಸುಂದರೇಶ್ವರ 6. ಚಿದಂಬರದ ಗೋವಿಂದರಾಜ 7. ತಿರುವಳ್ಳೂರಿನ ವೀರರಾಘವ. ಈ ಎಲ್ಲ ದೇವರುಗಳನ್ನೂ ಕ್ಷೇತ್ರಯ್ಯ ತನ್ನ ಇಷ್ಟದೈವವಾದ ಮುವ್ವಗೋಪಾಲನೆಂದೇ ಸಂಬೋಧಿಸಿದರು. 'ಮುವ್ವಗೋಪಾಲ' ನಾಮಾಂಕಿತದಲ್ಲಿರುವ ಕ್ಷೇತ್ರಯ್ಯ ಪದಗಳು ಅಭಿನಯಯೋಗ್ಯವಾದವು. ಇವರ ಒಂದೊಂದು ಪಲ್ಲವಿಯನ್ನೂ ಅನುಪಲ್ಲವಿಯನ್ನೂ ಅಥವಾ ಒಂದೊಂದು ಚರಣವನ್ನೂ ಬೇರೆ ಬೇರೆ ಅರ್ಥಬರುವಂತೆ 50 ರೀತಿ ಅಭಿನಯಿಸುತ್ತಾರೆ.

ಇವರ ಪದಗಳಲ್ಲಿ ಬಳಸಿದ ರಾಗಗಳಿಂದ ಆ ಕಾಲದಲ್ಲಿ ಸುಮಾರು 40 ರಾಗಗಳು ಹೆಚ್ಚು ಪ್ರಚಾರದಲ್ಲಿದ್ದುವೆಂದು ತಿಳಿದುಬರುತ್ತದೆ. ಕಾಂಭೋಜಿ, ಮುಖಾರಿ, ಭೈರವಿ, ಕಲ್ಯಾಣಿ, ಸಾವೇರಿ, ತೋಡಿ, ಕೇದಾರಗೌಳ, ಬಿಲಹರಿ, ಆನಂದಭೈರವಿ, ಮಧ್ಯಮಾವತಿ, ಶಂಕರಾಭರಣ, ಆಹಿರಿ, ಪುನ್ನಾಗವರಾಳಿ ಮುಂತಾದ ರಾಗಗಳಲ್ಲಿ ಕ್ಷೇತ್ರಯ್ಯ ಹೆಚ್ಚು ಪದಗಳನ್ನು ಬರೆದಿದ್ದಾರೆ. ಇವರು ಹೆಚ್ಚಿನ ಪದಗಳಲ್ಲಿ ಬಳಸಿರುವ ರಾಗ ಕಾಂಭೋಜಿ.

"ಇಂದಿನ ಕರ್ಣಾಟಕ ಸಂಗೀತದ ಅನೇಕ ರಾಗಗಳು ಸ್ಪಷ್ಟವಾದ ರೂಪ ತಳೆದದ್ದು ಕ್ಷೇತ್ರಯ್ಯನಲ್ಲಿ" ಎಂದೂ "ಅನುಪಲ್ಲವಿಗೆ ಕ್ಷೇತ್ರಯ್ಯ ಮಾರ್ಗದರ್ಶಿ" ಎಂದೂ ಬಿ. ರಜನೀಕಾಂತರಾವ್ ಅಭಿಪ್ರಾಯಪಟ್ಟಿದ್ದಾರೆ.[1] ಈ ವಿಮರ್ಶಕರ ಅಭಿಪ್ರಾಯವನ್ನು ಕುರಿತು ರಾಳ್ಳಪಲ್ಲಿ ಅನಂತಕೃಷ್ಣಶರ್ಮರು ಹೀಗೆಂದಿದ್ದಾರೆ : "ಕ್ಷೇತ್ರಯ್ಯ ಬಳಸಿದ ರಾಗ ತಾಳಗಳೆಲ್ಲಾ ಪುರಂದರದಾಸಾದಿ ಪ್ರಾಚೀನರ ರಚನೆಗಳಲ್ಲೇ ಇವೆ. ಆ ಪದಗಳನ್ನು ಹಾಡಿದ ಹಾಗೆ ಇವನ್ನೂ ಹಾಡಬಹುದು. ನನ್ನ ಗುರುಗಳಾದ ಶ್ರೀ ಬಿಡಾರಂ ಕೃಷ್ಣಪ್ಪನವರು ದೇವರನಾಮಗಳನ್ನು ಹಾಡಿದಂತೆ ಕ್ಷೇತ್ರಯ್ಯಾದಿಗಳ ಪದಗಳನ್ನು ಅದ್ಭುತವಾಗಿ ಹಾಡುತ್ತಿದ್ದರು. ಭಕ್ತಿ ಶೃಂಗಾರ ರೂಪಭಾವಭೇದವೊಂದನ್ನು ಬಿಟ್ಟು ಹಾಡಿನ ಶೈಲಿಯಲ್ಲಿ ಯಾವ ವ್ಯತ್ಯಾಸವೂ ನಮ್ಮ ಅನುಭವಕ್ಕೆ ಬಂದಿಲ್ಲ....ಹಾಗೆಯೇ ಅನುಪಲ್ಲವಿ ಪುರಂದರದಾಸರ ಕೀರ್ತನೆಗಳಲ್ಲಿ ಹಲವೆಡೆ ಇರುತ್ತದೆ. ಇತರ ದಾಸರಲ್ಲೂ ಇದೆ. ಇಷ್ಟೇಕೆ ಅನ್ನಮಯ್ಯನ ಸಂಕೀರ್ತನೆಯಲ್ಲೂ ಇದೆ."[2] ಒಟ್ಟಿನಲ್ಲಿ ಅನ್ನಮಾಚಾರ್ಯರ ಮತ್ತು ಪುರಂದರದಾಸರ ಪರಂಪರೆಯನ್ನೇ ಕ್ಷೇತ್ರಯ್ಯ ಮುಂದುವರಿಸಿದರೆಂದು ಈ ಮಾತುಗಳಿಂದ ತಿಳಿಯುತ್ತದೆ.

---

1 ಆಂಧ್ರವಾಗ್ಗೇಯಕಾರ ಚರಿತ್ರಮು, ಪು. 210, 232

2 ಅದೇ, ಪರಿಚಯವಾಕ್ಯಗಳು, ಪು. 14.

ಕ್ಷೇತ್ರಯ್ಯನವರಿಂದ ತ್ಯಾಗಯ್ಯನವರ ತನಕ ಅನೇಕ ವಾಗ್ಗೇಯಕಾರರು ತೆಲುಗು ಕೀರ್ತನಸಾಹಿತ್ಯಸೃಷ್ಟಿಗೆ ತೊಡಗಿದ್ದರು. ಇವರಲ್ಲಿ ಪ್ರಸಿದ್ಧರು ಮುನಿಪಲ್ಲೆ ಸುಬ್ರಹ್ಮಣ್ಯ ಕವಿ(1730–80). ಇವರ ಅಧ್ಯಾತ್ಮ ರಾಮಾಯಣ ಸಂಕೀರ್ತನೆಗಳಿಗೆ ಆಂಧ್ರದಲ್ಲಿ ತುಂಬ ಪ್ರಚಾರವಿದೆ. 104 ಕೀರ್ತನೆಗಳಲ್ಲಿ ರಾಮಾಯಣ ಮೂಡಿಬಂದಿದೆ. ಇವರ ರಾಮಾಯಣದ ರಾಮ ಪರಬ್ರಹ್ಮ ಸ್ವರೂಪ, ಸೀತೆ ಆದಿಮಾಯೆ. ಭಕ್ತಿ ಮತ್ತು ವೇದಾಂತ ಪ್ರಧಾನವಾದ ಅಧ್ಯಾತ್ಮ ರಾಮಾಯಣವನ್ನು ಶೃಂಗಾರರಸಸಮನ್ವಿತವಾಗಿ ಬರೆದು ಮೃದುಮಧುರಪದಗಳಿಂದ ಈ ಕವಿ ತಮ್ಮ ಕೀರ್ತನೆಗಳನ್ನು ಜನಪ್ರಿಯ ಮಾಡಿದ್ದಾರೆ. ಇವರ ರಚನೆಗಳಲ್ಲಿ ಸುಮಾರು 58 ರಾಗಗಳು ಬಳಕೆಯಾಗಿವೆ. ಆನಂದ ಭೈರವಿ, ಧನ್ಯಾಸಿ, ಕಾಂಭೋಜಿ, ಕಾನಡ, ಶಂಕರಾಭರಣ, ನಾದನಾಮಕ್ರಿಯ, ಕಲ್ಯಾಣಿ, ಸಾರಂಗ, ದೇವಗಾಂಧಾರಿ ಮುಂತಾದ ಪ್ರಸಿದ್ಧ ರಾಗಗಳನ್ನು ಮಾತ್ರವಲ್ಲದೆ ಗುಮ್ಮ ಕಾಂಭೋಜಿ, ಹಿಂದೂಘಂಟಾ ಎಂಬ ಅಪರೂಪ ರಾಗಗಳನ್ನೂ ಸುಬ್ರಹ್ಮಣ್ಯ ಕವಿ ಬಳಸಿದ್ದಾರೆ. ಇವರು ಬಳಸಿದ ತಾಳಗಳೆಂದರೆ ತ್ರಿಪುಟ, ಆದಿ, ರೂಪಕ, ಜಂಪೆ ಮತ್ತು ಚಾಪು. ಕ್ಷೇತ್ರಯ್ಯನವರ ಪದಗಳಲ್ಲಿರುವಂತೆಯೇ ಇವರ ಕೀರ್ತನೆಗಳಲ್ಲೂ ಧಾತು ಮಾತುಗಳೆರಡಕ್ಕೂ ಪ್ರಾಧಾನ್ಯವಿದೆ.

ಕ್ರಿ. ಶ. 1600ರಿಂದ 1850ರ ಅವಧಿಯನ್ನು ಯಕ್ಷಗಾನ ಮತ್ತು ಕೀರ್ತನ ಕಾರರ ಸ್ವರ್ಣಯುಗವೆಂದು ಹೇಳಲಾಗಿದೆ. ಈ ಕಾಲದಲ್ಲಿ ಆಂಧ್ರಸಾಹಿತ್ಯ ದಕ್ಷಿಣ ದೇಶದಲ್ಲಿ ಬೆಳೆಯಿತು. ತಂಜಾವೂರು, ಮಧುರೆ, ಜಿಂಜಿ, ಮೈಸೂರು–ಇವು ತೆಲುಗು ಸಾಹಿತ್ಯ ರಚನೆಗೆ ಕೇಂದ್ರಗಳಾದವು. ತೆಲುಗು ರಾಜನಾದ ರಘುನಾಥನಾಯಕ ತಂಜಾವೂರನ್ನು ಆಳುತ್ತಿದ್ದ ಕಾಲದಲ್ಲೇ ಗೋವಿಂದದೀಕ್ಷಿತ 'ಸಂಗೀತಸುಧಾ' ಎಂಬ ಸಂಗೀತಶಾಸ್ತ್ರ ಗ್ರಂಥವನ್ನು ರಚಿಸಿದ. ಈತನ ಮಗ ವೇಂಕಟಮುಖಿ 'ಚತುರ್ದಂಡಿ ಪ್ರಕಾಶಿಕಾ' ಎಂಬ ಲಕ್ಷಣ ಗ್ರಂಥವನ್ನು ರಚಿಸಿದ. ಈ ಕಾಲದಲ್ಲೇ ರಚಿತವಾದ ನೂರಾರು ಯಕ್ಷಗಾನಗಳಲ್ಲಿ ಅಸಂಖ್ಯಾತ ಕೀರ್ತನೆಗಳಿವೆ. ಶಾಹಭೂಪಾಲ (1684–1712) ತಂಜಾವೂರನ್ನು ಆಳಿದ ಮಹಾರಾಷ್ಟ್ರ ರಾಜನಾದರೂ ತೆಲುಗಿನಲ್ಲಿ ಕೃತಿ ರಚಿಸಿದ್ದು ಮಾತ್ರವಲ್ಲದೆ, ಗಿರಿರಾಜ ಕವಿಯಂಥ ಉತ್ತಮ ವಾಗ್ಗೇಯಕಾರರಿಗೆ ಪ್ರೋತ್ಸಾಹ ನೀಡಿದ. ಗಿರಿರಾಜ ಕವಿಯ ಮೊಮ್ಮಗನೇ ತ್ಯಾಗರಾಜರು.

ಸಾರಂಗಪಾಣಿ(1680–1710) ಶೃಂಗಾರ ಪದಗಳನ್ನು ಬರೆದು ಕ್ಷೇತ್ರಯ್ಯ ನವರಂತೆ ಖ್ಯಾತರಾಗಿದ್ದಾರೆ. ಜನಪದ ಭಾಷಾಶೈಲಿಯನ್ನು ಅನುಸರಿಸಿ ಸಾರಂಗಪಾಣಿ ಬರೆದ ಕೆಲವು ಕೀರ್ತನೆಗಳು ಗಮನಾರ್ಹವಾಗಿವೆ. ವೈರಾಗ್ಯ ಮತ್ತು ನೀತಿಬೋಧೆ ಇವರ ಕೆಲವು ಪದಗಳಲ್ಲಿ ಕಂಡುಬರುತ್ತವೆ. ಸಮಕಾಲೀನ ಸಮಾಜದ ದುರಾಚಾರಗಳನ್ನು ಖಂಡಿಸಿ ಸದ್ವರ್ತನೆ ಮತ್ತು ಸದ್ಭಕ್ತಿಯನ್ನು ಪ್ರಚೋದಿಸುವ ಕೀರ್ತನೆಗಳನ್ನು ಬರೆದಿರುವುದು ಸಾರಂಗಪಾಣಿಯ ವೈಶಿಷ್ಟ್ಯ. ಕಾರ್ವೇಟಿನಗರ ಎಂಬ ಊರಿನ ವೇಣು ಗೋಪಾಲ ಈ ಕವಿಯ ಇಷ್ಟದೇವರು. ವೇಣುಗೋಪಾಲ ಅಂಕಿತವಿರುವ ಇವರ

ರಚನೆಗಳಲ್ಲಿ ಸಂಗೀತ ಮತ್ತು ನೃತ್ಯಕಲಾಜ್ಞಾನ, ಅನೇಕ ಶಾಸ್ತ್ರಗಳ ಪರಿಚಯು ಕಂಡು ಬರುತ್ತವೆ. ತೆಲುಗಿನ ನುಡಿಗಟ್ಟುಗಳನ್ನು ಅತ್ಯಂತ ಸಹಜವಾಗಿ ಬಳಸಿ ಕೀರ್ತನಸಾಹಿತ್ಯದ ಮೂಲಕ ತೆಲುಗು ಭಾಷಾ ಸಂಸ್ಕೃತಿಗಳಿಗೆ ಇವರು ನೀಡಿದ ಕೊಡುಗೆಯನ್ನು ಮರೆಯು ಮತಿಲ್ಲ. ಇವರು ಬಳಸಿದ ರಾಗಗಳಲ್ಲಿ ಆನಂದಭೈರವಿ, ಶಂಕರಾಭರಣ, ಭೈರವಿ, ಕೇದಾರಗೌಳ, ಮೋಹನ, ಪಂತುವರಾಳಿ ಹೆಚ್ಚಾಗಿವೆ. ನಾದನಾಮಕ್ರಿಯು, ಧನ್ಯಾಸಿ, ಮಧ್ಯಮಾವತಿ, ಸುರಟ, ಸೌರಾಷ್ಟ್ರ, ಸಾವೇರಿ, ಕಾಪಿ ಮುಂತಾದವು ಇವರು ಬಳಸಿದ ಇತರ ಕೆಲವು ರಾಗಗಳು.

ಕ್ರಿ. ಶ. 1750ರಿಂದ 1850ರ ಅವಧಿಯನ್ನು ಸಂಗೀತದಮಟ್ಟಿಗೆ ಪ್ರಪಂಚದಲ್ಲೇ ತುಂಬ ಮಹತ್ತ್ವದ ಕಾಲವೆಂದು ಹೇಳಲಾಗಿದೆ. ಕರ್ಣಾಟಕ ಸಂಗೀತದ ವಿಷಯು ದಲ್ಲೂ ಇದು ನಿಜ. ಶ್ಯಾಮಾಶಾಸ್ತ್ರಿ(1762–1827), ತ್ಯಾಗರಾಜರು(1767–1847) ಮತ್ತು ಮುತ್ತುಸ್ವಾಮಿದೀಕ್ಷಿತ(1776–1835) ರೆಂಬ ಸಂಗೀತತ್ರಯ ಈ ಅವಧಿ ಯಲ್ಲೇ ಬಾಳಿದವರು. ಇವರ ರಚನೆಗಳು ಪರಿಪೂರ್ಣ ರಾಗಸ್ವರೂಪದಿಂದ, ರಸಭಾವದ ಔನ್ನತ್ಯದಿಂದ, ಉದಾತ್ತ ಗುಣಗಳಿಂದ ಕೂಡಿವೆ.

ಶ್ಯಾಮಾಶಾಸ್ತ್ರಿಗಳ ಪೂರ್ವಜರು ಆಂಧ್ರದಿಂದ ತಮಿಳುನಾಡಿಗೆ ಹೋಗಿದ್ದರು. ಕಾಮಾಕ್ಷಿದೇವಿಯ ಪರಮಭಕ್ತರಾಗಿದ್ದ ಶ್ಯಾಮಾಶಾಸ್ತ್ರಿ ತಮ್ಮ ಎಲ್ಲ ಕೀರ್ತನೆಗಳನ್ನೂ ದೇವತಾಸ್ತುತ್ಯಾತ್ಮಕವಾಗಿಯೇ ರಚಿಸಿದ್ದಾರೆ. ತಂಜಾವೂರನ್ನು ಬಿಟ್ಟು ಎಲ್ಲಿಗೂ ಹೋಗದಿದ್ದ ಇವರು ಒಮ್ಮೆ ಮಾತ್ರ ಮಧುರೆಗೆಹೋಗಿ ದೇವೀನವರತ್ನಮಾಲಿಕೆಯನ್ನು ರಚಿಸಿದರಂತೆ. ಈ ಒಂಬತ್ತು ಕೃತಿಗಳಲ್ಲಿ ಪ್ರಸಿದ್ಧವಾದ ಕೆಲವು : ಸರೋಜದಳನೇತ್ರಿ (ಶಂಕರಾಭರಣ-ಆದಿ), ಮರಿವೇರೆಗತಿ (ಆನಂದಭೈರವಿ-ಚಾಪು), ಮಾಯಮ್ಮ (ಆಹಿರಿ-ಆದಿ),ಮೀನಲೋಚನಬ್ರೋವ (ಧನ್ಯಾಸಿ-ಚಾಪು).

ಶ್ಯಾಮಾಶಾಸ್ತ್ರಿ ತೆಲುಗು, ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಇವರಿಗೆ ಆನಂದಭೈರವಿಯ ಮೇಲೆ ಹೆಚ್ಚಿನ ಒಲವಿತ್ತು. ಶಂಕರಾಭರಣ, ಲಲಿತ, ಆಹಿರಿ, ಕಾಂಭೋಜಿ, ಧನ್ಯಾಸಿ, ಮಧ್ಯಮಾವತಿ, ಸಾವೇರಿ, ಕಲ್ಯಾಣಿ, ಪುನ್ನಾಗವರಾಳಿ, ತೋಡಿ, ಮಾಂಜಿ, ಯದುಕುಲಕಾಂಭೋಜಿ ಇವರು ಬಳಸಿದ ಇನ್ನು ಕೆಲವು ರಾಗಗಳು.

ಕರ್ಣಾಟಕ ಸಂಗೀತವನ್ನು ಪರಮೋನ್ನತ ಸ್ಥಿತಿಗೆ ತೆಗೆದುಕೊಂಡು ಹೋದವರು ತ್ಯಾಗರಾಜರು. ದಕ್ಷಿಣಭಾರತೀಯ ಸಂಗೀತವನ್ನು ಕುರಿತ ಅತ್ಯಲ್ಪಪರಿಚಯವಿರುವ ವರಿಗೂ ತ್ಯಾಗರಾಜರ ಪರಿಚಯವಿದ್ದೇ ಇರುತ್ತದೆ. ತಂಜಾವೂರನ್ನು ಆಳಿದ ತೆಲುಗು ನಾಯಕರಾಜರು ಮತ್ತು ಮಹಾರಾಷ್ಟ್ರದ ರಾಜರು ತೆಲುಗು ಕೀರ್ತನ ಸಾಹಿತ್ಯಕ್ಕೆ ತುಂಬ ಪ್ರೋತ್ಸಾಹ ನೀಡಿದರು. ಆಗ ಸಂಗೀತ ಸಾಹಿತ್ಯಗಳ ಹಿನ್ನೆಲೆಯು ಕಲಾತ್ಮಕ ವಾತಾವರಣ ಏರ್ಪಟ್ಟಿತ್ತು. ರಘುನಾಥ, ವಿಜಯರಾಘವ, ಶಹಾಜಿ ಮುಂತಾದವರು ಸಂಗೀತ ಮತ್ತು ಸಾಹಿತ್ಯಗಳನ್ನು ಸಮಾನವಾದ ಆಸಕ್ತಿಯಿಂದ ಪೋಷಿಸಿದರು. ಇಂಥ ವಾತಾವರಣದಲ್ಲಿ

ಅಪೂರ್ವ ಧಾತುಕಲ್ಪನಾಚಾತುರ್ಯದಿಂದ ಹೆಸರುವಾಸಿಯಾದ ತ್ಯಾಗರಾಜರು ಜನಿಸಿದರು.



ತ್ಯಾಗರಾಜರ ತಾತ ಗಿರಿರಾಜಕವಿ. ಶಹಾಜಿ ಆಸ್ಥಾನದ ವಾಗ್ಗೇಯಕಾರರಾಗಿದ್ದ ಗಿರಿರಾಜ ಕವಿಯ ಸ್ಫೂರ್ತಿ ತ್ಯಾಗರಾಜರಿಗಿತ್ತು. ವಿನಾಯಕನನ್ನು ಸ್ತುತಿಸುವ ಒಂದು ಕೀರ್ತನೆಯಲ್ಲಿ ತ್ಯಾಗರಾಜರು 'ಗಿರಿರಾಜಸುತ ತನಯಾ' ಎಂದು ಹೇಳುತ್ತಾ ತಮ್ಮ ತಾತ ನನ್ನು ಸೂಚಿಸಿದ್ದಾರೆ. ತ್ಯಾಗರಾಜರ ತಾಯಿ ಸೀತಮ್ಮ, ತಂದೆ ರಾಮಬ್ರಹ್ಮಂ. ಇದನ್ನು ಕೂಡ ಒಂದು ಕೃತಿಯಲ್ಲಿ ಸೂಚಿಸಿದ್ದಾರೆ (ಸೀತಮ್ಮ ಮಾಯಮ್ಮ ಶ್ರೀರಾಮುಡು ಮಾಕು ತಂಡ್ರಿ). ತ್ಯಾಗರಾಜರ ಕೀರ್ತನೆಗಳ ಪ್ರಭಾವದಿಂದ ತೆಲುಗರು ಸೀತಮ್ಮನನ್ನು ತಮ್ಮ ತಾಯಿಯೆಂದೂ ರಾಮಯ್ಯನನ್ನು ತಮ್ಮ ತಂದೆಯೆಂದೂ ಭಾವಿಸುತ್ತಾರೆ.

ರಾಮಭಕ್ತಿ ಸಾಮ್ರಾಜ್ಯಕ್ಕೆ ಮಕುಟವಿಲ್ಲದ ಮಹಾರಾಜರು ತ್ಯಾಗರಾಜರು. ಮನೆಯ ಪೂಜಾಮಂದಿರದಲ್ಲಿ ಸಂಗೀತದ ಮೊದಲ ಪಾಠಗಳನ್ನು ಕಲಿತ ತ್ಯಾಗರಾಜರಿಗೆ ಸೀತಮ್ಮನವರು ಜಯದೇವನ ಅಷ್ಟಪದಿಗಳನ್ನು, ಪುರಂದರದಾಸರ ದೇವರನಾಮ ಗಳನ್ನು, ಅನ್ನಮಾಚಾರ್ಯರ ಮತ್ತು ರಾಮದಾಸರ ಸಂಕೀರ್ತನೆಗಳನ್ನು ಹೇಳಿಕೊಟ್ಟ ರಂತೆ. ಅನಂತರ ಶೊಂಠಿ ವೆಂಕಟರಮಣಯ್ಯನವರೆಂಬ ಆಸ್ಥಾನ ವಿದ್ವಾಂಸರ ಬಳಿ ಸಂಗೀತ ವನ್ನು ಆಮೂಲಾಗ್ರವಾಗಿ ಅಭ್ಯಾಸ ಮಾಡಿದರು.

ಅನ್ನಮಾಚಾರ್ಯರ ಕೀರ್ತನೆ, ರಾಮದಾಸರ ಭಜನ ಕೀರ್ತನೆ, ಕ್ಷೇತ್ರಯ್ಯನ ಪದ ಎಂಬ ರೀತಿಯಲ್ಲಿ ವಿಕಾಸಹೊಂದಿದ ತೆಲುಗು ಸಂಗೀತರಚನೆ ತ್ಯಾಗರಾಜರ ಕೈಯಲ್ಲಿ 'ಕೃತಿ'ಯಾಗಿ ಸಿದ್ಧಿಯನ್ನು ಪಡೆಯಿತು. 72 ಮೇಳಕರ್ತ ರಾಗಗಳಲ್ಲಿ ಕೃತಿಗಳನ್ನು ರಚಿಸಿದ ತ್ಯಾಗರಾಜರು ಕೆಲವು ಅಪೂರ್ವ ರಾಗಗಳನ್ನು ಸೃಷ್ಟಿಸಿದ್ದಾರೆ. ಇವರ ರಾಗ ಸಂಯೋಜನೆ ಕರ್ಣಾಟಕ ಸಂಗೀತಕ್ಕೆ ಅಮೂಲ್ಯವಾದ ಕಾಣಿಕೆಯಾಯಿತು.

ತ್ಯಾಗರಾಜರ ಕೃತಿಗಳಲ್ಲಿ ಅರ್ಧದಷ್ಟು ರಾಮನನ್ನು ಕುರಿತಂಥವು. ಬಾಲಕನಕ ಮಯಚೇಲ, ಸುಜನ ಪರಿಪಾಲ, ಘನಾಘನನೀಲ, ನವಮಾಲಿಕಾಭರಣ, ರಾಜೀವನೇತ್ರ, ಜಲಧಿಗಂಭೀರ, ಅತಿಲಾವಣ್ಯ, ಯೋಗೀಂದ್ರ ಸುಹೃದ್ಭಾವಿತನಾದ ಶ್ರೀರಾಮನನ್ನು ಭಕ್ತಿಭಾವ ತುಂಬಿದ ಸರಸಹೃದಯದಿಂದ ಹಾಡಿ ಹೊಗಳಿ ತ್ಯಾಗರಾಜರು ಕೀರ್ತಿಯುತ ರಾದರು. ದೀಪಕ, ದೇವಾಮೃತವರ್ಷಿಣಿ, ಗಂಭೀರವಾಣಿ, ಗರುಡಧ್ವನಿ, ಕೋಕಿಲಧ್ವನಿ, ಮಯೂರಧ್ವನಿ, ನಭೋಮಣಿ, ವಿಜಯಶ್ರೀ ಮುಂತಾದವು ತಾಗರಾಜರು ರಚಿಸಿದ ಕೆಲವು ಅಪರೂಪದ ರಾಗಗಳಾಗಿವೆ. ಇವರು ಲಘು ವಿದ್ವಾಂಸರಲ್ಲವೆಂದೂ ಲಕ್ಷ್ಯಲಕ್ಷಣ ವೇದಿಯಾದ ಹಿರಿಯ ವಾಗ್ಗೇಯಕಾರರೆಂದೂ ತಿಳಿಯಲು ಇವರ ಘನರಾಗ ಪಂಚರತ್ನ ಕೀರ್ತನೆಗಳೇ ಸಾಕ್ಷಿ.

ಜಗದಾನಂದಕಾರಕ....ನಾಟ, ಆದಿ
ಆದಿದುಂಡುಕುಂಗಲನನ್ನೇ....ಗೌಳ, ಆದಿ
ಸಾಧಿಂಚೆನೇ ಓ ಮನಸಾ....ಆರಭಿ, ಆದಿ

ಕನಕನ ರುಚಿರಾ....ವಾರಾಳಿ, ಆದಿ

ಎಂದರೋ ಮಹಾನುಭಾವುಲು....ಶ್ರೀ, ಆದಿ

ಭಾಷಾ ಶೈಲಿಗಳ ಜಟಿಲತೆಯಿಂದಕೂಡಿ, ಅನೇಕ ಸಂಗತಿಗಳಿಂದ ವಿಸ್ತರಗೊಂಡು ವಿದ್ವಾಂಸರಿಗೆ ಗಾನಯೋಗ್ಯವಾಗಿರುವ ಪಂಚರತ್ನ ಕೀರ್ತನೆಗಳು ಅರ್ಥಗಾಂಭೀರ್ಯ ಮತ್ತು ರಸಸ್ಫೂರ್ತಿಗೆ ಉದಾಹರಣೆಗಳಾಗಿವೆ. ಲಭ್ಯವಾಗಿರುವ ತ್ಯಾಗರಾಜರ ಕೃತಿಗಳಲ್ಲಿ ಸುಮಾರು ಇನ್ನೂರು ರಾಗಗಳಿವೆ. ಇವರು ತಮ್ಮ ಕೃತಿಗಳಲ್ಲಿ ಬಹಳಮಟ್ಟಿಗೆ ತಾಳ ವೈವಿಧ್ಯವನ್ನೂ ತೋರಿದ್ದಾರೆ. ಕರ್ಣಾಟಕ ಸಂಗೀತದ ಹಿರಿಮೆಯನ್ನು ದೇಶವಿದೇಶಗಳಲ್ಲಿ ಹರಡಲು ಇವರ ಕೀರ್ತನೆಗಳು ಬಹಳಮಟ್ಟಿಗೆ ನೆರವಾದುವೆಂಬುದರಲ್ಲಿ ಸಂದೇಹವಿಲ್ಲ. ತ್ಯಾಗಯ್ಯನವರ ನಾದಸುಧಾರಸವನ್ನು ಆಸ್ವಾದಿಸದ ಕರ್ಣಾಟಕ ಸಂಗೀತ ಪ್ರಿಯರಿಲ್ಲ.

ದಕ್ಷಿಣದೇಶೀಯ ಸಂಗೀತಪ್ರಪಂಚಕ್ಕೆ ತಂಜಾವೂರು ನೀಡಿದ ಸಂಗೀತ ರತ್ನತ್ರಯದಲ್ಲಿ ಮುತ್ತುಸ್ವಾಮಿ ದೀಕ್ಷಿತರು ಮೂರನೆಯವರು. ಸಂಸ್ಕೃತ ಭಾಷಾ ಪ್ರಯೋಗದಲ್ಲಿ ಅಸಾಧಾರಣಸಾಮರ್ಥ್ಯವಿದ್ದ ದೀಕ್ಷಿತರ ಕೀರ್ತನೆಗಳಲ್ಲಿ ಅದ್ವೈತ ತತ್ತ್ವ ಅಂತರ್ಲೀನವಾಗಿರುತ್ತದೆ. ಹಲವು ಶಾಸ್ತ್ರಗಳಲ್ಲಿ ಇವರಿಗಿದ್ದ ಪಾಂಡಿತ್ಯ ಇವರ ಕೀರ್ತನೆಗಳಿಂದ ವ್ಯಕ್ತವಾಗುತ್ತದೆ. ವಿವಿಧ ಪುಣ್ಯಕ್ಷೇತ್ರಗಳಿಗೆ ಭೇಟಿನೀಡಿ ಅಲ್ಲಿಯ ದೇವತೆಗಳನ್ನು ಕುರಿತು ಕೃತಿರಚನೆ ಮಾಡಿದ್ದಾರೆ. ಕಾಶಿಗೆ ಹೋಗಿ ಐದುವರ್ಷಗಳಿದ್ದು ಹಿಂದೂಸ್ಥಾನಿ ಸಂಗೀತ ಪರಿಚಯ ಪಡೆದದ್ದರಿಂದ ದೀಕ್ಷಿತರ ಕೆಲವು ಕೃತಿಗಳ ಮೇಲೆ ಆ ಸಂಗೀತ ರೀತಿಗಳ ಪ್ರಭಾವವನ್ನು ಕಾಣುತ್ತೇವೆ. ದೀಕ್ಷಿತರು ಕೆಲವು ತೆಲುಗು ಕೀರ್ತನೆಗಳನ್ನೂ ರಚಿಸಿದ್ದಾರೆ. ಒಟ್ಟಿನಲ್ಲಿ ದೀಕ್ಷಿತರ ಕೃತಿಗಳು ಪಂಡಿತರಿಗೆ ಆಸ್ವಾದಯೋಗ್ಯವಾಗುವಂತೆ ಪಾಮರರಿಗೆ ಆಗುವುದಿಲ್ಲ.

ತ್ಯಾಗರಾಜರ ಅನಂತರ ತೆಲುಗು ಕೀರ್ತನಸಾಹಿತ್ಯ ಅತ್ಯಂತ ಜನಪ್ರಿಯವಾಗಿ, ವಿಸ್ತಾರವಾಗಿ, ವೈವಿಧ್ಯಪೂರ್ಣವಾಗಿ ಬೆಳೆಯುತ್ತಾ ಬಂದಿತು. ಅಸಂಖ್ಯಾತ ವಾಗ್ಗೇಯ ಕಾರರಿಂದ ರಚಿತವಾದ ಕೃತಿಪರಂಪರೆ ತೆಲುಗಿನ ಕೀರ್ತನಸಾಹಿತ್ಯಕ್ಕೆ ಅನುಪಮಾನ ವೈವಿಧ್ಯವನ್ನೊದಗಿಸಿತು. ಭಾಷಾತೀತವಾಗಿ ನಡೆದ ಇಂಥ ಸಂಗೀತ ಕೃತಿರಚನೆ ಜಗತ್ತಿನಲ್ಲೇ ವಿಶಿಷ್ಟವಾದುದು. ದಕ್ಷಿಣ ಭಾರತದ ಎಲ್ಲ ಪ್ರದೇಶಗಳಲ್ಲೂ ತೆಲುಗು ಕೀರ್ತನೆಗಳ ರಚನೆಯಾಯಿತೆಂಬುದು ವಿಶೇಷ ಸಂಗತಿ.

ತ್ಯಾಗರಾಜರ ಪ್ರಶಿಷ್ಯರಾದ ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರು (1845-1902) ಚಕ್ರವಾಕ, ಹುಸೇನಿ, ಸಿಂಧುಮಂದಾರಿ, ಮಲಯಮಾರುತಾದಿ ರಾಗಗಳಲ್ಲಿ ತೆಲುಗು ಕೀರ್ತನೆಗಳನ್ನು ರಚಿಸಿದ್ದಾರೆ. ಸುಬ್ಬರಾಮ ದೀಕ್ಷಿತರು (1839-1906) ತೆಲುಗು, ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದವರು. ಇವರ 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಕರ್ಣಾಟಕ ಸಂಗೀತ ಪ್ರಪಂಚದ ಮಹತ್ತ್ವ ಗ್ರಂಥ.

ತಿರುವಾಂಕೂರನ್ನು ಆಳಿದ(1829-47) ಸ್ವಾತಿ ತಿರುನಾಳ್ ಮಹಾರಾಜರು ಸಂಸ್ಕೃತಾಂಧ್ರ ಮಲಯಾಳ ಭಾಷಾ ಸಾಹಿತ್ಯಗಳಲ್ಲಿ ವಿದ್ವತ್ತು, ಸಂಗೀತದಲ್ಲಿ ಅಪಾರ

ಪಾಂಡಿತ್ಯವಿದ್ದವರು. ಇವರ 'ಸರಸಿಜನಾಭ' ಎಂಬ ಕಾಂಭೋಜಿರಾಗದ ಪದವರ್ಣ ಮತ್ತು 'ಸ್ವಾಮಿ ನಿನ್ನೇ ನಮ್ಮಿತಿರಾ' ಎಂಬ ಯದುಕುಲ ಕಾಂಭೋಜಿಯ ಪದವರ್ಣ ಪ್ರಸಿದ್ಧವಾದುವು. ಇವರ ಎಲ್ಲ ಪದಗಳು ಪದ್ಮನಾಭಸ್ವಾಮಿಯ ಅಂಕಿತದಲ್ಲಿವೆ.

ಸ್ವಾತಿ ತಿರುನಾಳರಂತೆ ಆಂಧ್ರೇತರರಾಗಿದ್ದು ತೆಲುಗು ಕೀರ್ತನ ಸಾಹಿತ್ಯಕ್ಕೆ ಮಹತ್ತ್ವದ ಕೊಡುಗೆಯನ್ನಿತ್ತ ಮಹನೀಯರು ಹಲವರಿದ್ದಾರೆ. ಮುತ್ತಯ್ಯ ಭಾಗವತಾರ್(1877–1945) ತೆಲುಗು, ಕನ್ನಡ, ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಕೃತಿರಚನೆ ಮಾಡಿದವರು. ಸಮಯಮಿಂದೇನನ್ನು ಬ್ರೋಚುಟಕು (ಬುಧಮನೋಹರಿ), ಪಶುಪತಿ ಪ್ರಿಯಸತೀ ಪಾವನೀ ನೀವೇಗತಿ(ಪಶುಪತಿ ಪ್ರಿಯ)ಮುಂತಾದ ಕೀರ್ತನೆಗಳನ್ನು ಹೊಸಹೊಸ ರಾಗಗಳಲ್ಲಿ ರಚಿಸಿದ ಪ್ರತಿಭಾವಂತರು ಇವರು. ಮೈಸೂರು ವಾಸುದೇವಾಚಾರ್ಯರು (1865-1961) ಕೂಡ ತೆಲುಗಿನಲ್ಲಿ ಅನೇಕ ಪ್ರಸಿದ್ಧ ಕೀರ್ತನೆಗಳನ್ನು ರಚಿಸಿದವರು. ವರ್ಣ, ರಾಗಮಾಲಿಕೆ, ಸ್ವರಜತಿ, ತಿಲ್ಲಾನಾ ಮುಂತಾದ ರಚನೆಗಳಿಂದ ದಕ್ಷಿಣ ಭಾರತಾದ್ಯಂತ ಪ್ರಸಿದ್ಧರಾದರು.

ಅನಂತವಾಗಿ ಹರಿದುಬರುತ್ತಿರುವ ತೆಲುಗು ಕೀರ್ತನ ವಾಹಿನಿಯಲ್ಲಿ ಅನೇಕ ಕೀರ್ತನಕಾರರು ಕಂಡುಬರುತ್ತಾರೆ. ಈ ಪರಂಪರೆಯಲ್ಲಿ ಕೃತಿರಚನೆಯಿಂದ, ಗಾನ ಮಾಧುರ್ಯದಿಂದ ತಮ್ಮದೇ ಆದ ಕೊಡುಗೆಯಿಂದ ಜಿ. ಎನ್. ಬಾಲಸುಬ್ರಮಣ್ಯಂ, ಮಂಗಳಂಪಲ್ಲಿ ಬಾಲಮುರಳೀಕೃಷ್ಣ ಮುಂತಾದವರು ಕರ್ಣಾಟಕ ಸಂಗೀತವನ್ನು ನಿತ್ಯ ನೂತನ ಕಲಾಮಾಧ್ಯಮವಾಗಿ ಮುಂದುವರಿಸುತ್ತಿದ್ದಾರೆ.

# ಪುರಂದರದಾಸರ ಜೀವನ ಮತ್ತು ಸಾಧನೆ

ಪುರಂದರದಾಸರ ಸಾಧನೆಯನ್ನು ಅವರ ಕೀರ್ತನೆಗಳ ಭಾವಗಾಂಭೀರ್ಯದಿಂದ, ವೈವಿಧ್ಯದಿಂದ, ಜನಪ್ರಿಯತೆಯಿಂದ ಅಳೆಯಬಹುದು. ಆದರೆ ಅವರ ಜೀವನದ ವಿವರಗಳನ್ನು ನಿರೂಪಿಸಲು ಸಾಕಷ್ಟು ಪ್ರಮಾಣಗಳಿಲ್ಲ. ಇದಕ್ಕೆ ಕಾರಣಗಳು ಹಲವು: ಪುರಂದರದಾಸರು ಹರಿದಾಸ ಪರಂಪರೆಯ ಆಶುಶೈಲಿಯ ಕೀರ್ತನಸಾಹಿತ್ಯವನ್ನು ನಿರ್ಮಿಸಿದವರು. ಇಂಥ ಸಾಹಿತ್ಯವನ್ನು ಸೃಷ್ಟಿ ಮಾಡಿದವರಿಗೆ ತಮ್ಮ ಬಗ್ಗೆ ಹೆಚ್ಚು ವಿವರಗಳನ್ನು ನೀಡುವ ಅವಕಾಶವಿಲ್ಲ. ಎರಡನೆಯದಾಗಿ, ಭಾರತೀಯರು ಮೂಲತಃ ಐತಿಹಾಸಿಕ ವಿಮುಖರಾಗಿ ನಡೆದು ಬಂದವರು. ಮೂರನೆಯದಾಗಿ, ಭಕ್ತಿಸಾಹಿತ್ಯ ಬಲು ಬೇಗ ಇತಿಹಾಸವನ್ನು ಐತಿಹ್ಯವಾಗಿ, ಪುರಾಣವಾಗಿ ಮಾರ್ಪಡಿಸುತ್ತದೆ.

## ಜನ್ಮಸ್ಥಳ

ಪುರಂದರದಾಸರ ಜೀವನದ ಬಗೆಗೆ ವಿಜಯದಾಸರಂಥವರು ಹೇಳಿದ ವಿಷಯಗಳಲ್ಲಿ ಸತ್ಯಾಂಶವೆಷ್ಟು ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಪುರಂದರದಾಸರು ಪುರಂದರಾಲಯಘಟ್ಟದವರೆಂಬ[1] ವಿಜಯದಾಸರ ಮಾತನ್ನು ಪರಿಶೀಲಿಸಿದ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ನೋಡಿದಾಗ ಮುಖ್ಯವಾಗಿ ಎರಡು ರೀತಿಯ ಊಹೆಗಳು ಎದ್ದು ಕಾಣುತ್ತವೆ. ಪುರಂದರದಾಸರ ಜನ್ಮಸ್ಥಳ ಪುಣೆಯ ಹತ್ತಿರದ ಪುರಂದರಗಡ ಎಂಬುದು ಒಂದು ಊಹೆಯಾದರೆ, ಅವರು ಕರ್ನಾಟಕದಲ್ಲೇ ಹುಟ್ಟಿದವರು ಎಂಬುದು ಇನ್ನೊಂದು ಊಹೆ. ಪುರಂದರದಾಸರಿಗೂ ವಿಜಯದಾಸರಿಗೂ ಇರುವ ಕಾಲದ ಅಂತರ ಸ್ಪಷ್ಟ. "ಈ ದೀರ್ಘಾವಧಿಯಲ್ಲಿ ಪುರಂದರದಾಸರ ಜೀವನದ ನೈಜ ಸಂಗತಿಗಳು ಸಾಕಷ್ಟು ಐತಿಹ್ಯವಾಗಿ ಪರಿಣಮಿಸಿರುವುದು ಸಂಭಾವ್ಯ"[2] ಎಂದು ಅನೇಕ ವಿದ್ವಾಂಸರು ಒಪ್ಪಿದರೂ ವಿಜಯದಾಸರು "ತಮ್ಮ ಕಾಲದಲ್ಲಿ ಪುರಂದರದಾಸರನ್ನು ಕುರಿತು ಪ್ರಚಲಿತವಿದ್ದ ಸಂಗತಿಗಳನ್ನೆಲ್ಲ ಸಂಗ್ರಹಿಸಿ ಅವುಗಳಿಗೆ ಒಂದು ರೂಪವನ್ನು ಕೊಟ್ಟರು"[3] ಎಂದು ನಂಬಿ ಪುರಂದರಾಲಯಘಟ್ಟಕ್ಕೂ ಪುರಂದರದಾಸರಿಗೂ ಗಂಟುಹಾಕಲಾಗಿದೆ.

---

[1] ಪುರಂದರಾಲಯ ಘಟ್ಟದೊಳು ನೀ । ನಿರುತ ಧನವನು ಗಳಿಸಲು
ಪರಮಪುರುಷನು ಮಿತ್ರನಂದದಿ । ಕರವ ನೀಡಿ ಯಾಚಿಸೇ....

[2] ಜಿ. ವರದರಾಜರಾವ್, ಪುರಂದರದಾಸರು, ಪು. 5.

[3] ಅದೇ, ಪು. 5.

ಈ ನಂಬಿಕೆ ಮುಂದುವರಿದು ಪುಣೆ ಬಳಿಯ ಪುರಂದರಗಡವೇ ಪುರಂದರಾಲಯ ಘಟ್ಟವಾಯಿತು. ''ಪುರಂದರಗಡ ಇಂದು ಮಹಾರಾಷ್ಟ್ರ ಪ್ರಾಂತದಲ್ಲಿದೆ ಎಂಬ ಕಾರಣಕ್ಕಾಗಿ ಅದು ಪುರಂದರದಾಸರಂಥ ಅಚ್ಚ ಕನ್ನಡಿಗರ ಜನ್ಮಸ್ಥಾನವಾಗಲಾರದೆಂದು ಹೇಳಲಾದೀತೇ''[1] ಎಂಬ ಪ್ರಶ್ನೆಗಳೂ ಎದ್ದವು. ಶ್ರೀ ಜಾಗೀರ್‌ದಾರ್ ''ಈಗಿನ ಮಹಾರಾಷ್ಟ್ರದಲ್ಲಿರುವ ಪುರಂದರಗಡ, ಪಂಡರಪುರ, ಕೊಲ್ಹಾಪುರ (ಕರವೀರಪುರ/ಕರವೀರಪತ್ತನ) ಇವು ಮೂಲತಃ ಕರ್ನಾಟಕದಲ್ಲಿ ಇದ್ದ ಸ್ಥಳಗಳು''[2] ಎಂದರು. ಇವರು ಸೊಲ್ಲಾಪುರ ಪಂಚಾಂಗದಲ್ಲಿ ಕೊಲ್ಹಾಪುರವನ್ನು ಕರ್ನಾಟಕವೆಂದು ಹೇಳಿರುವುದನ್ನೆ ಆಧಾರವಾಗಿ ಸ್ವೀಕರಿಸಿ ''ಪುರಂದರಗಡದಲ್ಲಿ ಪುರಂದರದಾಸರ ಕಾಲದಲ್ಲಿ ಕನ್ನಡ ಭಾಷೆಯು ಇದ್ದಿರಲಿಕ್ಕಿಲ್ಲ''[3] ಎಂಬ ಶ್ರೀ ಕಪಟರಾಳ ಕೃಷ್ಣರಾಯರ ಸಂದೇಹಗಳು ''ಹುರುಳಿಲ್ಲದವುಗಳೆಂದು ವಿನಯಪೂರ್ವಕವಾಗಿ ತಿಳಿಸಬೇಕಾಗಿದೆ'' ಎಂದಿದ್ದಾರೆ.[4]

ಕಪಟರಾಳ ಕೃಷ್ಣರಾಯರು ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಗೇರುಸೊಪ್ಪೆಗೆ (ಅಥವಾ ಕ್ಷೇಮಪುರ) ಪುರಂದರಪುರ ಎಂಬ ಹೆಸರಿತ್ತೆಂದು ಬರೆದರು.[5] ಪುರಂದರಪುರ (ಅಮರಾವತಿ)ದಂತೆ ಕಂಗೊಳಿಸುವುದೆಂದು ಹೇಳುವ ಸಂಪ್ರದಾಯವಿರುವುದರಿಂದ ಕ್ಷೇಮಪುರವೇ ಪುರಂದರಪುರ ಎನ್ನುವುದು ಸರಿಯಲ್ಲ.[6] ಇದೇನಿದ್ದರೂ ''ಹೆಸರಿನ ಸಾಮ್ಯವೊಂದಲ್ಲದೆ ಶ್ರೀ ಪುರಂದರರ ಊರು ಪುರಂದರಗಡ ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ''[7] ಎಂಬ ಪಾಂಡುರಂಗರಾವ್ ದೇಸಾಯಿ ಅವರ ಮಾತು ಗಮನಾರ್ಹವಾದುದು. ಪುರಂದರಗಡದಲ್ಲಿರುವ ಪುರಂದರೇಶ್ವರಾಲಯವೆಂಬ ಶಿವಾಲಯ 18ನೆಯ ಶತಮಾನದ್ದು. ''ಆದರೆ ಅದಕ್ಕೂ ಶ್ರೀ ಪುರಂದರರಿಗೂ ತಳಕು ಹಾಕುವುದು ಮೇಲಿನ ಕಾರಣದಿಂದ ಹಾಸ್ಯಾಸ್ಪದವಾಗಿದೆ'' ಎನ್ನುತ್ತಾರೆ ಶ್ರೀ ದೇಸಾಯಿ.[8]

ಪರಂಪರಾಗತವಾಗಿ ಪುರಂದರದಾಸರ ತಂದೆಯ ಹೆಸರು ವರದಪ್ಪನಾಯಕನೆನ್ನಲಾಗಿದೆ. ಕಂಚಿಯ ವರದರಾಜನ ಹೆಸರು ಪುರಂದರಗಡಕ್ಕೆ ಹೋಯಿತೇ ಎನ್ನುವುದೊಂದು ಅನುಮಾನ. ಪುರಂದರದಾಸರ ಹುಟ್ಟು ಹೆಸರೆನ್ನಲಾದ ಶ್ರೀನಿವಾಸನಾಯಕ ಅಥವಾ ಕೃಷ್ಣಪ್ಪನಾಯಕನೆನ್ನುವುದು ಕೂಡ ಅವರು ವಿಜಯನಗರ ಸಾಮ್ರಾಜ್ಯದಲ್ಲೇ

---

1 ಜಯತೀರ್ಥ ರಾಜಪುರೋಹಿತ, 'ಮುನ್ನುಡಿ', ನಾಯಕಶ್ರೇಷ್ಠ ಪುರಂದರದಾಸರು, ಪು.7

2 'ಪುರಂದರದಾಸರು-ಚಾರಿತ್ರಿಕ ಸಂಗತಿಗಳು', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಜೂನ್ 1984. ಪು. 9.

3 ಕರ್ನಾಟಕ ಸಂಸ್ಕೃತಿ ಸಂಶೋಧನೆ, ಪು. 282.

4 ಸೀತಾರಾಮ್ ಜಾಗೀರ್‌ದಾರ್, ಪೂರ್ವೋಕ್ತ, ಪು. 10.

5 ಕರ್ನಾಟಕ ಸಂಸ್ಕೃತಿ ಸಂಶೋಧನೆ, ಪು. 281-282.

6 ವಿವರಗಳಿಗೆ ಸೀತಾರಾಮ್ ಜಾಗೀರ್‌ದಾರರ ಪೂರ್ವೋಕ್ತ ಲೇಖನ ನೋಡಿ.

7 'ಪುರಂದರದಾಸರು' ಲೇಖನ, ಬುರ್ಲಿಬಿಂದುಮಾಧವ (ಸಂಪಾ.) 1964.

8 ಅದೇ.

ಇದ್ದಿರಬಹುದೆಂಬ ಊಹೆಗೆ ಪುಷ್ಟಿ ನೀಡುತ್ತದೆ. ಅಲ್ಲದೆ ಕರ್ಣಾಟಕ ಸಂಗೀತಕ್ಕೆ ಮಹತ್ತ್ವದ ಕೊಡುಗೆಯನ್ನಿತ್ತ ಪುರಂದರದಾಸರು ಪುರಂದರಗಡದಲ್ಲಿ ಸಂಗೀತಾಭ್ಯಾಸ ಮಾಡಲು ಅವಕಾಶ ಇತ್ತೆಂಬುದೂ ಸಂದೇಹಾಸ್ಪದವಾದುದು. ವಿಠಲನ ವಿಗ್ರಹವನ್ನು ವಿಜಯನಗರದ ಅರಸರು ಮುಸ್ಲಿಮರಿಂದ ಕಾಪಾಡಲು ತಂದಾಗ ಅದನ್ನು ಮತ್ತೆ ಪಂಢರಪುರದಲ್ಲಿ ಪ್ರತಿಷ್ಠಿಸಲು ಪುರಂದರದಾಸರೇ ನೆರವಾದರೆಂಬ ಊಹೆ[1] ಸರಿಯಾದರೆ ಶ್ರೀನಿವಾಸನಾಯಕ ಪಂಢರಪುರದ ಹತ್ತಿರದವನೆನ್ನುವುದಕ್ಕಿಂತ ಹಂಪೆಗೆ ಹತ್ತಿರದವನೆನ್ನು ವುದೇ ಸರಿಯೆನಿಸುತ್ತದೆ. "....ಯಾರೋ ಕಲ್ಪನಾ ಬಲದಿಂದ ಅವರು ಪುರಂದರ ಗಡದವರು ಎಂಬ ಸಂಗತಿಯನ್ನು ತೇಲಿಸಿ ಬಿಟ್ಟಿರಬಹುದು. ಹೆಚ್ಚು ವಿಚಾರಕ್ಕೆ ಅವಕಾಶ ವಿಲ್ಲದಂತೆ ಕೆಲವರು ಅದನ್ನು ನಂಬಿ ಅದರ ಪ್ರಚಾರವನ್ನು ಮುಂದುವರಿಸಿರಬಹುದು"[2] ಎಂಬ ಪಾಂಡುರಂಗರಾವ ದೇಸಾಯಿಯವರ ಅಭಿಪ್ರಾಯವನ್ನೇ ಸದ್ಯಕ್ಕೆ ಒಪ್ಪಿಕೊಳ್ಳ ಬಹುದು.

## ಕಾಲ

ಪುರಂದರದಾಸರ ಜನ್ಮಸ್ಥಳದಂತೆ ಅವರ ಕಾಲ ಹಾಗೂ ಜೀವನದ ವಿವಿಧ ಹಂತ ಗಳ ಬಗೆಗೂ ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಅವರ ನಿರ್ಯಾಣದ ತಿಥಿಯ ವಿಷಯದಲ್ಲಿ ಮಾತ್ರ ಒಮ್ಮತ ಕಂಡುಬರುತ್ತದೆ. 'ರಕ್ತಾಕ್ಷಿ ಸಂವತ್ಸರ ಪುಷ್ಯ ಬಹುಳ ದಶಿಶಯದಮಾವಾಸ್ಯೆ ಮಂದವಾರ' ಪುರಂದರದಾಸರು ವೈಕುಂಠಕ್ಕೆ ತೆರಳಿದರೆಂದು ಮಧ್ವಪತಿದಾಸರು ಹೇಳಿರುವುದನ್ನು ವಿದ್ವಾಂಸರು ಒಪ್ಪಿದ್ದಾರೆ. ಈ ಪುಣ್ಯತಿಥಿ 1564 ರಲ್ಲಿ ಬಂದಿತ್ತೆಂದು ಅನೇಕರು ಹೇಳಿದರಾದರೂ, ಸ್ವಾಮಿ ಕಣ್ಣುಪಿಳ್ಳೆಯವರ ಕಾಲ ಗಣನೆಯ ಪ್ರಕಾರ *(Indian Ephemeris, vol. v)* 1565ರ ಜನವರಿ 2ರಂದು ಪುರಂದರದಾಸರು ನಿಧನರಾದರೆಂದು ತಿಳಿದುಬರುತ್ತದೆ.

ಪುರಂದರದಾಸರ ಪುಣ್ಯತಿಥಿಯನ್ನೇ ಆಧಾರವಾಗಿಟ್ಟುಕೊಂಡು ಅವರ ಜನ್ಮತಿಥಿ ಯನ್ನು ಕಂಡುಹಿಡಿಯಲು ಪ್ರಯತ್ನಗಳು ನಡೆದಿವೆ. ದಾಸರು ಸುಮಾರು 85–90 ವರ್ಷಗಳ ತುಂಬು ಜೀವನ ನಡೆಸಿದರೆಂಬುದು ಕೆಲವು ಆಧಾರಗಳಿಂದ ಸ್ಪಷ್ಟವಾಗಿದೆ. "ಯಾಕೆನ್ನ ಈ ರಾಜ್ಯಕೆಳೆತಂದೆ ಹರಿಯೇ....." ಎಂಬ ಕೀರ್ತನೆಯಲ್ಲಿ "ದೇಹದಲಿ ಬಲವಿಲ್ಲ, ವಾಸಿ ಪಂಥಗಳೆಂಬ ಒಲುಮೆ ಎನಗಿಲ್ಲ....ಹರಣದಲ್ಲಿ ಹುರುಡಿಲ್ಲ ಕರಣದಲಿ ದೃಢವಿಲ್ಲ" ವೆಂದು ಹೇಳಿರುವುದರಿಂದ ಈ ಕೀರ್ತನೆಯ ಕಾಲಕ್ಕೆ ಪುರಂದರದಾಸರು 85–90 ವರ್ಷ ವಯಸ್ಸಿನವರೆಂದು ಇಟ್ಟುಕೊಳ್ಳಬಹುದು. ಇದರಿಂದ ಪುರಂದರದಾಸರ ಜನ್ಮಕಾಲ ಕ್ರಿ.ಶ. 1475–80 ಆಗಿರುತ್ತದೆ. ಕೆಲವರು ಕ್ರಿ.ಶ. 1484 ಎಂದು ಹೇಳುತ್ತಾರಾದರೂ

---

[1] ಆದ್ಯರಾಮಾಚಾರ್ಯ, ಪೂರ್ವೋಕ್ತ, ಪು. 22.

[2] 'ಶ್ರೀ ಪುರಂದರದಾಸರು' ಲೇಖನ, ಬುರ್ಲಿಬಿಂದುಮಾಧವ (ಸಂಪಾ.) 1964.

ಕ್ರಿ.ಶ.ಸಂ. 1480 ಎಂಬುದೇ ಸಮಂಜಸವೆಂದು ತೋರುತ್ತದೆ. ಸದ್ಯಕ್ಕೆ ಪುರಂದರದಾಸರ ಜೀವನಕಾಲ ಕ್ರಿ.ಶ. 1480-1565 ಎಂದಿಟ್ಟುಕೊಳ್ಳಬಹುದು.

## ಕುಟುಂಬ

ದೇಶ ಕಾಲಗಳಂತೆಯೆ ಪುರಂದರದಾಸರ ಹುಟ್ಟು ಹೆಸರು,ತಂದೆ–ತಾಯಿ ಹೆಂಡತಿ-ಮಕ್ಕಳ ಹೆಸರು ಇತ್ಯಾದಿಗಳ ವಿಷಯದಲ್ಲೂ ಮತಭೇದಗಳಿವೆ. ಪುರಂದರದಾಸರ ಹುಟ್ಟು ಹೆಸರು ಶ್ರೀನಿವಾಸನಾಯಕ ಅಥವಾ ಕೃಷ್ಣಪ್ಪನಾಯಕ ಎಂಬ ಅಭಿಪ್ರಾಯವಿದೆ. ಪುರಂದರ ಎಂಬುದೇ ಅವರ ಹೆಸರೆಂಬುದೂ ಒಂದು ಊಹೆ. ವಿಜಯದಾಸರ ಪ್ರಕಾರ ಪುರಂದರ ದಾಸರ ತಂದೆ ವರದಪ್ಪನಾಯಕನಾದರೆ, ಇನ್ನು ಕೆಲವರ ಪ್ರಕಾರ ವಿಠಲನಾಯಕ. ವರದಪ್ಪನಾಯಕನ ಮಗ ಶ್ರೀನಿವಾಸನಾಯಕನೇ ಅನಂತರ ಕಾಲದಲ್ಲಿ ಪುರಂದರದಾಸ ರೆಂಬುದು ಬಹುಜನ ಸಮ್ಮತ ಅಭಿಪ್ರಾಯವಾಗಿದೆ. ಪುರಂದರದಾಸರ ಸತಿಗೆ ಸರಸ್ವತಿ, ಲಕ್ಷ್ಮಿ, ಗೋತಮಿ ಎಂಬ ಹೆಸರುಗಳನ್ನು ಹೇಳಲಾಗಿದೆ.

ಕಮಲಾಪುರದ ಶಾಸನ (*Epigraphia Indica, vol. xxi, pp. 139 ff*) ಪುರಂದರದಾಸರಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ತಿಳಿಸುತ್ತದೆ. ಕ್ರಿ.ಶ. 1526ರ ಫೆಬ್ರುವರಿ 24ಕ್ಕೆ ಸೇರಿದ ಈ ಶಾಸನ ಶ್ರೀಕೃಷ್ಣದೇವರಾಯನ ಆಳ್ವಿಕೆಯ ಕಾಲದ್ದು. ಈ ಶಾಸನದಿಂದ ಪುರಂದರರು ವಸಿಷ್ಠಗೋತ್ರದ ಯಜುಶ್ಶಾಖೆಯವರೆಂದು ತಿಳಿದು ಬರುತ್ತದೆ. ವ್ಯಾಸತೀರ್ಥರು ಪುರಂದರದಾಸರ ಪುತ್ರರಾದ ಲಕ್ಷ್ಮಣದಾಸ, ಹೇಬಣದಾಸ ಮತ್ತು ಮಧ್ವಪದಾಸರಿಗೆ ದಾನವಾಗಿ ತಮ್ಮ ದತ್ತಿಭೂಮಿಯಲ್ಲಿ ಎರಡೆರಡು ವೃತ್ತಿ ಗಳನ್ನು ನಿಗದಿಪಡಿಸಿದರೆಂದು ಇದೇ ಶಾಸನ ತಿಳಿಸುತ್ತದೆ. ಶಾಸನದ ಖಚಿತ ಆಧಾರ ವಿರುವುದರಿಂದ ಪುರಂದರರ ಮೂವರು ಮಕ್ಕಳು ಕ್ರಿ.ಶ. 1526ರಲ್ಲಿ ಬದುಕಿದ್ದರೆಂಬುದ ರಲ್ಲಿ ಸಂದೇಹವಿಲ್ಲ. ಆದರೆ ಪುರಂದರದಾಸರಿಗೆ ಒಬ್ಬಳು ಹೆಣ್ಣುಮಗಳು ಮತ್ತು ವರದ, ಗುರುರಾಯ, ಅಭಿನವಪುರಂದರ, ಮಧ್ವಪತಿ ಎಂಬ ನಾಲ್ವರು ಗಂಡುಮಕ್ಕಳಿದ್ದರೆಂದು ಸಾಂಪ್ರದಾಯಿಕವಾಗಿ ಹೇಳಲಾಗಿದೆ (ವರದಪ್ಪನೇ ಸೋಮ, ಗುರುರಾಯ ದಿನಕರನು, ಗುರುಮಧ್ವಪತಿಯೆ ಭೃಗು, ಅಭಿನವನೆ ಜೀವ). ಈ ಹೆಸರುಗಳನ್ನು ಕೊಟ್ಟ ವಿಜಯ ದಾಸರೇ ಇನ್ನೊಂದು ಕಡೆ ಪುರಂದರದಾಸರು ತಮ್ಮ ಮಕ್ಕಳೊಂದಿಗೆ ಯಾವ ಯಾವ ಅಂಕಿತಗಳಿಂದ ಕೃತಿರಚನೆ ಮಾಡಿದರೆಂಬುದನ್ನು ಹೇಳುತ್ತಾರೆ :

> ಭವದೂರರಾಗಿ ದಾಸರು ತಮ್ಮ ಸುತರೊಡ
> ನೆ ವಿರಚಿಸಿದರು ಪುರಂದರ ವರದ ಗುರು ಅಭಿ
> ನವ ಗುರುಮಧ್ವಪತಿ ಎಂಬ ಅಂಕಿತದಿಂದ[1]

ಕಮಲಾಪುರ ಶಾಸನದಲ್ಲಿ ಉಲ್ಲೇಖಗೊಂಡಿರುವ ಹೆಸರುಗಳಲ್ಲಿ ಮಧ್ವಪತಿ ಎಂಬು

---

[1] ಡಾ. ದಿವಾಣಜಿ ಅವರಿಂದ ಉಲ್ಲಿಖಿತ, ಪ್ರಸಾದಯೋಗ, ಪು. 30.

ದೊಂದು ಮಾತ್ರ ಸರಿಹೋಗುತ್ತದೆ. ಹೇಬಣದಾಸ ಎಂಬುದು ವರದನ ಹೆಸರಿರಬಹುದೆಂದು (ಹಿರಿಯ ಅಣ್ಣ>ಹೆಬಣ್ಣ>ಹೇಬಣ್ಣ) ಶ್ರೀ ಜಾಗೀರ್‌ದಾರ್ ಊಹಿಸಿದ್ದಾರೆ.[1] ಈ ಹೆಸರುಗಳ ಸಂಖ್ಯೆ ಮತ್ತು ನಿಜವಾದ ಹೆಸರುಗಳನ್ನು ಕುರಿತ ಊಹೆಗಳು ಇನ್ನೂ ಹಾಗೆಯೇ ಉಳಿದಿವೆ. ಸದ್ಯಕ್ಕೆ ಮೂವರು ಮಕ್ಕಳು ಮತ್ತು ಅವರ ಹೆಸರುಗಳಿಗೆ ಮಾತ್ರ ಶಾಸನಸ್ಥ ಆಧಾರವಿರುವುದು ಖಚಿತ.

## ದೀಕ್ಷಾ ಸ್ವೀಕಾರಕ್ಕೆ ಮೊದಲು

ಶ್ರೀನಿವಾಸನಾಯಕ ಪುರಂದರದಾಸರಾಗುವ ಮೊದಲು ಏನಾಗಿದ್ದಿರಬಹುದೆಂಬ ವಿಚಾರ ಕೂಡ ಹಲವು ಊಹೆಗಳಿಗೆ ಆಸ್ಪದ ನೀಡಿತು. ವಿಜಯದಾಸರು ಮತ್ತು ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಒದಗಿಸಿದ ಮಾಹಿತಿಗಳಂತೆ ಶ್ರೀನಿವಾಸನಾಯಕನ ಜೀವನವನ್ನು ಸಂಕ್ಷಿಪ್ತವಾಗಿ ಹೀಗೆ ನಿರೂಪಿಸಬಹುದು :

ಶ್ರೀನಿವಾಸನಾಯಕ ಚಿನಿವಾರ ವರದಪ್ಪನ ಮಗ. ಆತ ತುಂಬ ಜಿಪುಣ, ಒಮ್ಮೆ ವಿಷ್ಣು ವಿಪ್ರವೇಷಧಾರಿಯಾಗಿ ಬಂದು ತನ್ನ ಮಗನ ಉಪನಯನಕ್ಕೆ ಹಣ ಬೇಡಿದನು. ಶ್ರೀನಿವಾಸನಾಯಕ ಆತನನ್ನು ಆರು ತಿಂಗಳು ಅಲೆಸಿ ಕೊನೆಗೆ ಸವಕಲು ನಾಣ್ಯದ ರಾಶಿಯನ್ನು ತೋರಿಸಿ ಅದರಲ್ಲಿ ಒಂದು ನಾಣ್ಯ ತೆಗೆದುಕೊಳ್ಳಲು-ಹೇಳಿದ. ಆತನಿಗೆ ಬುದ್ಧಿ ಕಲಿಸಬೇಕೆಂದುಕೊಂಡ ವಿಷ್ಣು, ಶ್ರೀನಿವಾಸನಾಯಕನ ಹೆಂಡತಿಯ ಬಳಿ ಹೋಗಿ ಮೂಗುತಿಯನ್ನು ಬೇಡಿ ಪಡೆದು ಅದನ್ನು ಶ್ರೀನಿವಾಸನಿಗೇ ಮಾರಲು ಯತ್ನಿಸಿದನು. ಅದು ತನ್ನ ಹೆಂಡತಿಯ ಮೂಗುತಿಯೆಂದು ತಿಳಿದ ಶ್ರೀನಿವಾಸ ಆಕೆಯ ಬಳಿಬಂದು ಮೂಗುತಿ ತಂದು ತೋರಿಸಬೇಕೆಂದು ಒತ್ತಾಯಿಸಿದನು. ಆಕೆ ವಿಷ ಕುಡಿದು ಸಾಯಬೇಕೆಂದು ನಿಶ್ಚಯಿಸಿದಾಗ ವಿಷದ ಬಟ್ಟಲಿನಲ್ಲೇ ಮೂಗುತಿ ಕಾಣಿಸಿತು. ಶ್ರೀನಿವಾಸ ಶ್ರೀಹರಿಯ ಬಳಿ ಪಡೆದು ಪೆಟ್ಟಿಗೆಯಲ್ಲಿಟ್ಟ ಮೂಗುತಿ ಮಾಯವಾಯಿತು. ಆಗ ಶ್ರೀನಿವಾಸನಿಗೆ ಜ್ಞಾನೋದಯವಾಯಿತು. ವಿರಾಗಿಯಾದ ಶ್ರೀನಿವಾಸನಾಯಕ ವಿಜಯನಗರಕ್ಕೆ ಬಂದು ವ್ಯಾಸತೀರ್ಥರಿಂದ ದೀಕ್ಷೆ ಸ್ವೀಕರಿಸಿದನು.

ಶ್ರೀನಿವಾಸನಾಯಕ ಜಿಪುಣನಾದ ವ್ಯಾಪಾರಿಯಾಗಿದ್ದನೆಂದು ಅನೇಕರು ಊಹಿಸಿದ್ದಾರೆ. "ಆದದೆಲ್ಲಾ ಒಳಿತೇ ಆಯಿತು...." ಎಂಬ ಕೀರ್ತನೆಯಲ್ಲಿ :

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ

---

[1] "ಪುರಂದರದಾಸರು-ಚಾರಿತ್ರಿಕ ಸಂಗತಿಗಳು", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಜೂನ್ 84, ಪು. 20.

ದಂಡಿಗೆ ಬೆತ್ತ ಹಿಡಿಸಿದಳಯ್ಯ
ಗೋಪಾಳಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು (ಭೂಪತಿಯಂತೆ-ಪಾಠಾಂ.) ಗರ್ವಿಸುತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳಬುಟ್ಟಿ ಹಿಡಿಸಿದಳಯ್ಯ
ತುಳಸೀಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
(ಅರಸನಾಗಿ ನಾಚುತಲಿದ್ದೆ ; ಅಲಸನಾಗಿ ತಿರುಗುತಲಿದ್ದೇ-ಪಾಠಾಂ.)
ಸರಸೀಜಾಕ್ಷ ಶ್ರೀ ಪುರಂದರವಿಠಲ
ತುಳಸೀಮಾಲೆ ಹಾಕಿಸಿದನು

ಎಂದಿದೆ. ಕೀರ್ತನೆಯಲ್ಲಿ ಪುರಂದರದಾಸರು ತಾವು ಭೂಪತಿಯಾಗಿದ್ದುದಕ್ಕೆ ಸೂಚನೆ ನೀಡಿದಂತಿದೆ.[1] ಇದೊಂದೇ ಕೀರ್ತನೆಯ ಆಧಾರದಿಂದ ಪುರಂದರದಾಸರು ಭೂಪತಿಯಾಗಿದ್ದರೆಂದು ಖಚಿತವಾಗಿ ಹೇಳಲಾಗದು. 'ಬಿನ್ನಹಕೆ ಬಾಯಿಲ್ಲ....' ಎಂಬ ಕೀರ್ತನೆಯಲ್ಲಿ "ನಿನ್ನ ಮರೆದೆನೊ ಸ್ವಾಮಿ ಎನ್ನ ಕಾಯಯ್ಯ" ಎನ್ನುತ್ತಾ ಪುರಂದರದಾಸರು ಅನೇಕ ರೀತಿಯ ಮದ, ಮೋಹ ಮತ್ತು ಆಸೆಗಳನ್ನು ಹೆಸರಿಸುತ್ತಾರೆ. ಅದರಲ್ಲಿ ರಾಜಮನ್ನಣೆಮೋಹ, ಕಾಣಾಚಿ ಕೊಂಬಾಸೆ ಎಂಬವನ್ನು ಪುರಂದರದಾಸರು ಅರಸರಾಗಿದ್ದರೆಂಬುದನ್ನು ಸೂಚಿಸಲು ಆಧಾರವಾಗಿ ಜಾಗೀರ್‌ದಾರ್ ಸ್ವೀಕರಿಸಿದ್ದಾರೆ.[2] ಪುರಂದರದಾಸರು ದಾಸರಾಗುವುದಕ್ಕೆ ಮುಂಚೆ ಪುರಂದರಗಡದಲ್ಲಿ ಆಳುತ್ತಿದ್ದರೆಂದರೆ ಯಾವ ತಪ್ಪನ್ನೂ ಮಾಡಿದಂತಾಗುವುದಿಲ್ಲವೆಂಬ ಜಾಗೀರ್‌ದಾರರ ಅಭಿಪ್ರಾಯಕ್ಕೆ[3] ಆಧಾರಗಳು ಸಾಲವು.

ಶ್ರೀನಿವಾಸನಾಯಕ ತನ್ನ ಊರುಬಿಟ್ಟು ತೀರ್ಥಯಾತ್ರೆಗೆ ಹೊರಡಲು ಹೆಂಡತಿಯೇ ಕಾರಣವೆಂದು ಸಂಪ್ರದಾಯ ಹೇಳುತ್ತದೆ. ಇದರಲ್ಲಿ ಶ್ರೀಹರಿಯ ಪಾತ್ರವೂ ಸಾಕಷ್ಟಿದೆ. ತನ್ನ ಹಿರಿಯ ಮಗನನ್ನು ಕಳದುಕೊಂಡದ್ದೇ ಶ್ರೀನಿವಾಸನಾಯಕನ ಸ್ಥಳ ತ್ಯಾಗಕ್ಕೂ ವೈರಾಗ್ಯಕ್ಕೂ ಕಾರಣವೆಂದು ಜಾಗೀರ್‌ದಾರ್ ಊಹಿಸಿದ್ದಾರೆ.[4] "ಹಿರಿಯ ಮಗು ರಾಜರಿಗೆ (ಅರಸರಿಗೆ) ಅತ್ಯಂತ ಮಹತ್ತ್ವದ ಜೀವ. ಅರಸರಿಗೆ ತನ್ನ ಅನಂತರ

---

[1] ಕೀರ್ತನೆಗಳ ಪಾಠದ ವಿಷಯದಲ್ಲಿ ಇದೇ ಸರಿಯೆಂದು ಹೇಳುವುದೂ ಕಷ್ಟವೆಂಬುದನ್ನು ಇಲ್ಲಿ ನೆನಪಿಡಬೇಕು.

[2] "ಪುರಂದರದಾಸರು-ಚಾರಿತ್ರಿಕ ಸಂಗತಿಗಳು", ಕನ್ನಡಸಾಹಿತ್ಯ ಪರಿಷತ್ಪತ್ರಿಕೆ, ಜೂನ್ 84 ಪು. 5.

[3] ಅದೇ, ಪು. 11.

[4] ಅದೇ, ಪು. 15.

ಪಟ್ಟಕ್ಕೆ ಬರುವ ಮಗು ಇಹಲೋಕಯಾತ್ರೆಯನ್ನು ಮುಗಿಸಿತೆಂದ ಮೇಲೆ ಉಳಿದದ್ದು ಇನ್ನೇನಿನ್ನೇನು''[1] ಎಂಬ ಅಭಿಪ್ರಾಯ ಪೂರ್ತಿಯಾಗಿ ಊಹೆಗಳನ್ನೇ ಅವಲಂಬಿಸಿದೆ.

ದೀಕ್ಷಾ ಸ್ವೀಕಾರಕ್ಕೆ ಮೊದಲೇ ಶ್ರೀನಿವಾಸನಾಯಕ ಸಂಗೀತದಲ್ಲಿ ನುರಿತವರಾಗಿರ ಬೇಕೆಂಬುದರಲ್ಲಿ ಸಂದೇಹವೇ ಇಲ್ಲ. ಪುರಂದರದಾಸರಂಥ ಪ್ರಬುದ್ಧ ಸಂಗೀತಗಾರರು ಹಠಾತ್ತನೆ ಉದ್ಭವಿಸುವುದು ಅಸಾಧ್ಯ. ಮೂಗುತಿಯ ಪ್ರಸಂಗದಲ್ಲಿ ತನ್ನ ಬದುಕಿನ ದಿಕ್ಕೇ ಬದಲಾಯಿತೆಂದು ಅರಿತ ಶ್ರೀನಿವಾಸನಾಯಕ ಭಾವುಕನಾಗಿ ಹಾಡಿದ್ದೇ "ಆದದ್ದೆಲ್ಲ ಒಳಿತೇ ಆಯಿತು, ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು" ಎಂಬ ಹಾಡಾಯಿತೆಂದು ಹೇಳುತ್ತಾರೆ. ಇದನ್ನು ಒಪ್ಪಿದ ವಿದ್ವಾಂಸರೇ "ವ್ಯಾಸರಾಯರು ಆತನಿಗೆ ದೀಕ್ಷೆಕೊಟ್ಟ ದಿವಸದಿಂದ ಆತನಿಗೆ ಪುರಂದರವಿಠಲನೆಂದು ಕರೆದುಕೊಳ್ಳಲು ಅನುವಾಯಿತು. ಅಲ್ಲಿಂದಾಚೆಗೆ ಬರೆದ ಪದಗಳೆಲ್ಲ ಪುರಂದರವಿಠಲ ಎಂಬ ಗುರುತು ಅಂಕಿತವಾಯಿತು''[2] ಎಂದೂ ಹೇಳುವುದರಿಂದ ಮತ್ತಷ್ಟು ಗೊಂದಲ ಉಂಟಾಗಿದೆ. ವ್ಯಾಸರಾಯರನ್ನು ಕುರಿತ ಪ್ರಖ್ಯಾತ ಸುಳಾದಿಯಲ್ಲಿ ವ್ಯಾಸರಾಯರ ಚರಣಕಮಲ ದರ್ಶನದಿಂದ "ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ" ಎಂಬ ವಾಕ್ಯದಿಂದ ವ್ಯಾಸ ರಾಯರು ಪುರಂದರದಾಸರಿಗೆ ಕೊಟ್ಟ ಅಧಿಕಾರ ಮಾತ್ರ ತಿಳಿಯುತ್ತದೆ. ಪುರಂದರ ವಿಠಲಾಂಕಿತ ಅವರ ಕೀರ್ತನೆಗಳಲ್ಲಿ ಮೊದಲೇ ಇದ್ದು, ಅದಕ್ಕೆ ವ್ಯಾಸರಾಯರಿಂದ ಅಧಿಕಾರಮುದ್ರೆ ಸಿಕ್ಕಿತೆಂದು ಹೇಳಬಹುದೇ ಎಂಬ ಪ್ರಶ್ನೆ ಉಳಿದಿದೆ.

ಈ ಪ್ರಶ್ನೆಗಳಿಂದ ಅನೇಕ ಉಪಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಅನೇಕ ವಿಮರ್ಶಕರ ಅಭಿಪ್ರಾಯದಲ್ಲಿ ಪುರಂದರದಾಸರು ವ್ಯಾಸರಾಯರನ್ನು ಭೇಟಿಯಾದಾಗ ಅವರಿಗೆ ಸುಮಾರು 40-45 ವರ್ಷಗಳು. ಆಮೇಲೆ ಸುಮಾರು 40 ವರ್ಷಗಳ ಕಾಲ ಪುರಂದರದಾಸರು ಕೀರ್ತನೆಗಳ ರಚನೆಯಲ್ಲಿ ತೊಡಗಿದ್ದರು. ವ್ಯಾಸರಾಯರನ್ನು ಭೇಟಿ ಯಾಗುವ ಹೊತ್ತಿಗೆ ಕುಹುಯೋಗ ಮುಗಿದು ಹೋಗಿತ್ತು. ಕುಹುಯೋಗ 1521ರಲ್ಲಿ ಬಂದಿತ್ತಾದ್ದರಿಂದ ವ್ಯಾಸರಾಯರನ್ನು 1521–26ರ ಮಧ್ಯದಲ್ಲಿ ಭೇಟಿ ಯಾಗಿರಬೇಕು. ಏಕೆಂದರೆ ಹಿಂದೆ ಪ್ರಸ್ತಾವಿಸಿದ ಶಾಸನದ ಕಾಲ ಕ್ರಿ. ಶ. 1526. ವಿದ್ವಾಂಸರು ಸಾಮಾನ್ಯವಾಗಿ ಹೇಳುವ ಈ ಎಲ್ಲ ಅಭಿಪ್ರಾಯಗಳೂ ವ್ಯಾಸರಾಯರನ್ನು ಕುರಿತು ಪುರಂದರದಾಸರು ಬರೆದ ಸುಳಾದಿಯನ್ನು ಅವಲಂಬಿಸಿವೆ. ಆ ಸುಳಾದಿಯನ್ನು ವ್ಯಾಸರಾಯರ ಭೇಟಿಯಾದ ಕೂಡಲೇ ಬರೆದಿರಬಹುದೆಂಬ ಊಹೆಯೇ ಇದಕ್ಕೆಲ್ಲ ಕಾರಣ. ಇದೇ ಸುಳಾದಿ ವ್ಯಾಸರಾಯರನ್ನು ಕುರಿತ ನೆನಪಿನ ಫಲವಾಗಿರಬಾರದೇ, ಮೊದಲ ಭೇಟಿಯ ಅನಂತರವೇ ಮೂಡಿಬಂದಿರಬೇಕೇ ಎಂಬ ಸಂದೇಹ ಯಾರಿಗೂ ಬಂದಂತಿಲ್ಲ.

---

[1] "ಪುರಂದರದಾಸರು-ಚಾರಿತ್ರಿಕ ಸಂಗತಿಗಳು", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಜೂನ್. 84 ಪು. 15.

[2] ಎ. ಸೀತಾರಾಮಯ್ಯ, ಶ್ರೀ ಪುರಂದರದಾಸರು, ಪು. 36.

ಶ್ರೀನಿವಾಸನಾಯಕ ವ್ಯಾಸರಾಯರನ್ನು ಸಂದರ್ಶಿಸಿದ ಘಟನೆಯ ಬಗೆಗೆ ಬರೆಯುತ್ತಾ ಶ್ರೀ ವಿ. ಸೀತಾರಾಮಯ್ಯ "ಇದು 1502ರಿಂದ 1525ರೊಳಗೇ ಯಾವುದೋ ಸಂವತ್ಸರದಲ್ಲಿ–25ರ ಹತ್ತಿರ ಹತ್ತಿರದ ಯಾವುದೋ ವರ್ಷದಲ್ಲಿ ನಡೆದಿರಬೇಕು"[1] ಎಂದಿದ್ದಾರೆ. 1525ರ ಹತ್ತಿರ ಹತ್ತಿರದಲ್ಲೇ ಮೊಟ್ಟಮೊದಲ ಬಾರಿಗೆ ಶ್ರೀನಿವಾಸನಾಯಕ ವ್ಯಾಸರಾಯರನ್ನು ನೋಡಿರಬೇಕೆಂಬ ಅಭಿಪ್ರಾಯವನ್ನೇ ಹೆಚ್ಚು ಜನ ವಿದ್ವಾಂಸರು ಒಪ್ಪಿರುವವರಾದರೂ 16ನೆಯ ಶತಮಾನದ ಪ್ರಾರಂಭದಲ್ಲೇ ಈ ಸಂದರ್ಶನ ನಡೆದಿರುವ ಸಾಧ್ಯತೆಯನ್ನು ಮಾತ್ರ ಅಲ್ಲಗಳೆಯಲಾಗದು.

## ತೀರ್ಥಯಾತ್ರೆ

ಪುರಂದರದಾಸರು ತೀರ್ಥಯಾತ್ರೆ ಮಾಡಿದರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ದೀಕ್ಷಾಸ್ವೀಕಾರಕ್ಕೆ ಮೊದಲು ಮತ್ತು ಅನಂತರ ಕೂಡ ಅವರು ಹಲವು ತೀರ್ಥಗಳನ್ನು ಸೇವಿಸಿರಬಹುದು. 'ಊರೂರ ನದಿಗಳಲಿ ಬಾರಿಬಾರಿಗೆ' ಮುಳುಗುವುದಕ್ಕಿಂತ ಶ್ರೀಹರಿಯ ಪದವನ್ನು ನಂಬಿದರೆ ಸಾಕೆಂದು ಕೆಲವು ಕೀರ್ತನೆಗಳಲ್ಲಿ ಬೋಧಿಸಿದರೂ ತೀರ್ಥಯಾತ್ರೆಯನ್ನು ತಮ್ಮ ಜೀವನಾನುಭವದ ಗಳಿಕೆಗೆ ಸಾಧನವಾಗಿ ಮಾಡಿಕೊಂಡರು. ತುಂಗೆ, ಗಂಗೆ, ಕಾವೇರಿ ಮುಂತಾದ ಪುಣ್ಯನದಿಗಳನ್ನು ದಾಸರು ಹಾಡಿ ಹೊಗಳಿದ್ದಾರೆ. ಅವರು ಸಂದರ್ಶಿಸಿದ ಕ್ಷೇತ್ರಗಳಲ್ಲಿ ಕಂಚಿ, ಪಂಡರಪುರ, ಉಡುಪಿ, ಗೋಕರ್ಣ, ಮಧುರೆ, ಕಾಶಿ, ದ್ವಾರಕೆ, ಬದರಿ, ರಾಮೇಶ್ವರ ಮುಂತಾದವು ಸೇರಿವೆ.

## ಅನ್ನಮಾಚಾರ್ಯರ ಸಂದರ್ಶನ

ಪುರಂದರದಾಸರು ಅನ್ನಮಾಚಾರ್ಯರನ್ನು ನೋಡಿದ ಪ್ರಸಂಗವನ್ನು ಸಾಕ್ಷಾತ್ ಅನ್ನಮಯ್ಯನ ಮೊಮ್ಮಗನೇ ವರ್ಣಿಸಿರುವುದರಿಂದ ಅದು ನಂಬಲರ್ಹವಾಗಿದೆ.[2] ಅನ್ನಮಾಚಾರ್ಯರು ಕ್ರಿ. ಶ. 1503ರಲ್ಲಿ ತೀರಿಕೊಂಡರು. ಆದುದರಿಂದ ಅದಕ್ಕೆ ಮೊದಲೇ ಪುರಂದರದಾಸರು ತಿರುಪತಿಗೆ ಹೋಗಿರಬೇಕು. 1521ರ ತನಕ ದೀಕ್ಷಾಸ್ವೀಕಾರ ನಡೆದಿಲ್ಲವೆಂದು ಅನೇಕರು ನಂಬಿರುವರಾದರೂ ವ್ಯಾಸರಾಯರನ್ನು ಶ್ರೀನಿವಾಸ ನಾಯಕ ಭೇಟಿಮಾಡಿದ ಪ್ರಸಂಗ 1503ಕ್ಕೆ ಮೊದಲೇ ನಡೆದಿರಬೇಕೆನಿಸುತ್ತದೆ. ಪುರಂದರದಾಸರು ಸಂದರ್ಶಿಸಿದ ಕಾಲಕ್ಕಾಗಲೇ ಅನ್ನಮಾಚಾರ್ಯರು ವೃದ್ಧರೂ ಲಬ್ಧ ಪ್ರತಿಷ್ಠರೂ ಆಗಿದ್ದರು. ಕೀರ್ತನಸಾಹಿತ್ಯಕ್ಕೆ ಅನ್ನಮಾಚಾರ್ಯರು ಸಲ್ಲಿಸಿದ್ದ ಮಹೋನ್ನತ ಸೇವೆ ಪುರಂದರದಾಸರ ಮೇಲೆ ಅಚ್ಚಳಿಯದ ಪ್ರಭಾವ ಬೀರಿರಬೇಕೆಂದು ಊಹಿಸುವುದರಲ್ಲಿ ತಪ್ಪೇನಿಲ್ಲ.

---

[1] ಶ್ರೀ ಪುರಂದರದಾಸರು, ಪು. 35.

[2] ಅನ್ನಮಾಚಾರ್ಯ ಚರಿತ್ರಮು, ತೃ. ಮು., ಪು. 44-45.

ಪುರಂದರದಾಸರು 1503ಕ್ಕೆ ಮೊದಲೇ ತಿರುಪತಿಗೆ ಹೋಗಿದ್ದರೆನ್ನುವುದಕ್ಕೆ ಇನ್ನೊಂದು ಆಧಾರವಿದೆ. 'ವೆಂಕಟೇಶನ ಯಾತ್ರೆಗೆ ದಾಸರು ಪೋದಾಗ' ಎಂಬ ಹಾಡು 'ಇದು ಒಪ್ಪುವ ಭೃತ್ಯನಾದ ರಘುನಾಥ ಪೇಳಿದನು' ಎಂದು ಕೊನೆಗೊಳ್ಳುತ್ತದೆ. 'ಇದು ರಘುನಾಥತೀರ್ಥ ಶ್ರೀಪಾದಂಗಳವರು ಪುರಂದರದಾಸರ ಮಹಿಮೆಯನ್ನು ತಿರುಪತಿಯಲ್ಲಿ ಕಣ್ಣಾರೆ ಕಂಡು ರಚಿಸಿದ ಹಾಡು' ಎಂದಿದೆ. ಶ್ರೀ ರಘುನಾಥರು 1502ರಲ್ಲಿ ನಿಧನರಾದ ರೆಂದು ಉತ್ತರಾದಿಮಠದ ಪೀಳಿಗೆಯ ಚರಿತ್ರೆಯಲ್ಲಿ ಸ್ಪಷ್ಟವಾಗಿದೆ.[1]

## ವ್ಯಕ್ತಿತ್ವ

ದೀಕ್ಷಾ ಸ್ವೀಕಾರಕ್ಕೆ ಮೊದಲು ಪುರಂದರದಾಸರು ಏನಾಗಿದ್ದರೆಂಬುದನ್ನು ಕುರಿತು ಈಗಾಲೇ ಸ್ವಲ್ಪಮಟ್ಟಿಗೆ ವಿವೇಚಿಸಲಾಗಿದೆ. 'ವ್ಯಾಪಾರ ನಮಗಾಯಿತು....' ಎಂಬ ಕೀರ್ತನೆ ಅವರು ವ್ಯಾಪಾರದಲ್ಲಿ ತೊಡಗಿದ್ದರೆಂಬುದನ್ನು ಸೂಚಿಸುತ್ತದೆಯೆಂದು ಅನೇಕರು ಊಹಿಸಿದ್ದಾರೆ. 'ಶ್ರೀಪತಿ ಪಾದಾರವಿಂದ ಸೇವೆಯೆಂಬ ವ್ಯಾಪಾರ'ವನ್ನೇ ದಾಸರು ಹೇಳಿರುವುದರಿಂದ ಇದು ಅವರ ಲೌಕಿಕ ವ್ಯಾಪಾರಕ್ಕೆ ಸೂಚಕವಾಗಬೇಕಾಗಿಲ್ಲ ವೆಂಬುದೇನೋ ನಿಜ. ಆದರೆ "ಈ ಒಟ್ಟು ಕೀರ್ತನೆ, ಪುರಂದರದಾಸರು ತಾವು ಕೈಗೊಂಡಿರುವ ದೇವರ ಪಾದಾರವಿಂದ ಸೇವೆಯೆಂಬ ನೂತನ ವ್ಯಾಪಾರಕ್ಕೂ ತಾವು ಈ ಮೊದಲು ಮಾಡುತ್ತಿದ್ದ ಲೌಕಿಕ ವ್ಯಾಪಾರಕ್ಕೂ ಇರುವ ಮಹದಂತರವನ್ನು ವ್ಯಕ್ತ ಪಡಿಸುತ್ತದೆ"[2] ಎಂಬ ಅಭಿಪ್ರಾಯವನ್ನು ಅಲ್ಲಗಳೆಯುವಂತಿಲ್ಲ. ಜಿಪುಣನಾಗಿದ್ದ ಶ್ರೀನಿವಾಸನಾಯಕ ಪರಮ ವಿರಕ್ತನಾಗಿ ಭಕ್ತಿ ಸಾಮ್ರಾಜ್ಯವನ್ನು ಆಳಿದ ಪ್ರಸಂಗ ಅತ್ಯಂತ ಆಸಕ್ತಿಕರವಾದುದು. ಪುರಂದರದಾಸರ ವ್ಯಕ್ತಿತ್ವದಲ್ಲಿ ಕಂಡುಬರುವ ಈ ಮಹತ್ತ್ವದ ಬದಲಾವಣೆ ಅವರ ಕೀರ್ತನೆಗಳಲ್ಲೂ ಅಲ್ಲಲ್ಲಿ ಸೂಚಿತವಾಗಿದೆ. "ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ, ಅಷ್ಟು ದೊರಕಿದರೆ ಮತ್ತಷ್ಟರಾಸೆ"ಯಿಂದ ಮುಕ್ತವಾದ ಅವರ ಜೀವನ ಸಾಫಲ್ಯ ಗಮನಾರ್ಹವಾದುದು.

ಪುರಂದರದಾಸರಿಗೆ ಗುರುವಿನ ಅನುಗ್ರಹ ದೊರಕಿದ್ದು ಅವರ ಜೀವನದಲ್ಲಿ ತುಂಬ ದೊಡ್ಡದಾದ ತಿರುವು ಎಂಬುದರಲ್ಲಿ ಸಂದೇಹವಿಲ್ಲ. ಇದನ್ನು ಒಂದು ಕೀರ್ತನೆಯಲ್ಲಿ ಅವರೇ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

> ಹರಿದಾಸರ ಸಂಗ ದೊರೆಯಿತು ಎನಗೀಗ ಇನ್ನೇನಿನ್ನೇನು
> ವರಗುರು ಉಪದೇಶ ಎನಗಾಯಿತು

---

[1] ಈ ಎಲ್ಲ ವಿವರಗಳನ್ನು ಕೊಟ್ಟವರು (ಶ್ರೀಪುರಂದರದಾಸರ ಸಾಹಿತ್ಯ, ಸಂಕೀರ್ಣ ಸಂಗ್ರಹ, ಸಂಪಾದಕರ ಮಾತು, ಪು. 19) ಇದನ್ನು ಚಾರಿತ್ರಿಕ ಆಭಾಸವೆಂದೇ ಭಾವಿಸಿದರು. ಆದರೆ ಇದು ಅನ್ನಮಾಚಾರ್ಯರ ಸಂದರ್ಶನಕ್ಕೆ ಪೋಷಕವಾಗಿದೆ.

[2] ಜಿ. ವರದರಾಜರಾವ್, ಪುರಂದರದಾಸರು, ಪು. 9.

ಮಾಯದಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲಸಿತು ಇನ್ನೇನಿನ್ನೇನು
ಹಲವು ದೈವಗಳಲ್ಲಿ ಹಂಬಲ ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳು ನೆಲಸಿತು ಇನ್ನೇನಿನ್ನೇನು

ದೀಕ್ಷಾಸ್ವೀಕಾರಕ್ಕೆ ಮೊದಲೇ ಪುರಂದರದಾಸರಿಗೆ ಸಂಗೀತದಲ್ಲಿ ಆಸಕ್ತಿ ಇದ್ದಿರಬೇಕು. ವ್ಯಾಸರಾಯರಿಂದ ದಾಸರು ಪಡೆದ ಸ್ಫೂರ್ತಿ ಅವರ ರಚನೆಗಳು ಅರ್ಥಪೂರ್ಣವಾಗಿ ಸಾಫಲ್ಯ ಹೊಂದಲು ಸಹಾಯ ಮಾಡಿರಬೇಕು. ವಯಸ್ಸಿನಿಂದ ಬಂದ ಅನುಭವ, ರಚನೆಯಲ್ಲಿ ಪಕ್ವತೆ, ಭಕ್ತಿಯ ಪ್ರಾಮಾಣಿಕತೆ ಪುರಂದರದಾಸರ ಕೀರ್ತನೆಗಳಿಗೆ ಗಾಂಭೀರ್ಯವನ್ನು ಒದಗಿಸಿವೆ.

ದಾಸರು ನಾಲ್ಕುಲಕ್ಷ ಎಪ್ಪತ್ತೈದುಸಾವಿರ ಕೃತಿಗಳನ್ನು ರಚಿಸಿದರೆಂದು ಸಂಪ್ರದಾಯ ಹೇಳುತ್ತದೆ. ಇದರಲ್ಲಿ ಒಂದು ಲಕ್ಷದ ಇಪ್ಪತ್ತೈದು ಸಾವಿರ ತೀರ್ಥಕ್ಷೇತ್ರ ಮಹಿಮೆಗೆ ಸಂಬಂಧಿಸಿದುವೆಂದು ಹೇಳಿದೆ. ಇದರಿಂದ ದಾಸರು ಕೈಗೊಂಡ ತೀರ್ಥಯಾತ್ರೆಯ ವಿಸ್ತಾರ ಧ್ವನಿತವಾಗುತ್ತದೆ. ದೇಶಸಂಚಾರದಿಂದ ದಾಸರು ಅಪಾರ ಅನುಭವವನ್ನು ಗಳಿಸಿದರೆಂಬುದರಲ್ಲಿ ಸಂದೇಹವಿಲ್ಲ. ಮಧ್ವಶಾಸ್ತ್ರ ಮತ್ತು ಗುರುಪರಂಪರೆಗೆ ಸಂಬಂಧಿಸಿದಂತೆ 90,000 ಕೃತಿಗಳನ್ನೂ, ಪುರಾಣಕಥೆಗಳನ್ನು ಕುರಿತಂತೆ 90,000 ಕೃತಿಗಳನ್ನೂ ರಚಿಸಿದರೆನ್ನಲಾಗಿದೆ. ಸುಳಾದಿಗಳು 64,000, ದೇವರನಾಮಗಳು 25,000, ದೇವತಾಮೂರ್ತಿ ಕೀರ್ತನೆಗಳು 60,000. ಇಷ್ಟು ಮೊತ್ತದ ಕೃತಿಗಳ ಪೈಕಿ ದುರದೃಷ್ಟವಶಾತ್ ಕೇವಲ ಕೆಲವೇ ಸಾವಿರ ಕೃತಿಗಳು ಮಾತ್ರ ದೊರಕಿವೆ.

ದಾಸರ ಕೃತಿಗಳಲ್ಲಿ ಅನಂತ ವೈವಿಧ್ಯವಿದೆ, ವೈಶಿಷ್ಟ್ಯವಿದೆ, ವೈಶಾಲ್ಯವಿದೆ. ಸಂಗೀತದ ಸೊಬಗು, ಸಾಹಿತ್ಯದ ಸೊಗಸು, ಧರ್ಮದ ಬೆಡಗು ಇವರ ಕೀರ್ತನೆಗಳಲ್ಲಿ ಸಮ್ಮಿಲನಗೊಂಡಿವೆ. ಇವರ ಕೀರ್ತನೆಗಳಲ್ಲಿ ವ್ಯಕ್ತಿನಿಷ್ಠ ಕವನಗಳು ಕೆಲವಾದರೆ ಸಮಾಜನಿಷ್ಠ ಕವನಗಳು ಹಲವು. 'ಗಿಳಿಯು ಪಂಜರದೊಳಿಲ್ಲ' ಮುಂತಾದ ಕೀರ್ತನೆಗಳಲ್ಲಿ ದಾಸರ ಭಾವನಾಶಕ್ತಿ, ಸಾಂಕೇತಿಕತೆ, ಪ್ರತಿಭಾನ್ವಿತ ಅಭಿವ್ಯಕ್ತಿ ಕಂಡುಬರುತ್ತವೆ. ಇಂಥ ಆತ್ಮನಿಷ್ಠಗೀತೆಗಳನ್ನು ಮೀರಿ ವ್ಯಕ್ತ್ಯತೀತ ದೃಷ್ಟಿಯಿಂದ, ಸಾಮಾಜಿಕ ನಿಷ್ಠೆಯಿಂದ ಸಾವಿರಾರು ಕವನಗಳನ್ನು ಬರೆದಿದ್ದಾರೆ. 'ಆಚಾರವಿಲ್ಲದ ನಾಲಗೆ' ಎಂಬ ಹಾಡು ದಾಸರಿಗೆ ಲೋಕದ ಬಗೆಗಿದ್ದ ದೃಷ್ಟಿಯನ್ನು ತಿಳಿಸುತ್ತದೆ. ಸಾಮಾಜಿಕ ಪ್ರಜ್ಞೆ ಅವರ ಕೀರ್ತನೆಗಳ ಪ್ರಮುಖ ಗುಣಗಳಲ್ಲಿ ಒಂದೆಂಬುದನ್ನು ತೋರಿಸಲು ಅವರ ಅನೇಕ ರಚನೆಗಳನ್ನು ಉದಾಹರಿಸಬಹುದು. ವ್ಯಂಗ್ಯವಾಗಿ ಹೇಳುವ ಪದಗಳು ಕೆಲವಾದರೆ, ನೇರವಾಗಿ ಸ್ಪಷ್ಟವಾಗಿ, ಪ್ರಭುಸಮ್ಮಿತ ವಚನದಂತೆ ನೀತಿಯನ್ನು ಹೇಳುವ ಮಾತುಗಳೂ ಕಂಡುಬರುತ್ತವೆ.

ಕನ್ನಡ ಹರಿದಾಸ ಸಾಹಿತ್ಯದಲ್ಲಿ ಪುರಂದರದಾಸರ ಕೀರ್ತನೆಗಳು ಪರಿಮಾಣ ಮತ್ತು ಸತ್ತ್ವಗಳಲ್ಲಿ ಮಹತ್ತ್ವದ ಸ್ಥಾನವನ್ನು ಪಡೆದಿವೆ. ಜೀವನವನ್ನೇ ಕೀರ್ತನ ಸೃಷ್ಟಿಗೆ ಮುಡಿಪಾಗಿಟ್ಟವರಿಗಲ್ಲದೆ ಇಷ್ಟು ವಿಪುಲವಾದ ಸಾಹಿತ್ಯ ಸೃಷ್ಟಿಸಲು ಸಾಧ್ಯವಿಲ್ಲ.

ಸಾಹಿತ್ಯದ ದೃಷ್ಟಿಯಿಂದ ನೋಡಿದರೆ ಇವರದು ಆಶುಸಾಹಿತ್ಯ ಧೋರಣೆ. ಆದರೆ ಇದು ಸಂಗೀತವನ್ನೂ ಒಳಗೊಂಡಿರುವ ವಿಶಿಷ್ಟ ಪ್ರಕಾರ. ಹಾಡಿದ ಹಾಡು ನೇರವಾಗಿ ಮನಸ್ಸನ್ನು ಮುಟ್ಟುವುದು ಆಶುಸಾಹಿತ್ಯದ ಮುಖ್ಯ ಲಕ್ಷಣ. ನಮ್ಮ ಸಂಸ್ಕೃತಿಯ ಹಲವಾರು ಅಂಶಗಳನ್ನು ಹೇಳಲು ಹೊರಟ ಪುರಂದರದಾಸರು ಅದಕ್ಕೆ ತಕ್ಕ ಶೈಲಿ ಯನ್ನೂ ಕಾವ್ಯ ಪ್ರಕಾರವನ್ನೂ ರೂಪಿಸಿಕೊಂಡರು. ಆತ್ಮಾನುಭವವನ್ನು ಕೇವಲ ಆತ್ಮತೃಪ್ತಿಗಾಗಿ ಕೀರ್ತನ ರೂಪದಲ್ಲಿ ಬರೆದುಕೊಳ್ಳದೆ, ಭಕ್ತಿ ತತ್ತ್ವವನ್ನು ಸಾಮಾನ್ಯ ಜನರಿಗೂ ತಲುಪಿಸಬೇಕೆಂದು ಹೊರಟವರು ಪುರಂದರದಾಸರು. ಆದುದರಿಂದ ಅನೇಕ ಉಪಮೆಗಳು, ರೂಪಕಗಳು, ಕಾವ್ಯಸೃಷ್ಟಿಯ ಅಂಗವಾಗಿ ಹೊರಹೊಮ್ಮಿದವು. ಗಾದೆ, ನಾಣ್ನುಡಿ, ಜಾಣ್ನುಡಿಗಳು ಕಾವ್ಯಕ್ಕೆ ಅಲಂಕಾರವಾದುವು. 'ಈಸಬೇಕು ಇದ್ದು ಜೈಸಬೇಕು' ಎಂಬ ಆಶಾವಾದ ಇವರದು.

ಸಂಗೀತ ಪ್ರಪಂಚದಲ್ಲೂ ಪುರಂದರದಾಸರದು ದೊಡ್ಡ ಹೆಸರು. ಅವರ ರಚನೆ ಗಳಲ್ಲಿ ಸಂಗೀತದ ವೈವಿಧ್ಯವಿದೆ. ಮುಖ್ಯವಾಗಿ ಪದ, ಸುಳಾದಿ ಮತ್ತು ಉಗಾಭೋಗ ಎಂಬ ರಚನೆಗಳನ್ನು ಇಲ್ಲಿ ಹೆಸರಿಸಬಹುದು. ದಕ್ಷಿಣ ಭಾರತೀಯ ಸಂಗೀತ ಸಂಪ್ರದಾಯ ದಲ್ಲಿ ಅನ್ನಮಾಚಾರ್ಯರದು ಮತ್ತು ಪುರಂದರದಾಸರದು ಒಂದು ಹಂತ, ಇದನ್ನು ತ್ಯಾಗರಾಜರು ಮುಂದುವರಿಸಿಕೊಂಡು ಹೋದರು.

ಕರ್ನಾಟಕ ಸಂಗೀತವನ್ನು ಕಲಿಯಲು ಪುರಂದರದಾಸರು ಕ್ರಮಬದ್ಧವಾದ ವ್ಯವಸ್ಥೆಯನ್ನು ಮಾಡಿದ್ದರೆಂದೂ, ಸಂಗೀತಲಕ್ಷಣಶಾಸ್ತ್ರ ನಿರ್ಮಿಸಿದರೆಂದೂ ಸಂಪ್ರದಾಯ ಹೇಳುತ್ತದೆ. ಆದರೆ ಅವರು ಬರೆದ ಲಕ್ಷಣ ಗ್ರಂಥವಾವುದೂ ಸಿಕ್ಕಿಲ್ಲ. 'ಪುರಂದರೋಪ ನಿಷತ್ತ'ನ್ನು ಕನ್ನಡಿಗರಿಗೆ ನೀಡಿದ ಪುರಂದರದಾಸರು ಕನ್ನಡ ಸಾಹಿತ್ಯಕ್ಕೆ ಮತ್ತು ಕರ್ನಾಟಕ ಸಂಗೀತಕ್ಕೆ ವೈಶಿಷ್ಟ್ಯಪೂರ್ಣವಾದ ಕೊಡುಗೆಯನ್ನಿತ್ತರು.

# ಅನ್ನಮಾಚಾರ್ಯರ ಜೀವನ ಮತ್ತು ಸಾಧನೆ

ಅನ್ನಮಾಚಾರ್ಯರನ್ನು ಕುರಿತ ವಿವರಗಳು ಅವರ ಮೊಮ್ಮಗ ಚಿನ್ನನ್ನ ಬರೆದ 'ಅನ್ನಮಾಚಾರ್ಯ ಚರಿತ್ರಮು'' ಎಂಬ ಗ್ರಂಥದ ಮೂಲಕ ತಿಳಿದುಬರುತ್ತದೆ. ತನ್ನ 'ಪಿತಾಮಹನ ಸಾರಸ್ವತ ಜೀವನದ ಕಟ್ಟಕಡೆಯಲ್ಲಿ ಜನಿಸಿದ ಚಿನ್ನನ್ನ, ಅನ್ನಮಾಚಾರ್ಯರ ಬಗೆಗೆ ಅನೇಕ ಪ್ರಾಮಾಣಿಕ ವಿವರಗಳನ್ನು ಒದಗಿಸಿಕೊಟ್ಟಿದ್ದಾನೆ. ಅನ್ನಮಾಚಾರ್ಯರ ಮಗ ಪೆದತಿರುಮಲ ತನ್ನ ತಂದೆಯು ಕೀರ್ತನೆಗಳನ್ನು ತಾಮ್ರಪತ್ರಗಳಲ್ಲಿ ಲಿಖಿಸಿ, ಮೌಖಿಕ ಸಾಹಿತ್ಯಕ್ಕೆ 'ಅಕ್ಷರ' ರೂಪವನ್ನು ಕೊಟ್ಟು ಮಹೋಪಕಾರ ಮಾಡಿದ್ದಾನೆ. ಈ ಕಾರಣಗಳಿಂದ ಅನ್ನಮಾಚಾರ್ಯರ ಜೀವನ ಪರಿಶೀಲನೆಯಲ್ಲಿ ಪುರಂದರದಾಸರ ವಿಷಯದಲ್ಲಿರುವಂತೆ ಹೆಚ್ಚಿನ ತೊಡಕುಗಳಿಲ್ಲ.

**ಕಾಲ**

ಅನ್ನಮಾಚಾರ್ಯರು 'ತಾಳ್ಳಪಾಕ' ಎಂಬ ಗ್ರಾಮದಲ್ಲಿ ಹುಟ್ಟಿದರು. ಇದು ಆಂಧ್ರಪ್ರದೇಶದ ಕಡಪ ಜಿಲ್ಲೆಯ ರಾಜಂಪೇಟ ತಾಲ್ಲೂಕಿನಲ್ಲಿದೆ. ಅನ್ನಮಯ್ಯನ ತಾಯಿ ಲಕ್ಕಮಾಂಬ, ತಂದೆ ನಾರಾಯಣಸೂರಿ. ಇವರದು ನಂದವರೀಕ ಬ್ರಾಹ್ಮಣ ವಂಶ, ಆಶ್ವಲಾಯನ ಸೂತ್ರ, ಭಾರದ್ವಾಜ ಗೋತ್ರ.

ಅನ್ನಮಾಚಾರ್ಯರು ಕ್ರಿ.ಶ. 15ನೆಯ ಶತಮಾನದ ಪ್ರಾರಂಭದಲ್ಲಿ ಹುಟ್ಟಿ ಆ ಶತಮಾನದ ಅಂತ್ಯದ ತನಕ ಬಾಳಿದವರು. ಅನ್ನಮಾಚಾರ್ಯರ ಸಂಕೀರ್ತನೆಗಳ ತಾಮ್ರ ಪತ್ರಗಳಲ್ಲಿ ಮೊಟ್ಟಮೊದಲನೆಯದು ಅವರ ಜನ್ಮತಿಥಿ ಮತ್ತು ಪುಣ್ಯತಿಥಿಗಳ ಮೇಲೆ ಬೆಳಕು ಚೆಲ್ಲುತ್ತದೆ : ''ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ 1346 ಆದ ಕ್ರೋಧಿ ಸಂವತ್ಸರದಲ್ಲಿ ತಾಳಪಾಕ ಅನ್ನಮಾಚಾರ್ಯರು ಅವತರಿಸಿದ ಹದಿನಾರು ವರ್ಷಕ್ಕೆ ತಿರುವೇಂಗಳನಾಥನು ಪ್ರತ್ಯಕ್ಷವಾದಾಗ ಅಂದಿನಿಂದ ಶಾಲಿವಾಹನ ಶಕವರ್ಷ 1424 ಆದ ದುಂದುಭಿ ಸಂವತ್ಸರದ ಫಾಲ್ಗುಣ ಬಹುಳ 12 ನಿಧನರಾಗುವವರೆಗೆ ತಿರುವೇಂಗಳನಾಥನ ಅಂಕಿತವಾಗಿ ತಾಳಪಾಕ ಅನ್ನಮಾಚಾಯರು ವಿನ್ನೈಸಿದ ಶೃಂಗಾರ ಅಧ್ಯಾತ್ಮ ಸಂಕೀರ್ತನೆಗಳು.''

ಇದರ ಪ್ರಕಾರ ಅನ್ನಮಯ್ಯ ನಿಧನರಾದದ್ದು ಶಾ. ಶ. 1424 (ಕ್ರಿ.ಶ. 1503) ಎಂಬುದು ಖಚಿತವಾಗಿದೆ. ಆದರೆ ಶಾ. ಶ. 1346 (ಕ್ರಿ.ಶ. 1424) ಅನ್ನಮಯ್ಯ ಹುಟ್ಟಿದ ವರ್ಷವೆಂದು ಕೆಲವರು, ವೇಂಕಟೇಶ್ವರ ಪ್ರತ್ಯಕ್ಷವಾದ ವರ್ಷವೆಂದು ಇನ್ನು

ಕೆಲವರು ಭಾವಿಸಿದ್ದಾರೆ. ವೇಟೂರಿ ಪ್ರಭಾಕರಶಾಸ್ತ್ರಿ,[1] ವೇಟೂರಿ ಆನಂದಮೂರ್ತಿ[2] ಮುಂತಾದವರು ಕ್ರಿ.ಶ. 1424ನ್ನು ಅವರ ಜನ್ಮವರ್ಷವೆಂದಿದ್ದಾರೆ. ಸಾಧು ಸುಬ್ರಹ್ಮಣ್ಯ ಶಾಸ್ತ್ರಿ, ಚಾಗಂಟಿ ಶೇಷಯ್ಯ, ಗೌರಿಪೆದ್ದಿ ರಾಮಸುಬ್ಬಶರ್ಮ, ಜಿ. ಎನ್. ರೆಡ್ಡಿ ಮುಂತಾದವರು ಕ್ರಿ.ಶ. 1408 ಎಂಬುದನ್ನೇ ಒಪ್ಪಿದ್ದಾರೆ.[3]

ತಾಮ್ರಪತ್ರದಲ್ಲಿ ಹೇಳಿರುವಂತೆ ಮೇಲೆ ಉಲ್ಲೇಖಿಸಿರುವ ಶಾ. ಶ. 1346 ಮತ್ತು 1424 ಎಂಬವು ಅನ್ನಮಾಚಾರ್ಯರ ಜನನ ಮರಣಗಳನ್ನು ಸೂಚಿಸುವುದಕ್ಕಿಂತ ಅವರ ರಚನಾಕಾಲವನ್ನು ತಿಳಿಸುತ್ತವೆ ಎಂಬುದು ಯುಕ್ತ. ಆದುದರಿಂದ ಅನ್ನಮಾಚಾರ್ಯರು ಹುಟ್ಟಿದ ಹದಿನಾರು ವರ್ಷಕ್ಕೆ (ಶಾ. ಶ. 1346) ವೇಂಕಟೇಶ್ವರನ ಸಾಕ್ಷಾತ್ಕಾರವಾಗಿ, ಆತನ ಅಪ್ಪಣೆಯಂತೆ ಶೃಂಗಾರ-ಅಧ್ಯಾತ್ಮ ಸಂಕೀರ್ತನೆಗಳನ್ನು ರಚಿಸಿದರೆನ್ನುವುದು ಸರಿಯೆನಿಸುತ್ತದೆ.

ಅನ್ನಮಾಚಾರ್ಯರು ದಿನಕ್ಕೊಂದು ಕೀರ್ತನೆಯಂತೆ 32,000 ಕೀರ್ತನೆಗಳನ್ನು ರಚಿಸಿದರೆಂದು ತಾಮ್ರಪತ್ರದಲ್ಲೂ, "ಅನ್ನಮಾಚಾರ್ಯ ಚರಿತ್ರಮು" ವಿನಲ್ಲೂ ಹೇಳಲಾಗಿದೆ. ಹದಿನಾರನೆಯ ವರ್ಷದಲ್ಲಿ ವೇಂಕಟೇಶ್ವರನ ಅಪ್ಪಣೆಯಂತೆ ಕೀರ್ತನೆಗಳನ್ನು ರಚಿಸಿದರೂ, ಎಂಟನೆಯ ವಯಸ್ಸಿನಲ್ಲೇ ತಿರುಪತಿಗೆ ಹೋದರೆಂದೂ ಅಂದಿನಿಂದಲೇ ರಚನೆಯಲ್ಲಿ ತೊಡಗಿದ್ದರೆಂದೂ "ಅನ್ನಮಾಚಾರ್ಯ ಚರಿತ್ರಮು"ವಿನಲ್ಲಿ ಸೂಚಿಸಲಾಗಿದೆ. 95 ವರ್ಷಗಳ ತುಂಬು ಜೀವನದಲ್ಲಿ ಸುಮಾರು 87 ವರ್ಷಗಳ ಕಾಲ ಸಂಕೀರ್ತನೆಗಳನ್ನು ರಚಿಸುವುದಾದರೆ ಸುಮಾರು 32,000 ಕೀರ್ತನೆಗಳ ಲೆಕ್ಕ ಸರಿಹೊಂದುತ್ತದೆ. ಬೇರೆಯವರ ಅಭಿಪ್ರಾಯದಂತೆ ಅನ್ನಮಯ್ಯ ಕ್ರಿ.ಶ. 1424ರಲ್ಲಿ ಹುಟ್ಟಿ 16ನೆಯ ವಯಸ್ಸಿನಿಂದ ರಚನೆ ಪ್ರಾರಂಭಿಸಿದ್ದರೆ 63 ವರ್ಷಗಳಲ್ಲಿ ಸುಮಾರು 23 ಸಾವಿರ ಕೀರ್ತನೆಗಳನ್ನು ಮಾತ್ರ ರಚಿಸಲು ಸಾಧ್ಯವಾಗುವುದು. ಈ ಲೆಕ್ಕಾಚಾರಗಳಲ್ಲಿ ಸತ್ಯಾಂಶವಿದೆ ಎಂಬುದನ್ನು ನಾವು ನಂಬದಿದ್ದರೂ ಅನ್ನಮಾಚಾರ್ಯರ ಜನ್ಮವರ್ಷವನ್ನು ನಿರ್ಣಯಿಸಲು ಆಧಾರವಾಗಿ ಸ್ವೀಕರಿಸಬಹುದು. ಒಟ್ಟಿನಲ್ಲಿ ಕ್ರಿ.ಶ. 1408 ರಿಂದ 1503ರ ತನಕ ಅನ್ನಮಯ್ಯ ಬದುಕಿದ್ದರೆಂಬುದನ್ನು ಒಪ್ಪಬಹುದು.

## ಬಾಲ್ಯ

ವಿಷ್ಣುವಿನ ನಂದಕಾಂಶದಿಂದ ಹುಟ್ಟಿದವನಾದ್ದರಿಂದ ಅನ್ನಮಯ್ಯ ಚಿಕ್ಕವನಾಗಿರುವಾಗಲೇ ಹರಿಭಕ್ತಿಯುಳ್ಳವನಾಗಿದ್ದನೆಂದು ಚಿನ್ನನ್ನ ಹೇಳುತ್ತಾನೆ (ಅ. ಚ., ಪು. 10).[4]

---

[1] ಅನ್ನಮಾಚಾರ್ಯ ಚರಿತ್ರಮು, 1949, ಪೀಠಿಕೆ.

[2] ತಾಳ್ಲಪಾಕ ಕವುಲ ಕೃತುಲು, 1964, ಪು. 60.

[3] ತಾಳ್ಲಪಾಕ ಅನ್ನಮಾಚಾರ್ಯ ಜಯಂತಿ ಸಂಚಿಕ, 1978, ಪೀಠಿಕೆ.

[4] ಅನ್ನಮಾಚಾರ್ಯ ಚರಿತ್ರಮು, ತೃತೀಯ ಮುದ್ರಣ, ತಿರುಮಲ ತಿರುಪತಿ ದೇವಸ್ಥಾನಮುಲು, ತಿರುಪತಿ, 1978. ಅನ್ನಮಾಚಾರ್ಯರ ಜೀವನದ ಮುಖ್ಯ ವಿಷಯಗಳನ್ನು 'ಅನ್ನಮಾಚಾರ್ಯ ಚರಿತ್ರಮು'ವಿನಿಂದ ಸ್ವೀಕರಿಸಲಾಗಿದೆ.

ಅನ್ನಮಯ್ಯನಿಗೆ ಐದನೆಯ ವರ್ಷದಲ್ಲಿ ಉಪನಯನವಾಯಿತು. ಆತನಿಗೆ "ವಿಷ್ಣುವಿನ ವರದಿಂದ ವಿದ್ಯೆಗಳೆಲ್ಲ ಅವಿಂತವಾಗಿ ನಾಲಗೆಯ ಮೇಲೆ ತಾವೇ ಬಂದು ಕುಣಿಯುತ್ತಿದ್ದುವು" (ಅ. ಚ., ಪು. 11). ಅಷ್ಟು ಚಿಕ್ಕವಯಸ್ಸಿನಲ್ಲೇ ತನ್ನ ಮನಸ್ಸಿಗೆ ಬಂದಂತೆ ಆಡಿದ ಮಾತೆಲ್ಲ ಅಮೃತ ಕಾವ್ಯವಾಗಿ, ಹಾಡಿದ ಹಾಡೆಲ್ಲ ಪರಮಗಾನವಾಗಿ ತನ್ನ ಕಾವ್ಯವನ್ನೂ ಗಾನವನ್ನೂ ಕಂಡು ಸಕಲ ಲೋಕವು ಕೀರ್ತಿಸಲು ವೇಂಕಟಪತಿಯ ಮೇಲೆ ಸಂಕೀರ್ತನೆಗಳನ್ನು ಹೇಳುತ್ತಿದ್ದರು (ಅ. ಚ., ಪು. 11).

ತಾಯಿ, ತಂದೆ, ಅಣ್ಣ, ಅತ್ತಿಗೆ ಆಗಾಗ್ಗೆ ಹೇಳುತ್ತಿದ್ದ ಕೆಲಸಗಳಲ್ಲಿ ಅನ್ನಮಯ್ಯ ಅನಾಸಕ್ತನಾಗಿದ್ದನು. ಒಂದು ದಿನ ಹಸುಗಳಿಗೆ ಗ್ರಾಸವನ್ನು ತರಲೆಂದು ಹೋದ ಅನ್ನಮಯ್ಯ "ತಾಯಿ, ತಂದೆ, ದೈವ, ಗುರು ಸಂಪತ್ತುಗಳೆಲ್ಲವೂ ತಾನೇ ಆಗಿ ಕಾಪಾಡುವ ಶೇಷಾದ್ರಿನಾಥನನ್ನು ಸೇವಿಸುವೆ" (ಅ. ಚ., ಪು. 12) ಎಂದುಕೊಂಡು ತಾಳಮೇಳಾದಿಗಳಿಂದ ಭಜನೆ ಮಾಡುತ್ತಾ ಬರುತ್ತಿದ್ದ ಭಕ್ತರ ಒಡಗೂಡಿ ತಿರುಪತಿ ಕಡೆಗೆ ಪ್ರಯಾಣ ಬೆಳೆಸಿದ.

## ತಿರುಪತಿಯಾತ್ರೆ

ಅನ್ನಮಯ್ಯ ತಿರುಪತಿಯಾತ್ರೆ ಕೈಗೊಂಡಾಗ ಆತನ ವಯಸ್ಸು ಎಂಟು ವರ್ಷ ಎಂದೂ ಆಗಲೇ ಆ ಬಾಲಕನಿಗೆ ಸಂಕೀರ್ತನೆಗಳನ್ನು ಬರೆಯುವ ಶಕ್ತಿ ಇತ್ತೆಂದೂ ತಿರುಮಲೆ ಬೆಟ್ಟ ಹತ್ತುವಾಗ ಒಂದು ಶತಕವನ್ನೇ ಹೇಳಿದನೆಂದೂ ಅನ್ನಮಾಚಾರ್ಯ ಚರಿತ್ರದಲ್ಲಿ ಹೇಳಲಾಗಿದೆ.

ಬೆಟ್ಟದ ಮೇಲೆ ಹೋಗಿ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಮಿಂದು ದೇವಾಲಯದೊಳಕ್ಕೆ ಪ್ರವೇಶಿಸಿ ವೇಂಕಟೇಶ್ವರನ ದಿವ್ಯ ಮಂಗಳಮೂರ್ತಿಯನ್ನು ಅನ್ನಮಯ್ಯ ನೋಡಿದ ಸಂದರ್ಭವನ್ನು ಚಿನ್ನನ್ನ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ (ಅ. ಚ., ಪು. 22).

## ವೈಷ್ಣವ ಸ್ವೀಕಾರ

ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ಗುರುವನ್ನು ಸ್ತುತಿಸುವ ಹಲವು ಗೀತೆಗಳಿವೆ. ಅನ್ನಮಾಚಾರ್ಯ ಚರಿತ್ರದ ಪ್ರಕಾರ ಮಹಾಭಾಗವತನಾದ ಘನವಿಷ್ಣುವೆಂಬ ವೈಷ್ಣವಯತಿಗೆ ಸ್ವಾಮಿ ಕನಸಿನಲ್ಲಿ ಕಾಣಿಸಿಕೊಂಡು ಅನ್ನಮಯ್ಯನ ಗುರುತುಗಳನ್ನು ಹೇಳಿ ಮುದ್ರಾಧಾರಣೆ ಮಾಡಿಸಬೇಕೆಂದರಂತೆ! ಮಾರನೆಯ ದಿನ ಆ ವೈಷ್ಣವಯತಿ ಅನ್ನಮಯ್ಯನಿಗೆ ಪಂಚ ಸಂಸ್ಕಾರಗಳನ್ನು ಮಾಡಿದರಂತೆ. ಅಂದಿನಿಂದ ಅನ್ನಮಾಚಾರ್ಯರಾದರು. ಅವರ ವಂಶವೆಲ್ಲ ವೈಷ್ಣವರ ವಂಶವಾಯಿತು.

ಕೆಲವು ವರ್ಷಗಳ ಕಾಲ ಅನ್ನಮಾಚಾರ್ಯರು ಗುರುಸನ್ನಿಧಿಯಲ್ಲಿ ಸಾಧನೆ ಮಾಡಿದರು. ಅನ್ನಮಾಚಾರ್ಯರ ತಾಯಿ ಮಗನನ್ನು ಹುಡುಕಿಕೊಂಡು ತಿರುಮಲೆಗೆ

ಬಂದರು. ಆಚಾರ್ಯರು ತಾಯಿಯ ಜತೆ ಊರಿಗೆ ಮರಳಿ ಹೋಗಲು ಸಮ್ಮತಿಸಲಿಲ್ಲ. ಆದರೆ ಗುರುವಿನ ಆಜ್ಞೆಯಿಂದ ತಮ್ಮ ಊರಿಗೆ ಹಿಂತಿರುಗಬೇಕಾಯಿತು.

**ಮದುವೆ**

ತಾಳ್ಳಪಾಕ ಗ್ರಾಮಕ್ಕೆ ಹಿಂತಿರುಗಿದ ಅನ್ನಮಾಚಾರ್ಯರು ತಿರುಮಲಮ್ಮ ಮತ್ತು ಅಕ್ಕಲಮ್ಮ ಎಂಬಿಬ್ಬರನ್ನು ಏಕಕಾಲದಲ್ಲೇ ಮದುವೆಯಾದರು. ಗೃಹಸ್ಥರಾದ ಅವರು ಅನೇಕ ಪುಣ್ಯಸ್ಥಳಗಳನ್ನು ಸಂದರ್ಶಿಸಿದರು. ನೂತ್ನ ಯೌವನದಲ್ಲಿದ್ದ ಆಚಾರ್ಯರು ವೇಂಕಟೇಶ್ವರನನ್ನು ಕುರಿತಂತೆ ಸಾವಿರಾರು ಶೃಂಗಾರ ಸಂಕೀರ್ತನೆಗಳನ್ನು ರಚಿಸಿದರು.

ವೇದಾಂತ ದೇಶಿಕರ ಸಂಪ್ರದಾಯದ ಶಠಕೋಪಮುನಿಯ ಬಳಿ ಅನ್ನಮಾಚಾರ್ಯರು ವೇದಾಂತಶಾಸ್ತ್ರವನ್ನು ಅಧ್ಯಯನ ಮಾಡಿದರು. ಯೌವನ ಕಾಲದಲ್ಲೇ ಇವರು ರಾಮಾಯಣವನ್ನು ಸಂಕೀರ್ತನ ರೂಪದಲ್ಲಿ ರಚಿಸಿದರೆಂದು ಹೇಳಲಾಗಿದೆ. (ಅ. ಚ., ಪು. 30). ಆಚಾರ್ಯರ ಹರಿಭಕ್ತಿ, ಸಂಕೀರ್ತನ ರಚನಾಶಕ್ತಿ, ಗಾನರಕ್ತಿ ನೋಡಿ ತುಂಬುರನೋ ನಾರದನೋ ಗಂಧರ್ವನೋ ಈ ರೂಪದಲ್ಲಿ ಇರುವನೆಂದು ಅವರ ಕಾಲದ ಜನ ಮಾತಾಡಿಕೊಳ್ಳುತ್ತಿದ್ದರಂತೆ!

**ರಾಜಸಾನ್ನಿಧ್ಯ**

ಅನ್ನಮಾಚಾರ್ಯರ ಪ್ರಸಿದ್ಧಿಯನ್ನು ಅರಿತ ಸಾಳುವ ನರಸಿಂಹರಾಯ ಆಚಾರ್ಯರನ್ನು ಸಂದರ್ಶಿಸಿದ. ವಿಜಯನಗರದ ಈ ಅರಸ ಆಚಾರ್ಯರ ಸಮವಯಸ್ಕನಾಗಿದ್ದ. ವಿಜಯನಗರವನ್ನು ಪಡೆಯುವ ಮುಂಚೆ ನರಸಿಂಹ ಟಂಗುಟೂರು ಎಂಬ ಪ್ರದೇಶದ ದಂಡನಾಥನಾಗಿದ್ದನೆಂದು ಅನ್ನಮಾಚಾರ್ಯ ಚರಿತ್ರದಿಂದ ಊಹಿಸಬಹುದು (ಪು. 31). ಆಚಾರ್ಯರನ್ನು ಗುರುವಾಗಿ, ಬಂಧುವಾಗಿ ಸ್ವೀಕರಿಸಿದ ನರಸಿಂಹರಾಯ ಈ ವಾಗ್ಗೇಯಕಾರರ ಕೀರ್ತನಾಮೃತವನ್ನು ಸೇವಿಸಿ ಸಂತೋಷಪಡುತ್ತಿದ್ದ. ತನ್ನ ಬಗೆಗೆ ಕೀರ್ತನೆಯನ್ನು ಬರೆಯಬೇಕೆಂದು ನರಸಿಂಹರಾಯನು ಕೇಳಿದನಂತೆ. ಆತನ ಕೋರಿಕೆಯನ್ನು ತಿರಸ್ಕರಿಸಿದರಂತೆ. ಇದರಿಂದ ಅನ್ನಮಯ್ಯ ಸೆರೆಮನೆ ಸೇರಿದರಂತೆ. ತನ್ನ ಭಕ್ತಿಯ ಶಕ್ತಿಯಿಂದ ಅಲ್ಲಿಂದ ಬಿಡುಗಡೆಹೊಂದಿ ಅರಸನಿಗೆ ಬುದ್ಧಿ ಕಲಿಸಿದರಂತೆ (ಅ. ಚ., ಪು. 38)!

**ಕವಿಕುಟುಂಬ**

ಆಚಾರ್ಯರ ಕುಟುಂಬದಲ್ಲಿ ಎಲ್ಲರೂ ಯಾವುದಾದರೊಂದು ಸಾಹಿತ್ಯ ಪ್ರಕಾರದಲ್ಲಿ ಕೃಷಿ ಮಾಡಿದವರೇ ಆಗಿರುವುದು ಗಮನಾರ್ಹ. ಅನ್ನಮಾಚಾರ್ಯರ ಹೆಂಡತಿ ತಿರುಮಲಾಂಬ (ತಿಮ್ಮಕ್ಕ) ವಿದುಷೀಮಣಿ, ಕವಯಿತ್ರಿ. ಈಕೆ 'ಸುಭದ್ರಾಪರಿಣಯ'ವೆಂಬ ದ್ವಿಪದ ಛಂದಸ್ಸಿನ ಕೃತಿಯನ್ನು ರಚಿಸಿದ್ದಾಳೆ.

ತಿಮ್ಮಕ್ಕನ ಮಗ ನರಸಿಂಗನ್ನ ಅನೇಕ ಸಭೆಗಳಲ್ಲಿ ವಾದಮಾಡಿ ಗೆದ್ದ ಧೀಶಾಲಿ; ಪ್ರತಿವಾದಿದೈತ್ಯ, ಸಂಗೀತ ಮರ್ಮಜ್ಞ. ತೆಲುಗಿನ ಪ್ರಸಿದ್ಧ ಕವಿ ತೆನಾಲಿ ರಾಮಕೃಷ್ಣ ನರಸಿಂಗನನ್ನು ಪದ್ಯಗದ್ಯಕಾವ್ಯಗಳನ್ನು ಬರೆದು ಹೆಸರುವಾಸಿಯಾದನೆಂದು ಹೇಳಿದ್ದಾನೆ; (ಪಾಂಡುರಂಗ ಮಹಾತ್ಮ್ಯದ ಪೀಠಿಕಾಭಾಗ). ನರಸಿಂಹನ ಕೃತಿಗಳಾವುವೂ ಲಭಿಸಿಲ್ಲ.

ಪೆದತಿರುಮಲಾಚಾರ್ಯ ಅನ್ನಮಾಚಾರ್ಯರ ಕಿರಿಯ ಹೆಂಡತಿ ಅಕ್ಕಲಾಂಬನ ಮಗ. ತಂದೆಯಂತೆ ಈತನೂ ದಿನಕ್ಕೊಂದು ಕೀರ್ತನೆ ಬರೆದು ವೇಂಕಟೇಶ್ವರನನ್ನು ಸೇವಿಸಿದ. ಭಕ್ತಕವಿಯಾದ ಈತ ವೇದಾಂತ ವಿದ್ಯಾಪ್ರವೀಣ, ಸಂಗೀತ ಸಾಹಿತ್ಯ ಮರ್ಮಜ್ಞ, ಗಾಯಕ, ಬಹುಭಾಷಾ ಪಂಡಿತ.

ಪೆದತಿರುಮಲಾಚಾರ್ಯನ ಮಗನಾದ ಚಿನತಿರುಮಲಾಚಾರ್ಯ ಸಂಸ್ಕೃತಾಂಧ್ರ ಭಾಷೆಗಳಲ್ಲಿ ಮಹಾಕವಿ, ವಿದ್ವಾಂಸ. ಈತನಿಗೆ ಅಷ್ಟಭಾಷಾ ಕವಿ ಚಕ್ರವರ್ತಿ ಎಂಬ ಬಿರುದಿತ್ತು. ತಂದೆ ಮತ್ತು ತಾತ ಬರೆದಂತೆ ಈತನೂ ಶೃಂಗಾರಾಧ್ಯಾತ್ಮ ಸಂಕೀರ್ತನೆ ಗಳನ್ನು ರಚಿಸಿದ್ದಾನೆ.

ಚಿನತಿರುಮಲಾಚಾರ್ಯನ ತಮ್ಮನೂ ಪೆದತಿರುಮಲಾಚಾರ್ಯನ ನಾಲ್ಕನೆಯ ಮಗನೂ ಆದ ಚಿನ ತಿರುವೇಂಗಳನಾಥ (ಚಿನ್ನನ್ನ) ದ್ವಿಪದ ಕಾವ್ಯಗಳಿಗೆ ಹೆಸರುವಾಸಿ ಯಾದವನು. ತಾತನ ಜೀವನವನ್ನು ದ್ವಿಪದ ರೂಪದಲ್ಲಿ ಬರೆದು ಅನ್ನಮಾಚಾರ್ಯರಲ್ಲಿ ಆಸಕ್ತಿ ಇರುವವರಿಗೆ ತುಂಬ ಉಪಕಾರ ಮಾಡಿದ್ದಾನೆ. 'ಅಷ್ಟಮಹಿಷೀ ಕಲ್ಯಾಣ', 'ಉಷಾಕಲ್ಯಾಣ', 'ಪರಮಯೋಗಿ ವಿಲಾಸ', 'ಅನ್ನಮಾಚಾರ್ಯ ಚರಿತ್ರಮು' ಮುಂತಾದವು ಈತನ ರಚನೆಗಳು.

ಚಿನ ತಿರುಮಲಾಚಾರ್ಯನ ಮಗನಾದ ತಿರುವೆಂಗಳಪ್ಪ ಅಮರು ಕಾವ್ಯವನ್ನು ತೆಲುಗಿಗೆ ಅನುವಾದ ಮಾಡಿದ್ದಲ್ಲದೆ ನಾಮಲಿಂಗಾನುಶಾಸನಕ್ಕೆ ತೆಲುಗು ವ್ಯಾಖ್ಯೆಯನ್ನೂ ಕಾವ್ಯಪ್ರಕಾಶಕ್ಕೆ ಸಂಸ್ಕೃತ ವ್ಯಾಖ್ಯೆಯನ್ನೂ ಬರೆದಿದ್ದಾನೆ.

ಅನ್ನಮಾಚಾರ್ಯರಿಂದ ಹಿಡಿದು ಅನಂತರದ ನಾಲ್ಕು ತಲೆಮಾರಿನ ತನಕ ತೆಲುಗು ಸಾಹಿತ್ಯ ಕ್ಷೇತ್ರದಲ್ಲಿ ಭಕ್ತಿಶ್ರದ್ಧೆಗಳಿಂದ ಕೆಲಸ ಮಾಡಿರುವುದು ಅಪೂರ್ವವೂ ಶ್ಲಾಘ ನೀಯವೂ ಆಗಿದೆ. ಇವರೆಲ್ಲರಿಗೂ ಅನ್ನಮಯ್ಯನವರದೇ ಸ್ಫೂರ್ತಿ.

## ಪದಕವಿತಾ ಪಿತಾಮಹ

ಅನ್ನಮಯ್ಯ ಬಾಲಕನಿರುವಾಗಲೇ ಶತಕ ರಚನೆ ಮಾಡುವ ಸಾಮರ್ಥ್ಯ ಪಡೆದಿದ್ದ ರೆಂದು 'ಅನ್ನಮಾಚಾರ್ಯ ಚರಿತ್ರ' ಹೇಳುತ್ತದೆ. ಆಚಾರ್ಯರು ತಮ್ಮ ಸಂಕೀರ್ತನೆ ಗಳಲ್ಲಿ ತೋರಿರುವ ವೈವಿಧ್ಯ, ಭಾವಪುಷ್ಟಿ, ಗಾಂಭೀರ್ಯ ಮತ್ತು ಪ್ರತಿಭೆಗಳನ್ನು ಪರಿಶೀಲಿಸಿದಾಗ ಪದಕವಿತೆಗೆ ಬದಲಾಗಿ ಪದ್ಯಕವಿತೆ ಬರೆದಿದ್ದರೆ ಅವರು ಮಹಾಕವಿ ಎಂಬ ಬಿರುದನ್ನೂ ಪಡೆಯುತ್ತಿದ್ದರೆಂದೆನಿಸುತ್ತದೆ.

ಇವರಿಗಿಂತ ಮೊದಲೇ ತೆಲುಗಿನಲ್ಲಿ ಹಾಗೂ ಕನ್ನಡದಲ್ಲಿ ಪದಕವಿತೆ ರಚಿಸಿದವರಿಲ್ಲದಿಲ್ಲ. ತೆಲುಗಿನ ಕೃಷ್ಣಮಾಚಾರ್ಯರು ಮತ್ತು ಕನ್ನಡದ ಶ್ರೀಪಾದರಾಯರಿಂದ ಅನ್ನಮಾಚಾರ್ಯರಿಗೆ ಸ್ಫೂರ್ತಿ ದೊರಕಿರಬಹುದು. ಆದರೆ ತೆಲುಗಿನ ಪದಸಾಹಿತ್ಯಕ್ಕೆ ಅನ್ನಮಯ್ಯನ ಕೊಡುಗೆ ಅಪೂರ್ವವಾದುದು ಮತ್ತು ಅದ್ವಿತೀಯವಾದುದು. ಕೃಷ್ಣಮಾಚಾರ್ಯರ ರಚನೆಗಳು ಬಹಳ ಮಟ್ಟಿಗೆ 'ವಚನ'ಗಳ ರೂಪದಲ್ಲಿವೆ. 'ಕೀರ್ತನೆ' ಎಂಬುದು ಕನ್ನಡದ ಹರಿದಾಸರ ರಚನೆಗಳಲ್ಲಿ ಸ್ಪಷ್ಟವಾದ ರೂಪವನ್ನು ಪಡೆಯಿತೆಂದು ಕಾಣುತ್ತದೆ. ಈ ಪರಂಪರೆಯ ಹಿನ್ನೆಲೆಯಲ್ಲಿ ಸುಪ್ರಸಿದ್ಧ ದೇಶಿರಾಗಗಳನ್ನು ಸ್ವೀಕರಿಸಿ, ಸುಲಲಿತ ಲಯತಾಳ ಸಮನ್ವಯದಿಂದ ಸಾವಿರಾರು ಪದಗಳನ್ನು ಬರೆದು 'ಪದಕವಿತಾ ಪಿತಾಮಹ'ನೆಂಬ ಬಿರುದನ್ನು ಗಳಿಸಿಕೊಂಡವರು ಅನ್ನಮಯ್ಯ.

**ಸಾಧನೆ**

"ನಿನ್ನ ಕಥಾಮೃತವೇ ನಿರತ ಸೇವನೆ ನನಗೆ, ಇದೇ ಎಂದೆಂದಿಗೂ ಮಂತ್ರರಾಜ, ಇದೇ ವೇದ ಸಂಹಿತೆಯ ಪಾಠ, ಇದೇ ಅನೇಕ ಶಾಸ್ತ್ರಗಳ ಅಧ್ಯಯನ, ಇದೇ ಸಂಧ್ಯಾವಂದನ, ಜಪ" ಎಂದು ಹರಿಕಥಾಮೃತದ ಆಸ್ವಾದನೆಯಲ್ಲಿ ಮೈಮರೆತು ಹಾಡಿದ ಭಕ್ತಕವಿ, ಅನ್ನಮಾಚಾರ್ಯರು. ಇವರು ಬಾಳಿದ ಹದಿನೈದನೆಯ ಶತಮಾನ ತೆಲುಗು ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಧಾನವಾದ ಹಂತ ಎನ್ನಬಹುದು. ಪದ್ಯ ಸಾಹಿತ್ಯದ ಮಟ್ಟಿಗೆ ಅದನ್ನು ಸಂಧಿಯುಗ ಎನ್ನುತ್ತಾರೆ. ನನ್ನಯ, ತಿಕ್ಕನ ಮತ್ತು ಎಜ್ಞನ, ಎಂಬ ಕವಿತ್ರಯದ ಕಾಲ ಮುಗಿದು ಶ್ರೀನಾಥಾದಿ ಕವಿಗಳು ಕಾವ್ಯಲೋಕಕ್ಕೆ ಹೆಜ್ಜೆ ಇಟ್ಟ ಕಾಲವದು. ಕವಿತ್ರಯದ ಕಾಲದಲ್ಲಿ ಕಾವ್ಯ ನಿರ್ಮಾಣದ ಮುಖ್ಯ ಪ್ರಯೋಜನ ಜಗತ್ತಿನ ಹಿತವೊಂದೇ ಆಗಿತ್ತು. ಹದಿನೈದನೆಯ ಶತಮಾನದ ಕಾಲಕ್ಕೆ ಆನಂದವುಂಟುಮಾಡುವುದೇ ಕಾವ್ಯ ಪ್ರಯೋಜನ ಎಂಬ ಆಲೋಚನೆ ಕವಿಗಳಲ್ಲಿ ಪ್ರಬಲವಾಗುತ್ತಾ ಬಂದಿತು. ಇಂಥ ಕಾಲದಲ್ಲಿ ಅನ್ನಮಾಚಾರ್ಯರು ಅವತರಿಸಿ ಅಧ್ಯಾತ್ಮ ಸಂಕೀರ್ತನೆಗಳನ್ನೂ ಶೃಂಗಾರ ಸಂಕೀರ್ತನೆಗಳನ್ನೂ ರಚಿಸಿದರು.

ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ಪಲ್ಲವಿ ಮತ್ತು ಚರಣ ಎಂಬ ಎರಡು ಮುಖ್ಯ ಭಾಗಗಳು ಇರುತ್ತವೆ. ಕೀರ್ತನೆಯ ಪರಮಾರ್ಥ ಪಲ್ಲವಿಯಲ್ಲಿ ನಿಕ್ಷಿಪ್ತವಾಗಿರುತ್ತದೆ. ಈ ಅರ್ಥ ಅನಂತರದ ಚರಣಗಳಲ್ಲಿ ವಿಸ್ತೃತರೂಪವನ್ನು ಪಡೆಯುತ್ತದೆ. ಒಂದು ವೇಳೆ ಕೀರ್ತನೆಯ ತಿರುಳು ಒಂದೇ ವಾಕ್ಯದಲ್ಲಿ ಮುಗಿಯದಿದ್ದರೆ ಅದು ಅನುಪಲ್ಲವಿಯಾಗಿ ಪರಿಣಮಿಸುವುದುಂಟು. ಅನ್ನಮಾಚಾರ್ಯರಲ್ಲಿ ಅನುಪಲ್ಲವಿ ಎಲ್ಲೋ ಕೆಲವೆಡೆ ಮಾತ್ರ ಕಂಡುಬರುತ್ತದೆ.

ಆಚಾರ್ಯರದು ಮುಖ್ಯವಾಗಿ ಆತ್ಮಾನುಭವ ಕಾವ್ಯ. ಅವರ ಕೀರ್ತನೆಗಳು ವೇಂಕಟೇಶ್ವರನನ್ನು ಉದ್ದೇಶಿಸಿದವೇ ಆದರೂ ಅವರು ಅಭಿವ್ಯಕ್ತಿಸಿದ್ದು ತಮ್ಮ ಅಂತರಂಗ-ಬಹಿರಂಗ ಅನುಭವಗಳನ್ನೇ. ದೋಷರಹಿತವಾದ, ಪ್ರಾಮಾಣಿಕವಾದ ಮತ್ತು

ತೀವ್ರವಾದ ಭಗವದ್ಭಕ್ತಿ ಅವರ ರಚನೆಗಳಲ್ಲಿ ಕಂಡುಬರುತ್ತದೆ. ಅವರ ಕೀರ್ತನೆಗಳಲ್ಲಿರುವಷ್ಟು ಭಾಷಾವೈವಿಧ್ಯ, ಭಾವನಾಶಕ್ತಿ, ಆಳವಾದ ಅನುಭವಗಳ ಅಭಿವ್ಯಕ್ತಿ ತೆಲುಗಿನ ಬೇರೆ ಯಾವ ಕೀರ್ತನಕಾರರಲ್ಲೂ ಕಂಡುಬರುವುದಿಲ್ಲ.

ಅನ್ನಮಾಚಾರ್ಯರ ರಚನೆಗಳಲ್ಲಿ ಸಾವಿರಾರು ಶೃಂಗಾರ ಪದಗಳಿವೆ. ಶೃಂಗಾರವನ್ನೂ ಆಧ್ಯಾತ್ಮಿಕದ ಮೆಟ್ಟಲನ್ನೇರಿಸಿ ಈ ಎರಡು ವಿಭಿನ್ನ ತತ್ತ್ವಗಳಿಗೆ ಸಮನ್ವಯವನ್ನು ಸಾಧಿಸಿದ ಅಪೂರ್ವ ವ್ಯಕ್ತಿ ಇವರು. ಹರಿ ಭೋಗಪುರುಷ; ಸಾಕಾರ ಶೃಂಗಾರಮೂರ್ತಿ. ಹರಿಯ ಅವತಾರವಾದ ವೇಂಕಟೇಶ್ವರ ಶೃಂಗಾರ, ವಿಲಾಸ, ಅಲಂಕಾರಗಳಿಗೆ ಹೆಸರುವಾಸಿಯಾದವನು. ಇಂಥ ಭೋಗಮೂರ್ತಿಯ ಕೈಂಕರ್ಯದಲ್ಲಿ ನಿರತನಾದ ಭಕ್ತ ಭೋಗಯೋಗಗಳ ಸಮನ್ವಯ ಸಾಧಿಸಹೊರಟಿರುವುದು ಸಹಜವೇ.

ಅನ್ನಮಾಚಾರ್ಯರ ಸಂಕೀರ್ತನೆಗಳ ವೈವಿಧ್ಯ ಗಮನಾರ್ಹವಾದುದು. ವರ್ಣ್ಯ ವಿಷಯದ ದೃಷ್ಟಿಯಿಂದ ಇವರು ತಮ್ಮ ರಚನೆಗಳನ್ನು ಶೃಂಗಾರ ಮತ್ತು ವೈರಾಗ್ಯ ಸಂಕೀರ್ತನೆಗಳೆಂದು ಕರೆದರು. ಅವುಗಳಲ್ಲಿ ಹಲವು ಒಳಪ್ರಭೇದಗಳು ಕಂಡುಬರುತ್ತವೆ. ಶೃಂಗಾರ ಸಂಕೀರ್ತನೆಗಳು "ಶೃಂಗಾರ ವಧೂ ಮೃದು ಮಧುರ ಮನೋಜ್ಞ ವಾಕ್ಯ ಮಿಶ್ರವಾದುವೆಂದೂ" ಆ ಕೀರ್ತನೆಗಳಲ್ಲಿರುವ ಉಲ್ಲಾಸ, ಮನೋಜ್ಞ ಉಕ್ತಿಗಳು ಗ್ರಾಮ್ಯವಾದರೂ ಸಲ್ಲುತ್ತವೆಂದೂ ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲೇ ಹೇಳಿದ್ದಾರೆ. ಆದರೆ ವೈರಾಗ್ಯ ಪದಗಳು ಅಗ್ರಾಮ್ಯರಮ್ಯವಾಗಿ, ವಿಷ್ಣುಚರಿತೋದಾರಗಳಾಗಿರಬೇಕು. ಇವನ್ನೇ ಅಧ್ಯಾತ್ಮ ಸಂಕೀರ್ತನಗಳೆಂದೂ ಕರೆಯಲಾಗಿದೆ. ಇವು ಸಂಪ್ರದಾಯಬದ್ಧವಾಗಿ, ಅಲಂಕಾರ, ಚಮತ್ಕಾರ, ಭಾವ, ರಸ ಮುಂತಾದ ಸಾಮಾನ್ಯ ಗುಣಗಳಿಂದ ಕೂಡಿರುವುದು ಮಾತ್ರವಲ್ಲದೆ, ಪಾವನ ಚರಿತದ ನಿರೂಪಣೆಯಿಂದ ವಿಶಿಷ್ಟವಾಗಿರಬೇಕು.

ಪದಗಳಲ್ಲಿ ವೃತ್ತಪದ, ನಿಬಂಧಪದ ಮತ್ತು ಚೂರ್ಣಪದ ಎಂಬ ಪ್ರಭೇದಗಳಿವೆ. ಇಪ್ಪತ್ತಾರು ಛಂದೋಭೇದಗಳಿಗೆ ಸಂಬಂಧಿಸಿದವು ವೃತ್ತ ಪದಗಳು. ಪ್ರಾಸ, ವಡಿ, ಮಾತ್ರೆ, ತಾಳ ಸಂಗತಿಗಳಿಂದ ಕೂಡಿರುವವು ನಿಬಂಧ ಪದಗಳು. ರಾಗ, ತಾಳ ಬಂಧಗಳಿಂದ ಕೂಡಿದ ವಚನಗಳು ಮತ್ತು ರಾಗ ತಾಳ ರಹಿತವಾಗಿ ಗೇಯಗಂಧಿಗಳೆಂದು ಹೆಸರಾದ ವಚನಗಳು ಚೂರ್ಣಪದ ಎಂಬ ಹೆಸರನ್ನು ಪಡೆದಿವೆ. ಇವುಗಳಲ್ಲಿ ಅನ್ನಮಯ್ಯ ನಿಬಂಧ ಪದಗಳನ್ನು ರಚಿಸಿದ್ದಾರೆ. ಜನಪದ ಕಾವ್ಯಸತ್ತ್ವವನ್ನು ಅವರಂತೆ ಬಳಸಿಕೊಂಡ ತೆಲುಗು ಕವಿಗಳು ಬಹಳ ವಿರಳ.

ಅನ್ನಮಾಚಾರ್ಯರು ಸಂಸ್ಕೃತದಲ್ಲಿಯೂ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ತೆಲುಗು ಭಾಷಾ ರಚನೆಗಳಿಗೆ ಅಲಂಕಾರಗಳಾದ ಯತಿಪ್ರಾಸಗಳನ್ನು ಸಂಸ್ಕೃತ ಕೀರ್ತನೆಗಳಲ್ಲಿಯೂ ಬಳಸಿದ್ದಾರೆ. ಶಬ್ದಾಲಂಕಾರಗಳಿಂದ ಮಧುರ ಶೈಲಿಯಲ್ಲಿ ಇವರು ಬರೆದ ಈ ಸಂಕೀರ್ತನೆಗಳೂ ಜನಪ್ರಿಯವಾಗಿವೆ.

## ಇತರ ಕೃತಿಗಳು

ಸಂಕೀರ್ತನೆಗಳಲ್ಲದೆ ಆಚಾರ್ಯರು ರಚಿಸಿದ ಇತರ ಕೃತಿಗಳನ್ನೂ ಇಲ್ಲಿ ಹೆಸರಿಸಬೇಕಾಗಿದೆ. ಇವರ ಸಾಧನೆ ಸಂಕೀರ್ತನ ಕ್ಷೇತ್ರದಲ್ಲೇ ಹೆಚ್ಚಾಗಿದ್ದರೂ ಬೇರೆ ಪ್ರಕಾರಗಳಲ್ಲಿಯೂ ಇವರು ಕೈಯಾಡಿಸಿದ್ದಾರೆ.

'ಶೃಂಗಾರಮಂಜರಿ' ವರ್ಣನಾಪ್ರಧಾನವಾಗಿ ಮೂಡಿಬಂದ ದ್ವಿಪದ ಛಂದಸ್ಸಿನ ಕಾವ್ಯ. ಶ್ರೀಕೃಷ್ಣದೇವರಾಯನ ಕಾಲದಲ್ಲಿ ಶೃಂಗಾರರಸದಿಂದ ಕೂಡಿದ, ವರ್ಣನಾಪ್ರಧಾನವಾದ 'ಪ್ರಬಂಧ'ವೆಂಬ ಹೆಸರಿನ ಚಂಪೂಕಾವ್ಯ ಪ್ರಕಾರ ಮೂಡಿಬಂದಿತು. 'ಶೃಂಗಾರಮಂಜರಿ' ಛಂದಸ್ಸೊಂದನ್ನು ಬಿಟ್ಟು ಬೇರೆಲ್ಲ ಲಕ್ಷಣಗಳಲ್ಲಿ 'ಪ್ರಬಂಧ'ಗಳನ್ನೇ ಹೋಲುತ್ತದೆ. ದ್ವಿಪದ ಛಂದಸ್ಸಿನಲ್ಲೇ ಅನ್ನಮಾಚಾರ್ಯರು ಒಂದು ರಾಮಾಯಣವನ್ನೂ ಬರೆದಿದ್ದರೆಂದು ತಿಳಿದುಬರುತ್ತದೆ. ಆದರೆ ಅದು ಈಗ ಅಲಭ್ಯ.

ಬಾಲಕನಾಗಿರುವಾಗ 'ಸರಸ ಕವಿತ್ವ ವಾಚಾಪ್ರೌಢಿ'ಯಿಂದ ಒಂದು ಶತಕವನ್ನು ಬರೆದನೆಂದು 'ಅನ್ನಮಾಚಾರ್ಯ ಚರಿತ್ರ' ಹೇಳುತ್ತದೆ. ಈ ಶತಕ 'ವೇಂಕಟೇಶ್ವರಾ' ಎಂಬ ಅಂಕಿತನಾಮದಿಂದ ಕೂಡಿದೆ. ಅನ್ನಮಾಚಾರ್ಯರು ಒಟ್ಟು ಹನ್ನೆರಡು ಶತಕಗಳನ್ನು ಬರೆದರೂ ಈಗ ವೇಂಕಟೇಶ್ವರ ಶತಕವೊಂದು ಮಾತ್ರ ಲಭಿಸಿದೆ.

ಇವರು 'ಸಂಕೀರ್ತನ ಲಕ್ಷಣ'ವೆಂಬ ಹೆಸರಿನ ಲಕ್ಷಣಶಾಸ್ತ್ರವನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಇದು ಅಲಭ್ಯ. ಇದರ ತೆಲುಗು ಅನುವಾದ ಚಿನತಿರುಮಲಾಚಾರ್ಯನಿಂದ 'ಸಂಕೀರ್ತನ ಲಕ್ಷಣಮು' ಎಂಬ ಹೆಸರಿನಲ್ಲಿ ಮೂಡಿಬಂದಿದೆ. ಸಂಸ್ಕೃತದ ಮೂಲಗ್ರಂಥಕ್ಕೆ ಪೆದತಿರುಮಲನ ವ್ಯಾಖ್ಯಾನವೂ ಇತ್ತೆಂದು ತಿಳಿದುಬರುತ್ತದೆ.

ಅನ್ನಮಾಚಾರ್ಯರು ಅನೇಕ ಭಾಷೆಗಳಲ್ಲಿ 'ನಾನಾಪ್ರಬಂಧ'ಗಳನ್ನು ಬರೆದರೆಂದು 'ಅನ್ನಮಾಚಾರ್ಯ ಚರಿತ್ರ' ತಿಳಿಸುತ್ತದೆ. ಚಿನತಿರುಮಲಾಚಾರ್ಯ 'ಅಷ್ಟಭಾಷಾ ದಂಡಕ' ರಚಿಸಿರುವುದನ್ನು ನೋಡಿದರೆ ಹಲವು ಭಾಷೆಗಳಲ್ಲಿ ಪಾಂಡಿತ್ಯ ಪಡೆಯುವ ಈ ಆಸಕ್ತಿ ಅನ್ನಮಯ್ಯನ ಕಾಲದಿಂದಲೂ ಇತ್ತೆಂದು ಊಹಿಸಬಹುದು.

## ಅನ್ನಮಾಚಾರ್ಯರ ಸೇವೆ

ಸಂಕೀರ್ತನ ಲಕ್ಷಣವನ್ನೂ ಸಾವಿರಾರು ಕೀರ್ತನೆಗಳನ್ನೂ ಬರೆದ ಅನ್ನಮಾಚಾರ್ಯರ ಸೇವೆ ಗಣನೀಯವಾದುದು. ಸಂಕೀರ್ತನ ರೂಪದಲ್ಲಿ ವೇಂಕಟೇಶ್ವರನನ್ನು ಕೀರ್ತಿಸಿದ ಮೊದಲ ತೆಲುಗು ಕವಿಯಾಗಿಯೂ ಇವರನ್ನು ನೆನೆಯಬೇಕು. ವೇಂಕಟೇಶ್ವರನನ್ನು ಕುರಿತಂತೆ ಇಷ್ಟು ಸಮಗ್ರವಾಗಿ, ಸಮರ್ಪಕವಾಗಿ, ವೈವಿಧ್ಯಮಯವಾಗಿ ನಿರೂಪಿಸಿದ ಇನ್ನೊಬ್ಬ ತೆಲುಗು ಕವಿ ಇಲ್ಲ; ಅನ್ನಮಾಚಾರ್ಯರಿಗೆ ಮೊದಲಂತೂ ಇಲ್ಲವೇ ಇಲ್ಲ. ತಾಳ್ಳಪಾಕ ವಂಶದ ಎಲ್ಲ ಕವಿಗಳೂ ಇದನ್ನೇ ಮುಂದುವರಿಸಿದರು.

ಜನಪದ ವಸ್ತು ಮತ್ತು ರೀತಿಗಳನ್ನು ಜೀರ್ಣಿಸಿಕೊಂಡು ಕೀರ್ತನ ಸಾರಸ್ವತಕ್ಕೆ ಅವನ್ನು ಅಳವಡಿಸಿಕೊಂಡ ಕವಿಗಳಲ್ಲೂ ಅನ್ನಮಾಚಾರ್ಯರೇ ಮೊದಲಿಗರು. ದೇಶಿ

ಪ್ರಕಾರಗಳಾದ ಗೊಬ್ಬಿಳ್ಳು, ಲಾಲಿಪದ, ಚಂದಮಾಮಪದ ಮುಂತಾದವನ್ನು ಸಂಕೀರ್ತನ ರೂಪಕ್ಕೆ ಪರಿವರ್ತಿಸಿದ ಕವಿಗಳಲ್ಲಿ ಇವರಿಗೇ ಅಗ್ರಸ್ಥಾನ ಸಲ್ಲುತ್ತದೆ.

ಅನ್ನಮಾಚಾರ್ಯರ ಕೀರ್ತನೆಗಳು ನಾದಪ್ರಧಾನ ಎನ್ನುವುದಕ್ಕಿಂತ ಅರ್ಥ-ಭಾವ ಪ್ರಧಾನವಾದವೆಂದು ಹೇಳಬೇಕು. ಸಾಹಿತ್ಯಾಂಶವೇ ಹೆಚ್ಚಾಗಿ ಇರುವುದರಿಂದ ಇವರ ರಚನೆಗಳನ್ನು ಉತ್ತಮ ಸಾಹಿತ್ಯಮೌಲ್ಯಗಳಿಂದ ಅಳೆಯಬಹುದು. ನಾಣ್ಣುಡಿಗಳು, ಜಾಣ್ಣುಡಿಗಳು, ಸಾರ್ಥಕ ಪದಪ್ರಯೋಗಗಳು ಇವರಲ್ಲಿ ಹೇರಳವಾಗಿ ಸಿಕ್ಕುತ್ತವೆ. "ಅನ್ನಮಾಚಾರ್ಯರ ಪದಕವಿತೆಯಲ್ಲಿ ನಮ್ಮನ್ನು ಆವರಿಸಿ ಪರವಶ ಉಂಟುಮಾಡುವ ಭಾವಬಲ, ಭಾಷೆಯ ಹೊಂದಾಣಿಕೆ, ಅನುಭವಗಳ ಆಳ, ವೈವಿಧ್ಯ ಬೇರೆ ಯಾವ ಪದ ಕವಿಯ ರಚನೆಗಳಲ್ಲೂ ಕಾಣದು" [1] ಎಂಬ ರಾಳ್ಳಪಲ್ಲಿ ಅನಂತಕೃಷ್ಣಶರ್ಮರ ಮಾತು ಅನುಭವೈಕವೇದ್ಯವಾದುದು.

1 "ಸ್ವರ್ಣೋತ್ಸವ ಸಂಚಿಕ" (ತೆಲುಗು), ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ, ಪು. 121.

# ಸಾಮಾಜಿಕ ಸಂಸ್ಥೆಗಳು

ಅತ್ಯಂತ ಸರಳವಾಗಿ ಹೇಳಬೇಕಾದರೆ ಸಮಾಜ ಎಂಬುದು ಮನುಷ್ಯರ ಒಂದು ಗುಂಪು. ಪ್ರಾಣಿಗಳ ಗುಂಪನ್ನು ಮನುಷ್ಯರ ಗುಂಪಿನಿಂದ ಬೇರೆ ಮಾಡುವುದೇ ಸಂಸ್ಕೃತಿ. ಈ ಸಂಸ್ಕೃತಿಯ ಒಂದು ಭಾಗವಾದ ಸಾಮಾಜಿಕ ವ್ಯವಸ್ಥೆ ಒಮ್ಮೊಮ್ಮೆ ತೀರ ಸರಳ ವಾಗಿ, ಒಮ್ಮೊಮ್ಮೆ ಅತ್ಯಂತ ಸಂಕೀರ್ಣವಾಗಿ ಕಂಡುಬರುತ್ತದೆ. ಜೀವನವನ್ನು ಸಕ್ರಮ ವಾಗಿ ಮುಂದುವರಿಸಲು ಮನುಷ್ಯ ಕೆಲವು ವ್ಯವಸ್ಥೆಗಳನ್ನು ರೂಪಿಸಿಕೊಂಡಿದ್ದಾನೆ. ಇಂಥ ಕೆಲವು ಸಾಮಾಜಿಕ ವ್ಯವಸ್ಥೆಗಳು ನಿಯಮಗಳಿಂದ ಕೂಡಿದ ಸಂಸ್ಥೆಗಳ ರೂಪದಲ್ಲಿ ಮಾನವ ಜೀವನವನ್ನು ಸುಗಮಗೊಳಿಸುತ್ತವೆ. ಸಾಮಾಜಿಕ ಸಂಸ್ಥೆಗಳಲ್ಲಿ ವಿವಾಹ, ಕುಟುಂಬ, ಬಾಂಧವ್ಯ, ಕುಲ, ಗೋತ್ರ ಮುಂತಾದವನ್ನು ಗುರುತಿಸಬಹುದು.

## ವಿವಾಹ

ಸಾಂಸ್ಕೃತಿಕ ಅಧ್ಯಯನದಲ್ಲಿ ವಿವಾಹಕ್ಕೆ ವಿಶೇಷ ಪ್ರಾಧಾನ್ಯವಿದೆ. ಸಾಮಾಜಿಕ ವ್ಯವಸ್ಥೆಯಾಗಿ ಸಾವಿರಾರು ವರ್ಷಗಳಿಂದ ನಡೆದು ಬಂದಿರುವ ವಿವಾಹ ಸಂಸ್ಕೃತಿಯ ಸ್ವರೂಪವನ್ನು ತಿಳಿಯಲು ಬಹಳ ನೆರವಾಗುತ್ತದೆ. ಮದುವೆಯ ಶಾಸ್ತ್ರ, ಆಚಾರ, ಸಂಪ್ರದಾಯ, ನಂಬಿಕೆ, ಅಲಂಕಾರ, ಅಡುಗೆ, ಆರ್ಭಟ, ಹಾಸ್ಯ, ಅಪಹಾಸ್ಯ, ಹಾಡು, ಉಡುಗೊರೆ ಮುಂತಾದವೆಲ್ಲ ಸಂಸ್ಕೃತಿಯ ಸ್ವರೂಪವನ್ನು ತಿಳಿಸುವಂಥವೇ ಆಗಿವೆ. ಮದುವೆಯ ಉಗಮ, ವಿಕಾಸ, ಪ್ರಭೇದಗಳ ಅಧ್ಯಯನ ಸಾಂಸ್ಕೃತಿಕ ಮಾನವ ಶಾಸ್ತ್ರದಲ್ಲಿ ಒಂದು ಭಾಗವೇ ಆಗಿದೆ.

ಮೊದಲ ನೋಟಕ್ಕೆ ಸ್ತ್ರೀ ಪುರುಷರ ಲೈಂಗಿಕಸಂಬಂಧವೇ ವಿವಾಹದಲ್ಲಿ ಪ್ರಧಾನ ವೆನಿಸುತ್ತದೆ. ಲೈಂಗಿಕಸಂಬಂಧವೇ ಮದುವೆಯ ಪರಮಾರ್ಥವಲ್ಲ. ಲೈಂಗಿಕ ಸಂಬಂಧದಿಂದ ಸಂತಾನೋತ್ಪತ್ತಿ ಆಗುತ್ತದೆ. ಸ್ತ್ರೀ ಪುರುಷರ ಲೈಂಗಿಕ ಸಂಪರ್ಕ ಜೈವಿಕ ಅಗತ್ಯ; ಮದುವೆ ಒಂದು ಸಾಂಸ್ಕೃತಿಕ ವ್ಯವಸ್ಥೆ. ದೈಹಿಕ ಮತ್ತು ಮಾನಸಿಕ ತೃಪ್ತಿಯನ್ನು ನೀಡುತ್ತಾ ಸಾಮಾಜಿಕ ಬಾಂಧವ್ಯಕ್ಕೆ ಸಕ್ರಮರೂಪವನ್ನು ಕೊಡುವ ವ್ಯವಸ್ಥೆಯಾಗಿ ಮದುವೆ ರೂಪುಗೊಂಡಿದೆ.

ಮದುವೆ ಎನ್ನುವುದು ವೈಯಕ್ತಿಕ ಮತ್ತು ಸಾಮಾಜಿಕ ಸಂಬಂಧಗಳ ನಡುವಿನ ಕೊಂಡಿ ಎನ್ನಬಹುದು. ಇದು ಎರಡು ಗುಂಪುಗಳ ನಡುವೆ ಬಾಂಧವ್ಯವನ್ನೂ ಬೆಳೆಸು ತ್ತದೆ. ಶಾರೀರಕ ಸಂಬಂಧವನ್ನೂ ಮೀರಿ, ಒಂದು ಸಾಮಾಜಿಕ ಸಂಬಂಧವಾಗಿ ವಿವಾಹ ನಿರ್ವಹಿಸುವ ಪಾತ್ರ ಪರಿಶೀಲನಾರ್ಹವಾದುದು. ವಿವಾಹಗಳು ವಿಭಿನ್ನ ಪ್ರದೇಶಗಳಿಗೆ

ಸೇರಿದ ಜನರನ್ನು ಒಂದುಗೂಡಿಸುತ್ತವೆ ; ಎರಡು ರಾಜ್ಯಗಳನ್ನು ಒಂದುಗೂಡಿಸುವ ಪ್ರಸಂಗಗಳನ್ನೂ ನಾವು ಇತಿಹಾಸದಲ್ಲಿ ಕಂಡಿದ್ದೇವೆ. ಕುಟುಂಬ, ಬಾಂಧವ್ಯ, ಆರ್ಥಿಕ ವ್ಯವಸ್ಥೆ, ಕುಲಪದ್ಧತಿ, ಆಡಳಿತ ಮುಂತಾದ ಅನೇಕ ವಿಷಯಗಳ ಮೇಲೆ ಪ್ರತ್ಯಕ್ಷ ವಾಗಿಯೋ ಪರೋಕ್ಷವಾಗಿಯೋ ವಿವಾಹ ಪರಿಣಾಮ ಬೀರುತ್ತದೆ.

ವಿವಾಹ ವ್ಯವಸ್ಥೆ ರೂಪುಗೊಳ್ಳುವ ಮುನ್ನ ಸ್ವೇಚ್ಛಾಪ್ರಣಯವಿತ್ತೆಂದು ಕೆಲವರು ನಂಬಿದ್ದರು. ಅತ್ಯಂತ ಪ್ರಾಚೀನರಾದ ಜನರಲ್ಲಿಯೂ ವಿವಾಹವ್ಯವಸ್ಥೆ ಇರುವುದನ್ನು ನೋಡಿದರೆ ಈ ಅಭಿಪ್ರಾಯ ನಿಲ್ಲುವುದು ಕಷ್ಟ. ಲೈಂಗಿಕ ಸ್ವೇಚ್ಛೆಯಿಂದ ಏಕಪತ್ನೀತ್ವದ ಕಡೆಗೆ ವಿವಾಹ ಪದ್ಧತಿ ವಿಕಾಸ ಹೊಂದಿತೆನ್ನುವ ಮಾರ್ಗನ್ ಮುಂತಾದವರ ಅಭಿಪ್ರಾಯ ವನ್ನು ಲೋವಿಯಂಥ ವಿದ್ವಾಂಸರು ಅಲ್ಲಗಳೆದರು. ಮಾನವರಲ್ಲಿ ಮಾತ್ರವಲ್ಲದೆ ಕೆಲವು ಪ್ರಾಣಿಗಳಲ್ಲೂ ಏಕಸಂಗಾತಿ ಪದ್ಧತಿ ಇರುವುದನ್ನು ವೆಸ್ಟರ್‌ಮಾರ್ಕ್ ತೋರಿಸಿ ಕೊಟ್ಟಿದ್ದಾನೆ. ಒಟ್ಟಿನಲ್ಲಿ ಹಿಂದುಳಿದ ಆದಿವಾಸಿ ಸಮಾಜಗಳಲ್ಲಿಯೂ ವಿವಾಹ, ಕುಟುಂಬ ಮುಂತಾದ ಸಾಮಾಜಿಕ ಸಂಸ್ಥೆಗಳ ಅಸ್ತಿತ್ವವನ್ನು ಗುರುತಿಸಬಹುದು.

## ಹಿಂದೂ ವಿವಾಹ ವಿಧಿಗಳು

ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಕೆಲವೆಡೆ ವಿವಾಹ ಪದ್ಧತಿಯ ಸೂಚನೆಗಳು ಕಂಡುಬರುತ್ತವೆ. ಇವು ಹಿಂದೂ ವಿವಾಹ ಪದ್ಧತಿಯ ಕೆಲವು ಮುಖಗಳನ್ನು ಪ್ರದರ್ಶಿಸುತ್ತವೆ. ಭಾರತೀಯ ಪರಂಪರೆಯ ವಿವಾಹ ವಿಧಿಗಳು ಸಾವಿರಾರು ವರ್ಷಗಳಿಂದ ಜನಜೀವನದಲ್ಲಿ ನಡೆದುಕೊಂಡು ಬರುತ್ತಿವೆ. ಹಿಂದೂ ವಿವಾಹದಲ್ಲಿ ಆರ್ಷ ವಿಧಿಗಳಿಗೂ ದೇಶೀಯ ವಿಧಿಗಳಿಗೂ ಸ್ವಲ್ಪ ಮಟ್ಟಿನ ವ್ಯತ್ಯಾಸವನ್ನು ನೋಡಬಹುದು. ದಕ್ಷಿಣ ದೇಶದ ಬ್ರಾಹ್ಮಣೇತರರಲ್ಲಿ ಪ್ರಚಾರದಲ್ಲಿರುವ ಪದ್ಧತಿ ದ್ರಾವಿಡಾಚಾರಕ್ಕೆ ಸೇರಿದ್ದೆಂದು ಭಾವಿಸಲಾಗಿದೆ. ವೈದಿಕಾಚಾರಗಳು ಕೂಡ ಬಹಳ ಮಟ್ಟಿಗೆ ಸಾಮಾನ್ಯಜನರ ಮಟ್ಟವನ್ನು ತಲುಪಿವೆಯಾದರೂ ಅವುಗಳಿಗೆ ಭಿನ್ನವಾದ ದೇಶೀಯಾಚಾರಗಳನ್ನೂ ಕಾಣಬಹುದು.

ಹಿಂದೂ ಸಂಪ್ರದಾಯದಂತೆ ವಿವಾಹ ಎಂಬುದು ವಿವಿಧ ಸಂಸ್ಕಾರಗಳಲ್ಲಿ ತುಂಬ ಮುಖ್ಯವಾದುದೂ ಪವಿತ್ರವಾದುದೂ ಗೃಹಸ್ಥಾಶ್ರಮದ ಬೆನ್ನೆಲುಬೂ ಆಗಿದೆ. ಋಗ್ವೇದ, ಅಥರ್ವವೇದ, ಐತರೇಯ ಬ್ರಾಹ್ಮಣ, ಧರ್ಮಸೂತ್ರಗಳು, ಸ್ಮೃತಿಗಳು ಮುಂತಾದವು ದಾಂಪತ್ಯಧರ್ಮದ ನಾನಾ ಮುಖಗಳನ್ನು ಸೂಚಿಸುತ್ತವೆ ; ಸೂತ್ರೀ ಕರಿಸುತ್ತವೆ.

ಕೀರ್ತನೆಗಳಲ್ಲಿ ಹೆಚ್ಚಿನ ವಿಧಿಗಳ ಉಲ್ಲೇಖಗಳನ್ನು ನಿರೀಕ್ಷಿಸಲಾಗದು. ತುಂಬ ವಿರಳ ವಾಗಿ ಸಂದರ್ಭಕ್ಕೆ ತಕ್ಕಂತೆ ಕೆಲವು ವಿಧಿಗಳನ್ನು ಹೆಸರಿಸಿರುವುದನ್ನು ಕಾಣುತ್ತೇವೆ. ಪುರಂದರದಾಸರು ಮತ್ತು ಅನ್ನಮಾಚಾರ್ಯರು ಅಲ್ಲಲ್ಲಿ ಸೂಚಿಸಿದ ವಿಧಿಗಳು ಶಿಷ್ಟ ವೈದಿಕಾಚಾರವನ್ನು ಪ್ರತಿನಿಧಿಸುತ್ತವೆ ಎನ್ನಬಹುದು. ಈ ವೈದಿಕಾಚಾರಗಳಲ್ಲಿ ಹಲವು

ಋಗ್ವೇದ ಮತ್ತು ಅಥರ್ವವೇದಗಳ ಕಾಲದಿಂದಲೂ ಭಾರತೀಯ ಕುಟುಂಬಗಳಲ್ಲಿ ಪ್ರಚಲಿತವಾಗಿವೆ. ಭಾರತದ ವಿವಿಧ ಪ್ರದೇಶಗಳ ಮತ್ತು ಜನರ ವಿವಾಹ ವಿಧಿಗಳನ್ನು ಆಶ್ವಲಾಯನ ಗೃಹ್ಯಸೂತ್ರಗಳು ಸೂಚಿಸುತ್ತವೆ. ಕನ್ಯಾದಾನ, ಹೋಮ, ಪಾಣಿಗ್ರಹಣ, ಸಪ್ತಪದಿ ಮುಂತಾದವು ಭಾರತದಲ್ಲೆಲ್ಲಾ ಪರಿಚಿತವಾಗಿರುವಂಥವು. ಭಾರತೀಯ ವಿವಾಹ ಸುಖದುಃಖಗಳಲ್ಲಿ ಅದ್ವೈತ ಭಾವದಿಂದ ಇರುವ ದಾಂಪತ್ಯವನ್ನು ಆದರ್ಶವಾಗಿಟ್ಟು ಕೊಂಡು ರೂಪುಗೊಂಡಿದೆ. ಋಗ್ವೇದದ ಈ ಮಂತ್ರ ಭಾರತೀಯ ವಿವಾಹದ ಪ್ರತೀಕ ದಂತಿದೆ :

> ಯದಸ್ತಿ ಹೃದಯಂ ಮಮ ತದಸ್ತು ಹೃದಯಂ ತವ
> ಯದಸ್ತಿ ಹೃದಯಂ ತವ ತದಸ್ತು ಹೃದಯಂ ಮಮ

(ನನ್ನ ಹೃದಯ ನಿನ್ನ ಹೃದಯವಾಗಲಿ; ನಿನ್ನ ಹೃದಯ ನನ್ನ ಹೃದಯವಾಗಲಿ)

ಹಿಂದೂ ವಿವಾಹ ವಿಧಿಗಳಲ್ಲಿ ಕನ್ಯಾದಾನ ತುಂಬ ಮುಖ್ಯವಾದುದು. ಧರ್ಮಾರ್ಥ ಕಾಮಗಳೆಂಬ ಮೂರು ಪುರುಷಾರ್ಥಗಳ ಸಾಧನೆಗಾಗಿ ಕನ್ಯೆಯನ್ನು ಕೊಡುತ್ತಿರುವುದಾಗಿ ವಧುವಿನ ತಂದೆ ಹೇಳುತ್ತಾನೆ. ಕನ್ಯಾದಾನಕ್ಕೆ ಮೊದಲು ಕನ್ಯಾವರಣ, ವಿವಾಹಹೋಮ, ಪಾಣಿಗ್ರಹಣ, ಲಾಜಹೋಮ ಮುಂತಾದ ವಿಧಿಗಳನ್ನು ನೆರವೇರಿಸಲಾಗುತ್ತದೆ.

ಹಿಂದೂ ವಿವಾಹದಲ್ಲಿ ಮಂಗಳಸೂತ್ರಧಾರಣೆ ಮತ್ತು ಸಪ್ತಪದಿಗಳಿಗೆ ತುಂಬ ಪ್ರಾಧಾನ್ಯವಿದೆ. ವರ ಸಂಕಲ್ಪವನ್ನು ಹೇಳಿ, ಮಾಂಗಲ್ಯದೇವತೆಯನ್ನು ಆಹ್ವಾನಿಸಿ, ಷೋಡಶೋಪಚಾರಗಳಿಂದ ಮಂಗಳಸೂತ್ರವನ್ನು ಪೂಜಿಸಿ ಅದನ್ನು ವಧುವಿನ ಕೊರಳಿಗೆ ಕಟ್ಟುತ್ತಾನೆ. ಆಗ "ಮಾಂಗಲ್ಯಂ ತಂತುನಾ ಅನೇನ ಮಮ ಜೀವನ ಹೇತುನಾ, ಕಂಠೇ ಬಧ್ನಾಮಿ ಸುಭಗೇ ತ್ವಂ ಜೀವ ಶರದಶ್ಶತಂ" ಎಂಬ ಮಂತ್ರವನ್ನು ಹೇಳುತ್ತಾರೆ. ವಧೂವರರು ಕೂಡಿ ಏಳು ಹೆಜ್ಜೆಗಳನ್ನು ಹಾಕುವುದಕ್ಕೆ ಸಪ್ತಪದಿ ಎಂದು ಹೆಸರು. ಒಂದೊಂದು ಹೆಜ್ಜೆಯೂ ಜೀವನದುದ್ದಕ್ಕೂ ಕೂಡಿ ಬಾಳಲು ಒದಗಿ ಬರಬಹುದಾದ ಸಂಪತ್ತನ್ನು ಸೂಚಿಸುತ್ತದೆ.

ಜಾನಪದರ ಮತ್ತು ಆದಿವಾಸಿಗಳ ಮದುವೆಗಳು ವೈವಿಧ್ಯದಿಂದ ಕೂಡಿರುತ್ತವೆ. ಮದುವೆಗೆ ಸಂಬಂಧಿಸಿದ ಹಲವು ಶಾಸ್ತ್ರಗಳನ್ನು ಕುರಿತಂತೆ ಈಗಾಗಲೇ ಅನೇಕರು ಬರೆದಿದ್ದಾರೆ. ಜಾನಪದರಲ್ಲೂ ಅನೇಕ ಶಾಸ್ತ್ರಗಳು ಇರುತ್ತವೆ. ನಿಶ್ಚಿತಾರ್ಥ, ಧಾರೆ, ತಾಳಿಕಟ್ಟುವಶಾಸ್ತ್ರ, ಹಿರಿಯರ ಆಶೀರ್ವಾದ ಮುಂತಾದವು ಎಲ್ಲರಲ್ಲೂ ಇರುವಂಥವು.

## ವಿವಾಹದ ಬಗೆಗಳು

ಕೀರ್ತನೆಗಳಲ್ಲಿ ಒಂದೆರಡು ರೀತಿಯ ವಿವಾಹಪ್ರಭೇದಗಳು ಮಾತ್ರ ಉಲ್ಲೇಖ ಗೊಂಡಿರಬಹುದು. ಆದರೆ ಪ್ರಪಂಚದ ಬೇರೆ ಬೇರೆ ಕಡೆ ಇರುವ ವಿವಾಹಪ್ರಭೇದಗಳು ವೈವಿಧ್ಯದಿಂದ ಕೂಡಿರುತ್ತವೆ. ಸಮಾಜದ ವಿವಿಧ ಸಂಪ್ರದಾಯಗಳ ಮತ್ತು ಪ್ರದೇಶಗಳ

**ಸಂಸ್ಕೃತಿಯನ್ನು** ಪ್ರತಿಬಿಂಬಿಸುವ ವಿವಾಹಗಳನ್ನು ನಾವು ಕಾಣಬಹುದು. ಒಳಬಾಂಧವ್ಯ ಮತ್ತು ಹೊರಬಾಂಧವ್ಯಕ್ಕೆ ಸಂಬಂಧಿಸಿದ ಉಲ್ಲೇಖಗಳು ಕೀರ್ತನೆಗಳಲ್ಲೂ ಕಂಡುಬರುತ್ತವೆ. ತನ್ನ ಜಾತಿ ಅಥವಾ ವರ್ಗದಲ್ಲೇ ಹೆಣ್ಣನ್ನು ಕೊಟ್ಟುತರುವ ಪದ್ಧತಿ ಒಳಬಾಂಧವ್ಯ. ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ, ಆಸ್ತಿ ಪೋಲಾಗಬಾರದೆಂಬ ಭಾವನೆ ಒಳಬಾಂಧವ್ಯಕ್ಕೆ ಕಾರಣಗಳು. ಎಸ್ಕಿಮೋದಂಥ ಪ್ರಾಚೀನ ಜನರಲ್ಲೂ ಒಂದೇ ಮನೆಯಲ್ಲಿರುವವರು ಮದುವೆ ಮಾಡಿಕೊಳ್ಳಲು ಇಷ್ಟಪಡುವುದಿಲ್ಲ. ಈ ರೀತಿ ಹೊರ ಗೋತ್ರದಿಂದ ವಧೂವರರನ್ನು ತರಬೇಕೆಂಬ ಆಕಾಂಕ್ಷೆ ಆದಿವಾಸಿಗಳಲ್ಲೂ ನಾಗರಿಕ ಸಮಾಜಗಳಲ್ಲೂ ಕಂಡುಬರುತ್ತದೆ.

ಕರ್ನಾಟಕಾಂಧ್ರಗಳಲ್ಲಿ ವಿಲಿಂಗ ಸಹೋದರ ಸಂತಾನದೊಂದಿಗೆ ವಿವಾಹ ಕಂಡು ಬರುತ್ತದೆ. ತೆಲುಗಿನಲ್ಲಿ ಇದನ್ನು 'ಮೇನರಿಕಂ'[1] ಎನ್ನುವರು. ಕೆಲವು ಆದಿವಾಸಿಗಳಲ್ಲಿ ಮೇನರಿಕಂ ತಪ್ಪಬಾರದ ವಿಧಿ. ಪಶ್ಚಿಮ ಆಸ್ಟ್ರೇಲಿಯಾದ ಕರೀರ ಜನರಲ್ಲಿ ಇದು ಕಡ್ಡಾಯ. ದಕ್ಷಿಣ ವಿಷ್ಯದ ಕೆಲವು ಭಾಗಗಳಲ್ಲಿ, ಫಿಜಿ, ಶ್ರೀಲಂಕ, ಸುಮಾತ್ರ ದ್ವೀಪಗಳಲ್ಲಿ ಈ ಸಂಪ್ರದಾಯ ಕಂಡುಬರುತ್ತದೆ. ತಾಯಿಗೆ ಸಹೋದರರಿಲ್ಲದಿದ್ದರೆ ಅದೇ ವರಸೆಗೆ ಸೇರಿದ (ಎಂದರೆ ತಾಯಿಯ ದೊಡ್ಡಪ್ಪನ ಅಥವಾ ಚಿಕ್ಕಪ್ಪನ ಮಕ್ಕಳು) ಬಂಧುಗಳ ಗುಂಪಿನಲ್ಲಿ ವಿವಾಹ ಮಾಡಿಕೊಳ್ಳಬೇಕು.[2] ಮದುವೆಯಲ್ಲಿ ಬಾಗಿಲು ತಡೆಯುವ ಶಾಸ್ತ್ರವೊಂದಿದೆ. ಆ ಸಂದರ್ಭದಲ್ಲಿ ಅಣ್ಣನನ್ನು ತಂಗಿ 'ನಿನಗೆ ಹುಟ್ಟುವ ಮಗಳನ್ನು ನನ್ನ ಮಗನಿಗೆ ಕೊಡು' ಎಂದು ಕೇಳುತ್ತಾಳೆ. ಸೋದರಮಾವನನ್ನು ಮದುವೆಯಾಗುವ ಸಂಪ್ರದಾಯವೂ ಇದೆ. ತೆಲುಗಿನ ಮತ್ತು ಕನ್ನಡದ ಜನಪದಗೀತೆಗಳಲ್ಲಿ ಪ್ರಿಯನನ್ನು 'ಮಾವ' ಎಂದು ಸಂಬೋಧಿಸಿರುವುದನ್ನು ನೋಡುತ್ತೇವೆ. ಉತ್ತರ ಆಸ್ಟ್ರೇಲಿಯಾದ ತಿವಿ ಜನರಲ್ಲಿ ಮೊದಲ ಹೆಣ್ಣು ಮಗುವನ್ನು ಮಗುವಿನ ಸೋದರಮಾವನಿಗೆ ಕೊಡುವ ಸಂಪ್ರದಾಯವಿದೆ.

ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಹೆಚ್ಚಾಗಿ ಸೂಚಿತವಾಗಿರುವ ವಿವಾಹಪ್ರಭೇದಗಳೆಂದರೆ ಏಕಪತ್ನೀತ್ವ ಮತ್ತು ಬಹುಪತ್ನೀತ್ವ. ಒಬ್ಬಳು ಸತ್ತಬಳಿಕ ಇನ್ನೊಬ್ಬಳನ್ನು ಮದುವೆಯಾಗುವುದು ನಮ್ಮಲ್ಲಿ ಸರ್ವೇಸಾಮಾನ್ಯ. ಇದನ್ನು ಕ್ರಮಾಗತ ಏಕಪತ್ನೀತ್ವ ಎನ್ನಬಹುದು. ಬಹುಪತ್ನೀತ್ವಕ್ಕೆ ನಮ್ಮ ಸಾಹಿತ್ಯದಲ್ಲಿ ಹಲವು

---

[1] ಮೇನು ಎಂದರೆ ದೇಹ. ಮೇನರಿಕಂ ಎಂದರೆ ರಕ್ತ ಸಂಬಂಧ ಇರುವವರ ಜೊತೆ ವಿವಾಹ. ತೆಲುಗಿನಲ್ಲಿ ಸೋದರಮಾವನನ್ನು ಮೇನಮಾಮ ಎಂದೂ ಸೋದರತ್ತೆಯನ್ನು ಮೇನತ್ತ ಎಂದೂ ಕರೆಯುವರು.

[2] ತೆಲುಗಿನಲ್ಲಿ ಅಂಥ ಮಾವನನ್ನು 'ವೇಲು ವಿಡಿಚಿನ ಮೇನಮಾಮ' ಎನ್ನುವರು. ಎಂದರೆ ಬೆರಳುಬಿಟ್ಟ ಸೋದರಮಾವನೆಂದರ್ಥ–ಹಾಗೆಂದರೆ ಒಂದು ಎಣಿಸಿದ **ಅನಂತರ** ಬರುವವರು.

ನಿದರ್ಶನಗಳು ಸಿಕ್ಕುತ್ತವೆ. ಪುರುಷ ಪ್ರಧಾನ ಸಮಾಜದಲ್ಲಿ ಅನೇಕ ಕಾರಣಗಳಿಂದ ಬಹು ಪತ್ನೀತ್ವ ಮುಂದುವರಿಯುತ್ತದೆ. ದುಡಿಮೆಗಾರ್ತಿ ಹೆಣ್ಣನ್ನು ಮದುವೆಯಾಗುವುದು ಕೃಷಿಪ್ರಧಾನ ಸಮಾಜದಲ್ಲಿ ಕಂಡುಬರುತ್ತದೆ. ಗಂಡುಮಕ್ಕಳು ಬೇಕೆಂಬ ಕಾರಣದಿಂದ ಹೆಚ್ಚು ಜನರನ್ನು ಮದುವೆಯಾಗುವ ಪದ್ಧತಿ ಈಗಲೂ ಬಳಕೆಯಲ್ಲಿದೆ. ಆದರೆ ಭಾರತದ ಪ್ರಾಚೀನ ಧರ್ಮಸೂತ್ರಗಳು ಬಹುಪತ್ನೀತ್ವವನ್ನು ಅಂಗೀಕರಿಸಿಲ್ಲ. ಆಪಸ್ತಂಬ, ನಾರದ, ಕೌಟಿಲ್ಯ ಮುಂತಾದವರು ಇದನ್ನು ತಿರಸ್ಕರಿಸಿದ್ದಾರೆ.

ಬಹುಪತಿತ್ವ ಭಾರತೀಯ ಧರ್ಮಶಾಸ್ತ್ರದ ಒಪ್ಪಿಗೆಯನ್ನು ಎಂದೂ ಪಡೆದಿರಲಿಲ್ಲ; ವೇದಗಳಲ್ಲಿ ಅದರ ಸುದ್ದಿಯಿಲ್ಲ. ತೈತ್ತಿರೀಯ ಸಂಹಿತೆ ಮುಂತಾದವು ಬಹುಪತ್ನೀತ್ವ ವಿರಬಹುದೇ ಹೊರತು, ಬಹುಪತಿತ್ವ ಇರಲೇಬಾರದೆಂದು ನಿಷೇಧಿಸಿವೆ. ದ್ರೌಪದಿಯ ವಿಷಯ ಒಂದು ಅಪವಾದವಾಗಿಯೇ ನಿಂತಿದೆ. ವ್ಯಾಸ ಇದನ್ನು ಕುರಿತು ಹೇಳುತ್ತಾ 'ಇಂಥ ಪದ್ಧತಿ ಈಗ ಇಲ್ಲ' ಎಂದು ಹೇಳಿದರೆ, ದ್ರುಪದ 'ಇಂಥ ಪಾಪ ಕಾರ್ಯ ವೇದ ದಲ್ಲೂ ಇಲ್ಲ, ಆಚರಣೆಯಲ್ಲೂ ಇಲ್ಲ. ಅನೇಕ ಪುರುಷರು ಒಬ್ಬಳನ್ನು ಮದುವೆಯಾಗುವು ದನ್ನು ನಾನೆಲ್ಲೂ ಕಂಡಿಲ್ಲ' ಎನ್ನುತ್ತಾನೆ. ಇದರಿಂದ ಆ ಕಾಲದಲ್ಲಿ ಈ ರೀತಿಯ ವಿವಾಹ ಅತಿ ವಿರಳವಾಗಿ ಇದ್ದಿರಬಹುದಾದರೂ ಜನಾಂಗೀಕಾರ ಪಡೆದಿರಲಿಲ್ಲವೆಂದು ಹೇಳ ಬಹುದು.

ಹಿಂದೂ ಧರ್ಮಶಾಸ್ತ್ರಗಳು ಎಂಟು ವಿಧದ ವಿವಾಹಗಳನ್ನು ಗುರುತಿಸಿವೆ. ಅವು: ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ. ಮೊದಲ ನಾಲ್ಕು ಧರ್ಮವಿಹಿತವಾದಂಥವು, ಕೊನೆಯನಾಲ್ಕು ಪ್ರತ್ಯೇಕ ಸಂದರ್ಭಗಳಲ್ಲಿ ಮಾತ್ರ ಅಂಗೀಕೃತವಾಗುವಂಥವು.

## ವಿಜಯನಗರಕಾಲ

ಪುರಂದರದಾಸರು ಮತ್ತು ಅನ್ನಮಾಚಾರ್ಯರು ವಿಜಯನಗರ ಕಾಲಕ್ಕೆ ಸೇರಿದ ವರಾದುದರಿಂದ ಅವರ ಕೀರ್ತನೆಗಳಲ್ಲಿ ಸಮಕಾಲೀನ ವಿವಾಹ ಪದ್ಧತಿಗಳ ಪ್ರಭಾವ ಕಂಡುಬರುವುದು ಸಹಜ. ವಿಜಯನಗರಕಾಲದ ಅನೇಕ ಕವಿಗಳು ವಿವಾಹ ವರ್ಣನೆ ಮಾಡಿದ್ದಾರೆ. ಅಷ್ಟಾದಶ ವರ್ಣನೆಗಳಲ್ಲಿ ವಿವಾಹವೂ ಸೇರಿರುವುದು ಇದಕ್ಕೆ ಕಾರಣ. ಕನ್ನಡ ಕವಿಗಳಂತೆಯೇ 15-16 ಶತಮಾನಗಳಿಗೆ ಸೇರಿದ ತೆಲುಗು ಕವಿಗಳೂ ವಿವಾಹದ ವಿಸ್ತಾರ ವರ್ಣನೆಗಳನ್ನು ಮಾಡಿದ್ದಾರೆ. ಶ್ರೀನಾಥನ ಶೃಂಗಾರನೈಷಧ, ಕಾಶೀಖಂಡ ಮುಂತಾದ ಕೃತಿಗಳಲ್ಲಿ ತೆಲುಗುನಾಡಿನ ವಿವಾಹದ ಸವಿವರ ವರ್ಣನೆ ಕಂಡುಬರುತ್ತದೆ. ಚೇರಮಾಂಕ (ಚೇರಮಕಾವ್ಯ), ಬೊಮ್ಮರಸ (ಸನತ್ಕುಮಾರ ಚರಿತೆ) ಮುಂತಾದವರು ಕನ್ನಡದಲ್ಲಿ ನೀಡಿದ ವಿವಾಹ ಚಿತ್ರಗಳು ರಾಜಮನೆತನದ ವಿವಾಹವನ್ನು ಪ್ರತಿನಿಧಿಸುತ್ತವೆ.

ವಿಜಯನಗರಕಾಲದ ಕನ್ನಡ ಮತ್ತು ತೆಲುಗು ಕವಿಗಳು ನೀಡಿದ ವಿವರಗಳು ಕರ್ನಾಟಕ ಮತ್ತು ಆಂಧ್ರಗಳಿಗೆ ಚಿರಪರಿಚಿತವಾದ ಸಂಪ್ರದಾಯಗಳನ್ನೇ ಪ್ರತಿನಿಧಿಸು

ತ್ತವೆ. ಇವು ಭಾರತೀಯರಿಗೆಲ್ಲ ತಿಳಿದವೇ ಆಗಿವೆ. ಕನ್ಯಾನ್ವೇಷಣೆ, ನಿಶ್ಚಿತಾರ್ಥ, ಲಗ್ನ ನಿಶ್ಚಯ, ಆಹ್ವಾನ ಪತ್ರಿಕೆಗಳು, ವಿವಾಹ ಮಂಟಪ, ಮಂಗಳ ಮಜ್ಜನ, ವಧೂವರರ ಅಲಂಕಾರ, ಧಾರೆಯ ಮಂಟಪದ ವಿಧಿವಿಧಾನಗಳು, ಜೀರಿಗೆಬೆಲ್ಲ ಹಾಕುವುದು, ಧಾರೆ ಎರೆಯುವುದು, ಆರತಿ, ಆಶೀರ್ವಾದ, ವಿನೋದ, ಭೂಮ, ನಾಗವಲ್ಲಿ, ಓಕುಳಿ, ಮೆರವಣಿಗೆ ಮುಂತಾದವುಗಳ ವರ್ಣನೆಯನ್ನು ಕಾವ್ಯಗಳಲ್ಲಿ ನೋಡಬಹುದು. ವಿಜಯನಗರ ಕಾಲದಲ್ಲಿ ಮದುವೆಯ ಮೆರವಣಿಗೆ, ಚಪ್ಪರ ಕಟ್ಟುವುದು, ಚಪ್ಪರವನ್ನು ಚಂದನದ ಹಂಡಿಯಿಂದ ಸಿಂಪಡಿಸುವುದು ಇತ್ಯಾದಿಗಳ ಮೇಲೂ ತೆರಿಗೆ ಹಾಕುತ್ತಿದ್ದರು.

ವಿವಾಹದ ವಿಧಿಗಳಲ್ಲಿ ಇಂದು ಮಾಂಗಲ್ಯಧಾರಣೆಗೆ ತುಂಬ ಪ್ರಾಧಾನ್ಯ. ಕನ್ನಡ ಮತ್ತು ತೆಲುಗಿನ ಅನೇಕ ಕವಿಗಳು ಮಾಂಗಲ್ಯ, ತಾಳಿ, ಕರಿಮಣಿ ಮುಂತಾದ ಹೆಸರು ಗಳನ್ನು ಹೇಳಿರುವರಾದರೂ ಮಾಂಗಲ್ಯಧಾರಣೆಯ ವರ್ಣನೆ ಪ್ರಾಚೀನ ಕಾಲದ ವಿವಾಹ ವರ್ಣನೆಗಳಲ್ಲಿ ಕಂಡುಬರುವುದಿಲ್ಲ. ಮಾಂಗಲ್ಯಧಾರಣೆಯ ವಿಷಯ ಪ್ರಾಚೀನ ಧರ್ಮ ಸೂತ್ರಗಳಲ್ಲಿ ಎಲ್ಲಿಯೂ ಇಲ್ಲ. ಇದು ದ್ರಾವಿಡ ಸಂಪ್ರದಾಯವೆಂದೂ ಅನಂತರ ಕಾಲದಲ್ಲಿ ಆರ್ಯ ಸಂಪ್ರದಾಯದಲ್ಲಿ ಸೇರ್ಪಡೆಯಾಗಿದೆಯೆಂದೂ ಭಾವಿಸಲಾಗಿದೆ. 13ನೆಯ ಶತಮಾನದ ಕನ್ನಡ ಕವಿಗಳಾದ ಹರಿಹರ ರಾಘವಾಂಕರು ಇದನ್ನು ಹೆಸರಿಸಿದ್ದಾರೆ.

ಕಥಾಕಾವ್ಯಗಳಂತೆ ವಿವಾಹವರ್ಣನೆ ಮಾಡಲು ಕೀರ್ತನೆಗಳಲ್ಲಿ ಅವಕಾಶವಿಲ್ಲ. ಪುರಂದರದಾಸರಾಗಲಿ, ಅನ್ನಮಾಚಾರ್ಯರಾಗಲಿ ಮದುವೆಯ ವರ್ಣನೆಗಳ ಗೋಜಿಗೆ ಹೋಗಿಲ್ಲ. ಇವರ ಕೀರ್ತನೆಗಳಲ್ಲಿರುವ ಕೆಲವು ಉಲ್ಲೇಖಗಳನ್ನು ಇಲ್ಲಿ ಪರಿಶೀಲಿಸ ಲಾಗಿದೆ.

## ಕೀರ್ತನೆಗಳಲ್ಲಿ ವಿವಾಹ

ಪುರಂದರದಾಸರ ಕೀರ್ತನೆಗಳಲ್ಲಿ ಕೆಲವು ಕಡೆ ತಾಳಿಯ ಉಲ್ಲೇಖ ಕಂಡುಬರುತ್ತದೆ. ಪುರಂದರದಾಸರ ಕಾಲಕ್ಕೆ ತಾಳಿ ಆರ್ಷ ಸಂಪ್ರದಾಯದಲ್ಲೂ ಪ್ರಾಧಾನ್ಯಗಳಿಸಿಕೊಂಡಿತ್ತು. ಮಾಂಗಲ್ಯಧಾರಣೆಯ ವರ್ಣನೆಗಳಿಗೆ ಕೀರ್ತನೆಗಳಲ್ಲಿ ಅವಕಾಶ ಕಡಿಮೆ. ಪುರಂದರದಾಸರು ಹರಿಸ್ಮರಣೆಯನ್ನು ಮಾಡುತ್ತಾ ಒಂದು ಕಡೆ "ಕಾಳಿಯ ಮೇಲೆ ನಿಂತನೆ ಕಲಕಿ ಚಪ್ಪಾಳೆ ತಟ್ಟುವನೆ ಸೋಳಸಹಸ್ರ ಗೋಪೆರ ಕೂಡಿ ಗಳದಿ ತಾಳಿಯ ಕಟ್ಟುವನೆ" ಎಂದಿದ್ದಾರೆ (ಉ. ಪ್ರ., ಭಾಗ 1-45). ಇನ್ನೊಂದು ಕಡೆ "ತಾಳಿಯ ಹರಿದು ಬಿಸಾಟೆ ನೀ ಹೇಳಿದವರ ಮಾತ ಕೇಳೀ ಗೈಯಾಳಿ" (5-127) ಎಂದಿರುವುದು ಗಮನಾರ್ಹ. [1]

---

[1] ಇದು ಎಲ್ಲಮ್ಮನ ಜೋಗತಿ ಸಂಪ್ರದಾಯಕ್ಕೆ ಸೂಚಕದಂತಿದೆ. ಇದರ ಪಾಠಾಂತರ ಪೊಂದರಲ್ಲಿ ಹೀಗಿದೆ : ತಾಳಿಯ ಹರಿದು ಬೀಸಾಟೆ ಇಂಥ ಕೀಳುದೇವತೆಗಳ ಹೆಸರಿನಲ್ಲಿ ಕಟ್ಟಿದ ॥ಪ॥ ಒಡತಿ ಎಲ್ಲಮ್ಮನೆಂದು ಇಲ್ಲದ್ದರಿಕೆ ಹೊತ್ತು ಸಿಡಿಯಾ ಊರಿಸಿಕೊಂಡು....

.(ಉ. ಪ್ರ., ಭಾಗ 4-22)

ಅನ್ನಮಾಚಾರ್ಯರಲ್ಲೂ ಮಾಂಗಲ್ಯಧಾರಣೆಯ ವರ್ಣನೆಗಳಿಲ್ಲ. ಆದರೆ ತಾಳಿ ಕಟ್ಟುವ ಸಂಪ್ರದಾಯವಿತ್ತು ಎಂಬುದನ್ನು ಕೆಲವು ಉಲ್ಲೇಖಗಳು ಸೂಚಿಸುತ್ತವೆ. 'ತಾಳಿ ಕಟ್ಟಿದ್ದೇನೆ' ಎಂದು ಹೇಳುವುದನ್ನು ಬಿಟ್ಟರೆ ಈ ಉಲ್ಲೇಖಗಳಲ್ಲಿ (14-235 ; 14-202) ಇನ್ನೇನೂ ಇಲ್ಲದಿದ್ದರೂ ತಾಳಿಕಟ್ಟುವುದು ವಿವಾಹಕ್ಕೆ ಸಂಕೇತವೆನ್ನು ವಷ್ಟು ಪ್ರಾಧಾನ್ಯ ಗಳಿಸಿತ್ತು ಎಂಬುದು ಸ್ಪಷ್ಟ.

ಮದುವೆಯ ವಿಧಿಗಳ ಪೈಕಿ ತೆಲುಗರಲ್ಲಿ 'ತಲಬ್ರಾಲು'[1] ಎನ್ನುವುದಕ್ಕೆ ಹೆಚ್ಚಿನ ಪ್ರಾಧಾನ್ಯವಿದೆ. ಮಾಂಗಲ್ಯಧಾರಣೆ ವರ್ಣಿಸದ ತಿಕ್ಕನಾದಿ ಮಹಾಕವಿಗಳು (13ನೆಯ ಶತಮಾನ) 'ತಲಬ್ರಾಲು' ವರ್ಣನೆಯನ್ನು ಬಿಟ್ಟಿಲ್ಲ. ಅನ್ನಮಾಚಾರ್ಯರು ಅನೇಕ ಸಂಕೀರ್ತನೆಗಳಲ್ಲಿ ತಲಬ್ರಾಲನ್ನು ಉಲ್ಲೇಖಿಸಿದ್ದಾರೆ. ಈ ವಿನೋದಕ್ಕೆ ಬಳಸುವ ಅಕ್ಕಿಯನ್ನು ಕುಟ್ಟುವ ಸಂದರ್ಭವನ್ನೂ ಅನ್ನಮಯ್ಯ ವರ್ಣಿಸಿದ್ದಾರೆ : "ಸುವ್ವಿ ಸುವ್ವಿ ಸುವ್ವಿ ಸುವ್ವೆಂದು ಸುದತಿಯರು ಕುಟ್ಟುತ್ತಿರುವರು; ವನಿತೆಯರು ಮನಸ್ಸನ್ನು ಕುಂದಣಿಗೆ ಮಾಡಿ, ಪ್ರೀತಿಯನ್ನು ತುಂಬಿ, ಕಣ್ಣಿನ ನೋಟ ಎಂಬ ಒನಕೆಗಳಿಂದ ಕುಟ್ಟುತ್ತಿರು ವರು."[2] ತಲಬ್ರಾಲನ್ನು ಇನ್ನೂ ಕೆಲವು ಕಡೆ ನೇರವಾಗಿಯೇ ಕವಿ ವರ್ಣಿಸಿರುವುದನ್ನು ನೋಡುತ್ತೇವೆ (15-129 ; ಅಧ್ಯಾ. ಸಂ., 2, 1978, ಪು. 10). ಬಡವರು, ಶ್ರೀಮಂತರು ಎಂಬ ಭೇದವಿಲ್ಲದೆ ಈ ಸಂಪ್ರದಾಯವನ್ನು ಎಲ್ಲರೂ ಅನುಸರಿಸುತ್ತಾರೆ. ರಾಜವಂಶದಲ್ಲಿ ಅಥವಾ ಆಗರ್ಭ ಶ್ರೀಮಂತರಲ್ಲಿ ಮುತ್ತಿನ ತಲಬ್ರಾಲನ್ನು ಬಳಸುವು ದುಂಟು (12-189).

ಅನ್ನಮಾಚಾರ್ಯರು ಮತ್ತು ಪುರಂದರದಾಸರು ಹೆಸರಿಸಿದ ಇನ್ನೊಂದು ಸಂಪ್ರದಾಯ ಜೀರಿಗೆ ಬೆಲ್ಲ ಹಾಕುವುದು. ತೆಲುಗರ ಮದುವೆಯಲ್ಲಿ ತಲಬ್ರಾಲು ಸುರಿಯುವುದರಲ್ಲಿ ಹೇಗೆ ನಾ ಮುಂದು ತಾ ಮುಂದು ಎಂದು ಹವಣಿಸುವರೋ ಕನ್ನಡಿಗರ ಮದುವೆಯಲ್ಲಿ ಜೀರಿಗೆ ಬೆಲ್ಲ ಹಾಕಲು ಅಷ್ಟೇ ಉತ್ಸಾಹ ತೋರಿಸುವರು. ಇದನ್ನು ವಿಜಯನಗರ ಕಾಲದ ಬೇರೆ ಕವಿಗಳೂ ವರ್ಣಿಸಿದ್ದಾರೆ.[3] "ಜೀರಿಗೆ ಬೆಲ್ಲವು ಹಿಡಿದು ಅಂಜಿಕೆಯೊಳು ಸಾರಿ ಬರುವ ರುಗ್ಮಿಣಿಯ ಕಂಡು ಮೋಡಿ ಹೋಗಿ ಬ್ಯಾಗ ರುಗ್ಮನ

---

[1] ತಟ್ಟೆಗಳಲ್ಲಿ ತುಂಬಿದ ಅಕ್ಕಿಯನ್ನು ವಧೂವರರು ಒಬ್ಬರ ತಲೆಯ ಮೇಲೊಬ್ಬರು ಸುರಿಯುತ್ತಾರೆ. ಒಬ್ಬರಿಗಿಂತ ಇನ್ನೊಬ್ಬರು ಮೇಲುಗೈ ಸಾಧಿಸಬೇಕೆಂದು ಹವಣಿಸು ತ್ತಾರೆ. ತಲಬ್ರಾಲು ಎಂದರೆ ತಲೆಯ ಮೇಲೆ ಧಾನ್ಯ (ಪ್ರಾಲು) ಎಂದರ್ಥ.

[2] ಸುವ್ವಿ ಸುವ್ವಿ ಸುವ್ವಿ ಸುವ್ವನಿ ಸುದತುಲು ದಂಚಿದ ರೋಲಾಲ
ವನಿತಲು ಮನಸುಲು ಕುಂದೆನ ಚೇಸಿಟು ವಲಪುಲು ತಗನಿಂ ಚೋಲಾಲ
ಕನುಚೂಪುಲನೆಡು ರೋಕಂಡ್ಲನು ಕನ್ನೆಲುದಂಚಿದ ರೋಲಾಲ....
(ತಾ. ಅ. ಪಾ., 1976, ಪು. 52)

[3] ಎನಗೆ ಮುನ್ನವೆ ಜಯಾಂಗನೆಯ ಭುಜದೊಳ್ತಾಳ್ದು ಕೊನೆವೆರಲ ನೀನಿತ್ತು ನೀಡಬಂದಾ ಯೆಂದು ಮುನಿದಿಡುವ ತೆಱದಿ ಜೀರಿಗೆ ಬೆಲ್ಲದಿಂ ವನಿತೆ ನೃಪನ ಮಕುಟವನಿಡಲ್ಕೆ.... ವನಜಾಕ್ಷಿ ನಿನ್ನ ಮುಡಿ (ಚೇರಮಕಾವ್ಯ, 5-46)

ಹಿಡಕೈಯ ತೇರಿಗೆ ಕಟ್ಟಿದ'' ರುಕ್ಮಿಣಿ ಕಲ್ಯಾಣದ ಈ ಪ್ರಸಂಗವನ್ನು ಪುರಂದರದಾಸರು ವರ್ಣಿಸಿದ್ದಾರೆ (ನ. ಸಂ. 1., ಪು. 358). ಧಾರೆಯ ವಿಷಯವನ್ನು ಒಂದು ಕಡೆ ದಾಸರು ಹೇಳಿದ್ದಾರೆ :

ನೆರೆದಿದ್ದ ಪುರಜನ ವಿಪ್ರರಗ್ನಿಯು ಸಾಕ್ಷಿ
ಕರವಿಡಿದು ಕೈಧಾರೆ ಎರಸಿಕೊಂಡ (2-77)

ಅನ್ನಮಾಚಾರ್ಯರು ಉಲ್ಲೇಖಿಸಿರುವ ವಿವಾಹ ವಿಧಿಗಳಲ್ಲಿ ಸೆರಗು ಗಂಟು ಹಾಕುವುದು (3–139), ತೆರೆಮರೆ ಮಾಡುವುದು (12–188), ವಧೂವರರ ಜೊತೆಗೆ ಜೊತೆವಧು, ಜೊತೆವರ ಎಂಬ ಹೆಸರಿನಲ್ಲಿ ಇಬ್ಬರನ್ನು ಕೂರಿಸುವುದು (3-139), ನಾಗವಲ್ಲಿ (13-55), ಪಾಣಿಗ್ರಹಣ (11-19), ಭೂಮ (15-24), ಮಧುಪರ್ಕ (3-105), ಮಂಗಲಾಕ್ಷತೆ (12-120) ಮುಂತಾದವು ಕನ್ನಡಿಗರಿಗೂ ಪರಿಚಿತ ವಾದಂಥವೇ.

ವಧೂವರರ ಮಧ್ಯೆ ತೆರೆಹಿಡಿಯುವ ವಿಚಾರವನ್ನು ವಿಜಯನಗರಕಾಲದ ಅನೇಕ ಕನ್ನಡ ಕಾವ್ಯಗಳು ವರ್ಣಿಸಿವೆ. ನಾಗವಲಿಯನ್ನೇ ನಾಗವಲ್ಲಿ ಎನ್ನುತ್ತಾರೆ. ಇದು ನಾಕ ಬಲಿಯ ರೂಪಾಂತರ. "ಹೊಟಿಲನರ್ಚಿಸಿ ನಾಕಬಲಿ ದಿಗ್ಬಲಿ ಸುಶಾಂತಿಗಳಾದಿ ಕೃತ್ಯಂ ಗಳನು'' ಎಂದು ಜೀವಂಧರ ಚರಿತೆ (9-39), ''ಬಳಿಕ ನಾಲ್ಕನೆಯದಿನ ನಾಗವಲಿಯ ಮೆರೆದು'' ಎಂದು ಚೆನ್ನಬಸವಪುರಾಣ (37-60) ವರ್ಣಿಸಿವೆ. ಪುರಂದರದಾಸರು ನಾಗವಲ್ಲಿಯ ಗಡಿಗೆಯನ್ನು ಕುರಿತು ವಿವರಿಸಿದ್ದಾರೆ.

ಕರದಲಿ ಬಾಗಿನ ಕೊಡುವುದು ಗಡಿಗೆ
ಪರಮಹಾಲಕ್ಷ್ಮಿಯನೀವುದು ಗಡಿಗೆ
ಪರಮ ಕಲಶ ಕುಲದೇವತೆ ಮೊದಲಾಗಿ
ಬರೆದದ್ದು ನಾಗವಲ್ಲಿಯಾ ಗಡಿಗೆ (ಉ. ಪ್ರ., ಭಾಗ 3, ಪು. 44).

ಭೂಮ ಎಂಬುದು ತೆಲುಗರಿಗೂ ಕನ್ನಡಿಗರಿಗೂ ತುಂಬ ಪ್ರಿಯವಾದ ಊಟ. ಶ್ರೀನಾಥಾದಿ ತೆಲುಗು ಕವಿಗಳು 'ಬುವ್ವಮು' ಅಥವಾ 'ಬುವ್ವಪುಬಂತಿ' ಎಂಬ ಹೆಸರಿನಲ್ಲಿ ಮದುವೆಯ ಊಟದ ವಿಸ್ತಾರವಾದ ವರ್ಣನೆಗಳನ್ನು ಮಾಡಿದ್ದಾರೆ. ವಿಜಯನಗರ ಕಾಲದ ಕನ್ನಡ ಕವಿಗಳು ಇದರ ಉಲ್ಲೇಖ ಮಾಡಿದ್ದಾರೆ.[1]

ಮದುವೆಯ ವಿಧಿಗಳಲ್ಲಿ ಒಂದಾದ ಪ್ರಸ್ಥದ ಬಗೆಗೂ ಕೆಲವು ಕಡೆ ವರ್ಣನೆಗಳು ಕಂಡುಬರುತ್ತವೆ. ಪುರಂದರದಾಸರು ಒಂದು ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ :

ಪ್ರಸ್ಥದ ಮನೆಯೊಳಗೆ ಕರೆಯದೆ ಪೋಗಿ
ಸ್ವಸ್ಥದಿ ಕುಳಿತುಕೊಂಡು
ವಿಸ್ತಾರವಾಗಿ ಹರಟೆಯನೆ ಬಡಿದು ಪ್ರ
ಶಸ್ತವಾಯಿತು ಎಂದು ಮಸ್ತಕ ತಿರುವುವ (5–78)

[1] ಸಂತಸದೊಳಗಜೆಯೊಡಗೂಡಿ ಭೂಮವನುಂಡು (ಚೆನ್ನಬಸವಪುರಾಣ, 35-59).

ಸೋಬಾನ ಅಥವಾ ಶೋಭನ ಎಂದರೆ ಎರಡರ್ಥಗಳಿವೆ. ಕನ್ನಡದಲ್ಲಿರುವಂತೆ ತೆಲುಗಿನಲ್ಲೂ ಸೋಬಾನೆ ಹಾಡುಗಳಿವೆ. ಇವು ಶುಭಪ್ರದವಾಗಿ ಮುತ್ತೈದೆಯರು ಹಾಡುವಂಥವು.[1] ಇನ್ನೊಂದು ಅರ್ಥದಲ್ಲಿ ಶೋಭನ ಎಂದರೆ ಪ್ರಸ್ಥ. ಈ ಎರಡೂ ಅರ್ಥ ಬರುವಂತೆ ಒಂದೆಡೆ ಅನ್ನಮಾಚಾರ್ಯರು ಬರೆದಿದ್ದಾರೆ: "ಇನ್ನೂ ಮರೆಯೇಕೆ ಇಬ್ಬರಿಗೂ; ನಾವೀಗ ಸೋಬಾನ ಹಾಡೋಣ."[2]

ಮೇಲಿನ ಕೆಲವು ವಿವಾಹ ವಿಧಿಗಳನ್ನು ಪರಿಶೀಲಿಸಿದರೆ ಆಂಧ್ರ ಮತ್ತು ಕರ್ನಾಟಕ ಗಳಲ್ಲಿ ಸಮಾನಾಚಾರಗಳು ಕಂಡುಬರುವುದನ್ನು ನೋಡುತ್ತೇವೆ. ಭಾರತದ ನಾನಾ ಕಡೆ ಗಳಲ್ಲಿ ಆರ್ಷ ಸಂಪ್ರದಾಯಗಳೇ ಬಹಳಮಟ್ಟಿಗೆ ಅನುಸರಿಸಲ್ಪಡುತ್ತಿವೆಯಾದರೂ ಹಿಂದುಳಿದ ಜನರಲ್ಲಿ ಅವೈದಿಕಾಚಾರಗಳನ್ನೇ ಹೆಚ್ಚಾಗಿ ಅನುಸರಿಸುವುದನ್ನು ನೋಡು ತ್ತೇವೆ. ಇಂಥ ಕೆಲವು ಅವೈದಿಕಾಚಾರಗಳನ್ನು ಸೋಮೇಶ್ವರ ತನ್ನ 'ಅಭಿಲಷಿತಾರ್ಥ ಚಿಂತಾಮಣಿ'ಯಲ್ಲಿ ವರ್ಣಿಸಿದ್ದಾನೆ.[3] ಈ ಆಚಾರಗಳು ಆಂಧ್ರ ಮತ್ತು ಕರ್ನಾಟಕಗಳಲ್ಲಿ ಬಳಕೆಯಲ್ಲಿವೆ. ಅಂಥವುಗಳಲ್ಲಿ ಒಂದಾದ ಆಯಿರಾಣಿ (12–188)[4] ಎಂಬುದನ್ನು ಅನ್ನಮಾಚಾರ್ಯರೂ ಉಲ್ಲೇಖಿಸಿದ್ದಾರೆ. ಬ್ರಾಹ್ಮಣೇತರರಲ್ಲಿ ಇರುವ ಈ ಸಂಪ್ರದಾಯ ದಂತೆ ಚಿತ್ರಬಿಡಿಸಿದ ಮಡಕೆಗಳನ್ನು ಪೂಜಿಸುತ್ತಾರೆ. ಮಡಕೆ ಮಹಾಲಕ್ಷ್ಮಿಗೆ ಸಂಕೇತ. ಹಿಂದೆ ಉಲ್ಲೇಖಿಸಿದ ಪುರಂದರದಾಸರ ಕೀರ್ತನೆಯಲ್ಲಿ[5] "ವರಮಹಾಲಕ್ಷ್ಮಿಯೆನೀವುದು ಗಡಿಗೆ, ಪರಮ ಕಲಶ ಕುಲದೇವತೆ...." ಎಂದು ಹೇಳಿರುವುದು ಗಮನಾರ್ಹ.

### ಕೀರ್ತನೆಗಳಲ್ಲಿ ಮದುವೆಯ ಬಗೆಗಳು

ಕೀರ್ತನೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿವಾಹದ ಬಗೆಗಳು ಕಂಡು ಬರುವುದಿಲ್ಲ. ಈ ಇಬ್ಬರು ಕೀರ್ತನಕಾರರ ಆರಾಧ್ಯದೈವ ವಿಷ್ಣುವಾದುದರಿಂದ ಬಹುಪತ್ನೀತ್ವದ ಉಲ್ಲೇಖ ಹೇರಳವಾಗಿ ಕಂಡಬರುವುದು ಸಹಜ. ಇಬ್ಬರು ಹೆಂಡತಿಯರ ಕಾಟದ ಬಗೆಗೆ ಪುರಂದರದಾಸರು ಹೀಗೆನ್ನುತ್ತಾರೆ:

---

1 ಪಾಡರೆ ಸೋಬನಾಲು ಪೈಪೈನೆ ಪೇರಟಾಂಡ್ಲು (15-55).
ಪಾಡಿರಿ ಸೋಬಾನ ನದೇ ಭಾರತಿಯು ಗಿರಿಜಯು (8-21).

2 ಇಂಕಾನೇಲ ಮಱಗುಲು ಇದ್ದರಿಕಿನಿ
ಪಂಕಿಂಚಕ ಸೋಬಾನ ಬಾಡೇಮು ನೇಮು (ಶೃ. ಸಂ. 29, ಪು.35).

3 ವಿವಾಹ ವೇದಿಕೆಯ ಮೇಲೆ ಅಕ್ಕಿ ಸುರಿಯಬೇಕೆಂದೂ ವಧೂವರರ ಕೈಯಲ್ಲಿ ಜೀರಿಗೆ, ಅಕ್ಕಿ ಇಡಬೇಕೆಂದೂ ಒಬ್ಬರ ಮೇಲೊಬ್ಬರು ಜೀರಿಕಾಯುಕ್ತ ತಂಡುಲಗಳನ್ನು ಸುರಿಯ ಬೇಕೆಂದೂ ಬರೆದಿದ್ದಾನೆ.

4 ಇದನ್ನೇ ಅಯಿರೇಣಿ, ಅವಿರೇಣಿ ಎನ್ನುವರು. ಮದುವೆಯಲ್ಲಿ ಚಿತ್ರ ಬರೆದಿರುವ ಗಡಿಗೆ ಮತ್ತು ಅದನ್ನು ಪೂಜಿಸುವ ವ್ರತಕ್ಕೆ ಕನ್ನಡದಲ್ಲೂ ಐರಾಣಿ ಎಂದು ಹೆಸರು.

5 ಪುಟ 51.

ಇಬ್ಬರ್ಹೆಂಡಿರ ಸುಖವ ಇಂದು ಕಂಡೆನಯ್ಯ ॥ಪ॥
ಅಬ್ಬಬ್ಬ ಎಂದಿಗೂ ಸಾಕು ಸಾಕಯ್ಯ ॥ಅ॥

ಒಬ್ಬಳಲಿ ಪೋಗಿ ಓಗರವ ಮಾಡೆನಲು
ಬೊಬ್ಬೆ ಏನಿದು ಕೊಬ್ಬೆ ನಡೆಯೆಂದಳು
ತಬ್ಬಿಬ್ಬುಗೊಂಡು ಇನ್ನೊಬ್ಬಳನು ಮಾಡೆನಲು
ಅಬ್ಬ ಬಿಸಿ ಮುಟ್ಟಲಾಪೆನೆಂದಳು

ಹಿರಿಯವಳ ಕೂಡೆ ನಾ ಸರಸವಾಡುವೆನೆಂದು
ಇರುಳು ಉಪ್ಪರಿಗೆ ನಾನೇರುತಿರಲು
ಚರಣವೊಬ್ಬಳು ಪಿಡಿದು ಶಿರವನೊಬ್ಬಳು ಪಿಡಿದು
ಸರಸರನೆ ಕೆಳಗೆ ಮೇಲೆಳೆಯುತಿಹರಯ್ಯ (ಉ. ಪ್ರ., ಭಾಗ 5, ಪು. 10)

ಅನ್ನಮಾಚಾರ್ಯರು ಈ ತರಹದ ಮದುವೆಯನ್ನು ಹೇಳಲು ಕಾರಣವಿದೆ. ಅವರ ಇಷ್ಟದೇವರಾದ ವೇಂಕಟೇಶ್ವರನಿಗೆ ಇಬ್ಬರು ಹೆಂಡತಿಯರು-ಪದ್ಮಾವತೀದೇವಿ ಮತ್ತು ಬೀಬಿನಾಂಚಾರಿ. ಆಚಾರ್ಯರಿಗೂ ಇಬ್ಬರು ಹೆಂಡತಿಯರು. ಈ ಅನುಭವ ದಿಂದ ಸವತಿಯರ ಬಗೆಗೆ ಹಲವೆಡೆಗಳಲ್ಲಿ ಅವರು ಬರೆದಿದ್ದಾರೆ :

ಈಗಲೇ ಸವತಿತನ ತಿಳಿಯಿತು ನನಗೆ ಇನ್ನು ನನ್ನನ್ನು
ಮಾತಾಡಿಸಬೇಡ ಹೋಗು (17-353).[1]
ಚಲ ಸಾಧಿಸಲು ಇದೇನು ಸವತಿಯ ಹೋರಾಟವೇ (14-57).[2]
ಸವತಿ ಜಗಳ ಇಷ್ಟೆಲ್ಲಾ ಮಾಡಿತು (17-519).[3]

ಬಹುಪತಿತ್ವ ನಮ್ಮ ಸಮಾಜದಲ್ಲಿ ಒಪ್ಪಿತವಾಗಿಲ್ಲ. ಇದರ ಬಗೆಗೆ ಈಗಾಗಲೇ ಹೇಳಲಾಗಿದೆ. ಪುರಂದರದಾಸರು ಒಂದುಕಡೆ ಬಹುಪತಿತ್ವವನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ. ಆದರೆ ಅದನ್ನು ಒಂದು ಪ್ರತಿಮೆಯಾಗಿ ಮಾತ್ರ ಅವರು ಬಳಸಿ ಕೊಂಡಿದ್ದಾರೆ.

ಸಾಕು ಸಾಕು ಸಂಸಾರ ಸಜ್ಜಾಗಿಲ್ಲ-ಒಲ್ಲೆ ಒಗೆತನವ
ಆರುಮಂದಿ ಗಂಡರಾಳುವರು ಎನ್ನ
ಆರುಮಂದಿಗೆ ಮೂರು ಸುತರನಗೆ.... (5-156)

ಇಲ್ಲಿ ಆರುಮಂದಿ ಗಂಡರು ಕಾಮಕ್ರೋಧಾದಿ ಅರಿಷಡ್ವರ್ಗವನ್ನೂ ಮೂರು ಸುತರು ತಾಪತ್ರಯವನ್ನೂ ಪ್ರತಿನಿಧಿಸುತ್ತಾರೆ.

---

[1] ಇಪ್ಪುಡೇ ಸವತಿತನ ಮೇರುಪಡೆ ನಾಕು ನೇಡು
ತಪ್ಪಲೇದು ಯಿಕ ನನ್ನು ದಡವಕ ಪೋವೇ.

[2] ಚಲಮುಲು ಸಾದಿಂಚ ಸವತಿ ಪೋರಾಯೇಮಿ.

[3] ಸವತಿ ಪೋರಿಂತ ಸೇಸೆನಯ್ಯಾ.

ತೆಲುಗರಿಗೆ ತುಂಬ ಪ್ರಿಯವಾದ 'ಮೇನರಿಕಂ'[1] ಅನ್ನಮಾಚಾರ್ಯರ ಅನೇಕ ಕೀರ್ತನೆಗಳಲ್ಲಿ ಉಲ್ಲೇಖಗೊಂಡಿದೆ. ತೆಲುಗರಿಗೆ ಮಾವನ ಮಗಳನ್ನು ಮದುವೆಯಾಗುವುದಕ್ಕಿಂತ ಪ್ರಿಯವಾದುದು ಬೇರೊಂದಿಲ್ಲ. ಸುಭದ್ರಾರ್ಜುನ ವಿವಾಹವಾಗಲಿ, ಉತ್ತರಾಭಿಮನ್ಯು ವಿವಾಹವಾಗಲಿ, ಅಲುಮೇಲುಮಂಗಾ ವೇಂಕಟೇಶ್ವರರ ವಿವಾಹವಾಗಲಿ–ಇವೆಲ್ಲ ಸೋದರಮಾವನ ಮಗಳೊಂದಿಗೆ ಮದುವೆಯಾದ ರೀತಿಯಲ್ಲೇ ತೆಲುಗು ಕವಿಗಳು ವರ್ಣಿಸಿರುವರು. ''ವೇಂಕಟೇಶ್ವರ ತನ್ನ ಮಾವನ ಮಗಳಾದ ಅಲಮೇಲುಮಂಗ ಮತ್ತು ನಾಂಚಾರಿಯೊಡನೆ ವೇಂಕಟಗಿರಿಯಲ್ಲಿದ್ದಾನೆ''[2] ಎಂದು ಅನ್ನಮಯ್ಯ ಹೇಳುತ್ತಾರೆ. ಅಲಮೇಲುಮಂಗ ಸೋದರಮಾವನ ಮಗಳೆಂದು ಯಾವ ಪುರಾಣದಲ್ಲೂ ಇಲ್ಲ. ಆದರೆ ಅನ್ನಮಾಚಾರ್ಯರು ತೆಲುಗರ ಸಂಸ್ಕೃತಿಯನ್ನು ಇಲ್ಲಿ ಮರೆಯಲಿಚ್ಛಿಸುವುದಿಲ್ಲ. ''ಬೆರಸಿ ಸೋದರಮಾವನ ಮಗುವಿಗಾಗಿ ಹೋಗಿ ವೀರತ್ವ ತೋರಿಸಿ ಮಾಯೆಂದ ಎತ್ತನ್ನು ಗೆದ್ದು ಬಂದ ತಿರುವೇಂಕಟಗಿರಿದೇವರು''[3] ಎನ್ನುತ್ತಾರೆ. 'ಮೇನಪಡುಚು' (13-177), 'ಮೇನಮಾಮ' (16-2-99) ಎಂಬವು ಸೋದರಮಾವನ ಮಗಳು ಮತ್ತು ಸೋದರ ಮಾವನ ಮಗನನ್ನು ಸೂಚಿಸುತ್ತವೆ. ಅನ್ನಮಾಚಾರ್ಯರ ಪ್ರಕಾರ ''ನಾರಾಯಣನು ಭುವಿ ವರನಾದ ಕೂಡಲೇ ಪಾಂಡವರು ಸೋದರಮಾವನ ಮಗನ ಸಂಬಂಧವನ್ನು (ಮೇನಮಾವಿ) ಪಡೆದರು.''[4]

ಮೇಲಿನ ಸಂಬಂಧದ ಅನುಬಂಧವಾಗಿ ನಾದಿನಿ ಜೊತೆ ಸರಸವಾಡುವುದು ಕೂಡ ತೆಲುಗು ಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ತೆಲುಗಿನಲ್ಲಿ ಸೋದರಮಾವನ ಮಗಳನ್ನೂ ಹೆಂಡತಿಯ ತಂಗಿಯನ್ನೂ 'ಮರದಲು' ಎಂದೇ ಕರೆಯುತ್ತಾರೆ. ಈ ಇಬ್ಬರೂ ಸರಸಕ್ಕೆ ತಕ್ಕವರೇ. ಶೃಂಗಾರ ಸಂಕೀರ್ತನೆಗಳಲ್ಲಿ ಅಲ್ಲಲ್ಲಿ ಪ್ರೇಯಸಿಯನ್ನು 'ಮರದಲು' ಎಂದು ಹೇಳಿರುವುದನ್ನು ನೋಡುತ್ತೇವೆ.[5]

ಮದುವೆಯಲ್ಲಿ ಹೆಣ್ಣಾಗಲಿ, ಗಂಡಾಗಲಿ ಶುಲ್ಕವನ್ನು ಕೊಡುವುದು ಅಂದಿಗೂ ಇಂದಿಗೂ ಇರುವಂಥದೇ. ''ಕನ್ಯಾಶುಲ್ಕಂ ಅತಿ ದೋಷಕರಂ'' ಎಂದು ಜೈಮಿನಿ

[1] ಇದರ ಬಗೆಗೆ ಹಿಂದೆ ಹೇಳಲಾಗಿದೆ.

[2] ಮಾಮಕೂತುರಲಮೇಲುಮಂಗ ನಾಂಚಾರಿಯುದಾನು
ಗೀಮುಗಾನೇ ವೇಂಕಟಗಿರಿ ನುಂಡೇವಾಡು (ಅಧ್ಯಾ. ಸಂ. 1, ಪು. 83)

[3] ಬೆರಸಿ ಮೇನಮಾಮ ಬಿಡ್ಡಕುನ್ನೈ ಪೋಯಿ
ನಿರತಂಪು ಬೀರಾಲು ನೆರಪುಚು
ಯಿರವೈನ ಮಾಯಪುಟೆದ್ದುಲ ಚೊರಿಗೊನ್ನ
ತಿರುವೇಂಕಟಗಿರಿ ದೇವುಡು (ಅಧ್ಯಾ. ಸಂ. 1, ಪು. 77).

[4] ನಾರಾಯಣುಡು ಭುವಿವರುಡು ದಾಗಾಗಾನೇ
ಮೇರಪಾಂಡವುಲಿಚ್ಚೆರಿ ಮೇನವಾವಿನಿ (8-258).

[5] ಮರಿಗೆ ಮರದಲಿವೈ ಮನಸುಮೆಟ್ಟುಕೊಂಡಗ
ಗರಿಮನೇ ಬೈಕೊಂಟೇ ಕನುಪಟ್ಟೇನಾ (ಶೃ. ಸಂ. 29, ಪು. 308).

ಭಾರತದಲ್ಲಿ (27-29) ಲಕ್ಷ್ಮೀಶನೇ ಹೇಳಿರುವನಾದರೂ ಈ ದುರಾಚಾರ ಇತ್ತೀಚಿನ ತನಕವೂ ಇದ್ದೇ ಇದೆ. ಒಂದು ಕಡೆ ಕನ್ಯಾಶುಲ್ಕ ಮತ್ತೊಂದುಕಡೆ ವರದಕ್ಷಿಣೆ ನಮ್ಮ ಸಮಾಜದ ಶಾಪಗಳು. ಕನ್ಯಾದಾನ ಮಾಡುವವ ವರನಿಂದ ಹಣ ಪಡೆದರೆ ಮಗಳನ್ನು ಮಾರಿದಂತಾಗುತ್ತದೆಂದು ಮನುಸ್ಮೃತಿ ಹೇಳುತ್ತದೆ (3; 51; 53; 54). ಸಾಮಾನ್ಯ ವಾಗಿ ವಿವಾಹದಲ್ಲಿ ನಡೆಯುವ ಹಣದ ಮತ್ತು ಇತರ ಬಹುಮಾನಗಳ ವ್ಯವಹಾರವನ್ನು ಒಂದು ಹೆಮ್ಮೆಯ ವಿಷಯವೆಂದೇ ಕವಿಗಳು ವರ್ಣಿಸಿದ್ದಾರೆ. ಅನ್ನಮಾಚಾರ್ಯರು ವಿವಾಹದ ಸಂದರ್ಭದಲ್ಲಿ ಕೊಡುವ ಅನೇಕ ರೀತಿಯ ಬಹುಮಾನಗಳನ್ನು ಪ್ರಸ್ತಾವಿಸಿ ದ್ದಾರೆ. 'ಉಂಕುವ ಸೊಮ್ಮುಲು' (15-129),[1] 'ಓಲಿ' (18-61), 'ಕಟ್ನಾಲು' (17-4) 'ನಾಗವಲ್ಲಿ ಕಟ್ನಾಲು' (13-55) ಮುಂತಾದವು ಇಂದಿಗೂ ಅಲ್ಲಲ್ಲಿ ಕಾಣಿಸಿ ಕೊಳ್ಳುತ್ತವೆ. ಈ ತರಹದ ವರ್ಣನೆಗಳನ್ನು ಪುರಂದರದಾಸರಲ್ಲೂ ಕಾಣಬಹುದು :

ಏಕೆ ಗೋಪಾಲ ಕರೆಯುತ್ತಾನೆ ಎಲೆ ಸಖಿಯೆ ಎನ್ನ ॥ಏಕೆ॥  
ಕಣ್ಣಸನ್ನೆ ಮಾಡುತಾನೆ ಮತ್ತೆ ಬಗೆ ಬಗೆ  
ಹಣ್ಣ ಕೈಯಲ್ಲಿ ತೋರುತಾನೆ ಎನ್ನ ಚೆಲುವಿಕೆ  
ಬಣ್ಣಿಸುತಲಿ ತಿರುಗುತಾನೆ ಇವನೇನೆ  
ಇನ್ನೂರು ವರಹಗಳ ಕೊಟ್ಟು ಮದುವೆಯಾದನೇನೆ....(4-55)

ಸಾಮಾನ್ಯವಾಗಿ ಇಂಥ ವರ್ಣನೆಗಳಲ್ಲಿ ಕಹಿ ಅನುಭವಗಳನ್ನು ಹೇಳಿರುವುದು ಬಹಳ ವಿರಳ. ಪುರಂದರದಾಸರು ಅದ್ದೂರಿ ಮದುವೆಯ ಕಹಿ ಚಿತ್ರವನ್ನು ಪರಿಣಾಮಕಾರಿ ಯಾಗಿ ಚಿತ್ರಿಸಿದ್ದಾರೆ.

ಮಗನ ಮದುವೆಯೆಂದು ಸಾಲವನು ಮಾಡಿ ನೀ  
ಸುಗುಣಯೆನಿಸಿಕೊಳ್ಳಲು ವ್ಯಯಮಾಡಿದೆ  
ಹಗರಣವ ಪಡಿಸಿದರೆ ಸಾಲಗಾರರು ಬಂದು  
ಬಗೆಬಗೆಯೊಳವರ ಕಾಲ್ಗೆರಗಿ ಬಿದ್ದಿರುವೆ (ಉ.ಪ್ರ., ಭಾಗ 1, ಪು. 17).

ಮದುವೆಗಾಗಿ ಎಷ್ಟು ಖರ್ಚು ಮಾಡಿದರೂ ಒಮ್ಮೊಮ್ಮೆ ಅದು ನಿಂತು ಹೋಗುವುದುಂಟು. ಇದಕ್ಕೆ ಕಾರಣರಾಗುವವರನ್ನು ದಾಸರು 'ಲಗ್ನಕಂಟಕರು' ಎಂದು ಕರೆದಿದ್ದಾರೆ. ಅಂಥವರ ಸಂಗ ಕೆಟ್ಟದ್ದೆಂದು ಹೇಳುತ್ತಾ "ಮದುವೆಯ ಕೆಡಿಸಿ ಮುದದಲಿ ನಲಿಯುವರ ಸಂಗಬೇಡ ಉದರಕೋಸುಗ ವಿಧಿಕರ್ಮ ತ್ಯಜಿಪರ ಸಂಗಬೇಡ" ಎನ್ನುತ್ತಾರೆ.

ಅನ್ನಮಾಚಾರ್ಯರು ಮತ್ತು ಪುರಂದರದಾಸರು ವಿವಾಹಾದಿ ವರ್ಣನೆಗಳಿಗೆ ಹೋಗದೆ ಸೂಚನಾಪ್ರಾಯವಾಗಿ ಅಲ್ಲಲ್ಲಿ ವಿವಾಹ ವಿಧಿಗಳನ್ನು ಹಾಗೂ ವಿವಿಧ ವಿವಾಹ ಗಳನ್ನು ಹೆಸರಿಸಿದ್ದಾರೆ. ಹಿಂದೂ ಸಂಸ್ಕೃತಿಯ ವಿವಾಹದ ಸ್ಥೂಲಸ್ವರೂಪವನ್ನು ಅರಿಯಲು ಇವು ನೆರವಾಗುತ್ತವೆ.

[1] ಮದುವೆಯಲ್ಲಿ ಮಾಡಿಸುವ ಒಡವೆಗಳು.

## ಕುಟುಂಬ

ಮದುವೆ ಒಂದು ಪದ್ಧತಿ ಎನಿಸಿಕೊಂಡರೆ, ಕುಟುಂಬ ಒಂದು ಮೂಲಭೂತ ಸಂಸ್ಥೆ ಎನಿಸಿಕೊಳ್ಳುತ್ತದೆ. ಕುಟುಂಬ ಒಂದು ರೂಪ ಪಡೆಯುವಲ್ಲಿ ಮದುವೆಯು ಪಾತ್ರ ಪರಿಣಾಮಕಾರಿಯಾದುದು. ಪರಸ್ಪರಾವಲಂಬಿಗಳಾದ ಈ ಎರಡು ವ್ಯವಸ್ಥೆಗಳಿಂದ ಸಮಾಜದಲ್ಲಿ ಸಂಸ್ಥಾಪರವಾದ ಸ್ಥಿರತೆ ಏರ್ಪಡುತ್ತದೆ. ವಿಚಾರಶಕ್ತಿಯಿಂದ ರೂಪಿಸಿಕೊಂಡ ಮನುಷ್ಯಕುಟುಂಬ ಸಾಮಾಜಿಕ ಜೀವನದಲ್ಲಿ ಸಕ್ರಿಯ ಪಾತ್ರ ವಹಿಸುತ್ತದೆ. ಸಾಮಾಜಿಕ ಸಂಸ್ಥೆಗಳಿಗೆ ಕೇಂದ್ರಬಿಂದುವಾಗಿ ಕುಟುಂಬ ಕೆಲಸ ಮಾಡುತ್ತದೆ.

ಕುಟುಂಬವನ್ನು ಆರ್ಥಿಕ ಘಟಕವೆಂದು ಕೆಲವರು ಭಾವಿಸಿದ್ದಾರೆ. ಆದರೆ ಅದನ್ನು ಸಾಂಸ್ಕೃತಿಕ ಘಟಕವೆನ್ನುವುದು ಸೂಕ್ತ. ಕುಟುಂಬ ನೋಡಿಕೊಳ್ಳುವ ಹಲವು ವಿಷಯಗಳಲ್ಲಿ ಆರ್ಥಿಕ ವ್ಯವಹಾರವೂ ಒಂದು. ಲೈಂಗಿಕ ಸಂಬಂಧ, ಮಕ್ಕಳ ಪೋಷಣೆ, ಸಂಪ್ರದಾಯಗಳ ರಕ್ಷಣೆ, ಸಂಸ್ಕೃತಿಯ ಪ್ರಸಾರ, ಹಣಸಂಪಾದನೆ ಮತ್ತು ರಕ್ಷಣೆ ಮುಂತಾದ ಅನೇಕ ವ್ಯವಹಾರಗಳನ್ನು ವ್ಯವಸ್ಥಿತವಾಗಿ ನೋಡಿಕೊಳ್ಳಲು ಕುಟುಂಬ ನೆರವಾಗುತ್ತದೆ.

ಕುಟುಂಬದಲ್ಲಿಯ ಹೆಣ್ಣಿನ ಮತ್ತು ಗಂಡಿನ ಪಾತ್ರ ಆ ಕುಟುಂಬದ ಸ್ವರೂಪವನ್ನು ತಿಳಿಸುತ್ತದೆ. ಹಲವು ಆದಿವಾಸಿ ಕುಟುಂಬಗಳಲ್ಲಿ ಹೆಣ್ಣು ಮತ್ತು ಗಂಡು ಸಮಾನವಾಗಿ ದುಡಿಯುವುದನ್ನು ನೋಡುತ್ತೇವೆ. ತಂದೆತಾಯಿಯರು ಮಾತ್ರವಲ್ಲದೆ ಮಕ್ಕಳು ಕೂಡ ಅವರದೇ ಆದ ರೀತಿಯಲ್ಲಿ ಕುಟುಂಬದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಕುಟುಂಬ ಎಂಬ ವ್ಯವಸ್ಥೆ ಇಲ್ಲದಿದ್ದರೆ ಮಕ್ಕಳ ಪಾಲನೆ ಸಾಧ್ಯವಾಗುವುದಿಲ್ಲ. ಮಕ್ಕಳು ಬೆಳೆಯುವಾಗ ಸಾಂಸ್ಕೃತಿಕವಾಗಿ ಕುಟುಂಬ ನೀಡುವ ಶಿಕ್ಷಣ, ರಕ್ಷಣೆ ಮುಂತಾದವು ಗಮನಾರ್ಹವಾಗಿರುತ್ತವೆ.

## ಕುಟುಂಬದ ಬಗೆಗಳು

ಕೌಟುಂಬಿಕ ರಕ್ಷಣೆಯ ಹೊಣೆಹೊತ್ತ ಮನುಷ್ಯರ ಮೂಲಭೂತ ಸಮೂಹವನ್ನು ಪ್ರಾಥಮಿಕ ಕುಟುಂಬವೆಂದು ಕರೆಯಬಹುದು. ಇದರಲ್ಲಿ ತಂದೆತಾಯಿ ಮಕ್ಕಳು ಪ್ರಧಾನರು. ಈ ಪ್ರಾಥಮಿಕ ಕುಟುಂಬಕ್ಕೆ ಇತರ ಸಂಬಂಧದ ಬಂಧುಗಳೂ ಸೇರಿಕೊಂಡು ವಿಸ್ತೃತ ಕುಟುಂಬಗಳೇರ್ಪಡುತ್ತವೆ.

ಬಹುಪತ್ನೀತ್ವ ಮತ್ತು ಬಹುಪತಿತ್ವಗಳಿಂದ ಎರಡು ರೀತಿಯ ಕುಟುಂಬಗಳೇರ್ಪಡುತ್ತವೆ. ಬಹುಪತ್ನೀತ್ವ ಕುಟುಂಬದಲ್ಲಿ ಪುರುಷ, ಅವನ ಹೆಂಡತಿಯರು ಮತ್ತು ಅವರ ಮಕ್ಕಳು ಇರುತ್ತಾರೆ. ವಿಜಯನಗರ ಕಾಲದಲ್ಲಿ ಈ ಬಗೆಯ ಕುಟುಂಬಗಳು ಹೆಚ್ಚಾಗಿ ಇದ್ದಿರಬೇಕೆಂದು ಊಹಿಸಬಹುದು. ಬಹುಪತಿತ್ವ ಕುಟುಂಬಗಳು ಅತಿ ವಿರಳವೆಂದೇ ಹೇಳಬಹುದು.

ಭಾರತದಲ್ಲಿ ಅಧಿಕವಾಗಿ ಕಂಡುಬರುವ, ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತಿರುವ ಕುಟುಂಬದ ಮಾದರಿ ಎಂದರೆ ಅವಿಭಕ್ತ ಕುಟುಂಬ. ಒಂದಕ್ಕಿಂತ ಹೆಚ್ಚು

ಪ್ರಾಥಮಿಕ ಕುಟುಂಬಗಳು ಸೇರಿ ಅವಿಭಕ್ತ ಕುಟುಂಬವಾಗುತ್ತದೆ. ಭಾರತದ ಪುರಾಣ, ಐತಿಹ್ಯ, ಇತಿಹಾಸ, ಧರ್ಮಶಾಸ್ತ್ರ ಮುಂತಾದವು ಅಂಗೀಕರಿಸಿದ ಕುಟುಂಬದ ಮಾದರಿ ಇದು. ರಕ್ತಸಂಬಂಧ ಮತ್ತು ವಾಸಸ್ಥಾನದ ಆಧಾರದ ಮೇಲೆ ಮಾತೃಪ್ರಧಾನ ಹಾಗೂ ಪಿತೃಪ್ರಧಾನ ಕುಟುಂಬಗಳೇರ್ಪಡುತ್ತವೆ. ಈ ಎರಡು ಮಾದರಿಗಳಲ್ಲಿಯೂ ಮಕ್ಕಳು ತಮ್ಮ ವಿವಾಹದ ಮೂಲಕ ಕುಟುಂಬದ ಮೂಲಸ್ಥಾನವನ್ನು ಬಿಡಬಾರದು. ಈ ಲಕ್ಷಣ ದಿಂದ ಮಾತೃಸ್ಥಾನೀಯ (matrilocal) ಮತ್ತು ಪಿತೃಸ್ಥಾನೀಯ (patrilocal) ಎಂಬ ಹೆಸರುಗಳೇರ್ಪಟ್ಟವು. ಮೊದಲನೆಯ ವರ್ಗಕ್ಕೆ ಕೇರಳದ ನಾಯರ್ ಕುಟುಂಬ ಗಳನ್ನೂ ಎರಡನೆಯ ವರ್ಗಕ್ಕೆ ಭಾರತದ ಇತರ ಹಿಂದೂ ಕುಟುಂಬಗಳನ್ನೂ ಉದಾಹರಣೆ ಯಾಗಿ ಹೇಳಬಹುದು. ಒಟ್ಟಿನಲ್ಲಿ ಅವಿಭಕ್ತ ಕುಟುಂಬದಲ್ಲಿ ಇರುವವರು ಅಲ್ಲಿಯೇ ಹುಟ್ಟಿ, ಅಲ್ಲಿಯೇ ಬೆಳೆದು, ಸಂತಾನೋತ್ಪತ್ತಿಗಾಗಿ ಮದುವೆ ಮಾಡಿಕೊಂಡು ಬೇರೆಯವ ರನ್ನೂ ಸೇರಿಸಿಕೊಂಡು ಮುಂದುವರಿಯುತ್ತಾರೆ. ಪಿತೃಸ್ಥಾನೀಯ ಕುಟುಂಬದ ಗಂಡು ಮಕ್ಕಳು ಮದುವೆಯಾದ ಮೇಲೆ ಮೂಲಕುಟುಂಬದಿಂದ ದೂರ ಹೋಗುತ್ತಾರೆಂಬು ದೇನೋ ನಿಜ. ಆದರೆ ಅವರು ಕುಟುಂಬದ ತಮ್ಮ ಸದಸ್ಯತ್ವವನ್ನು ಪೂರ್ಣವಾಗಿ ಬಿಟ್ಟುಕೊಡುವುದಿಲ್ಲ.

ಹಿಂದೂ ಅವಿಭಕ್ತಕುಟುಂಬದ ಸದಸ್ಯರಿಗೆಲ್ಲ ಒಂದೇ ಅಡುಗೆ ಮನೆ ಮತ್ತು ಒಂದೇ ಪೂಜಾಗೃಹವಿರುತ್ತದೆ. ಆಸ್ತಿ ಕುಟುಂಬಕ್ಕೆ ಸೇರಿರುತ್ತದೆ. ಕುಟುಂಬದ ಯಜಮಾನ ನಿಗೆ ವಿಶೇಷವಾದ ಅಧಿಕಾರವಿರುತ್ತದೆ. ಎಲ್ಲ ಸದಸ್ಯರಿಗೂ ಕೆಲವು ಹಕ್ಕು ಬಾಧ್ಯತೆ ಗಳಿರುತ್ತವೆ. ಹಿಂದೂ ಅವಿಭಕ್ತ ಕುಟುಂಬದ ಸದಸ್ಯರೆಲ್ಲರಿಗೂ ಆಸ್ತಿಯುಹಕ್ಕು ಇರುವು ದಿಲ್ಲ. ಈ ಹಕ್ಕು ಮಗನಿಗೆ ಅಥವಾ ಮೂರು ತಲೆಮಾರಿನ ಗಂಡು ಸಂತತಿಗೆ ಸೀಮಿತ ವಾಗಿರುತ್ತದೆ. ಸ್ತ್ರೀಗೆ ಕುಟುಂಬದಿಂದ ಬರುವ ಆಸ್ತಿ ಕೇವಲ ದಾನರೂಪದಿಂದ ಬರ ಬೇಕಷ್ಟೆ.

ಅವಿಭಕ್ತಕುಟುಂಬದಲ್ಲಿ ತಂದೆಯೇ ಯಜಮಾನ. ಸರ್ವಾಧಿಕಾರವುಳ್ಳವನೇ ಎಂಬುದು ಸಂಶಯಾಸ್ಪದ. ಭಾರತೀಯ ಕುಟುಂಬ ಕೇವಲ ಭಯದ ಆಧಾರದ ಮೇಲೆ ರೂಪು ಗೊಳ್ಳದೆ ಪ್ರೀತಿವಾತ್ಸಲ್ಯಗಳ ತಳಹದಿಯ ಮೇಲೆ ನಿಂತಿದೆ. ಅವಿಭಕ್ತ ಕುಟುಂಬದ ಸದಸ್ಯರು ಪ್ರತ್ಯೇಕವಾಗಿ ಆಸ್ತಿ ಹೊಂದುವ ಹಕ್ಕನ್ನು ಧರ್ಮಶಾಸ್ತ್ರಕಾರರು ನಿರೂಪಿಸಿ ದ್ದಾರೆ. ಸ್ತ್ರೀಧನ ಮುಂತಾದವು ಇದರಲ್ಲಿ ಸೇರಿವೆ. ಬೇರೆ ದೇಶಗಳಲ್ಲಿ ಅವಿಭಕ್ತಕುಟುಂಬ ಅಳಿದುಹೋದರೂ ಭಾರತದಲ್ಲಿ ಮಾತ್ರ ಇಂದಿಗೂ ಪ್ರಾಮುಖ್ಯವನ್ನು ಕಳೆದುಕೊಂಡಿಲ್ಲ.

## ಕೀರ್ತನೆಗಳಲ್ಲಿ ಕುಟುಂಬ

ಕೀರ್ತನೆಗಳಲ್ಲಿ ಕುಟುಂಬದ ಲಾಕ್ಷಣಿಕ ವರ್ಣನೆಗಳಿಗಿಂತ ಸಾಂಸಾರಿಕ ಚಿತ್ರ ಕಂಡು ಬರುತ್ತದೆ. ಸಂಸಾರದಲ್ಲಿ ಹೆಣ್ಣಿನ ಸ್ಥಾನ, ಜೀವನದ ಹಲವು ಮುಖಗಳು ಕೀರ್ತನೆಗಳಲ್ಲಿವೆ. ತಾಯಿಯಾಗಿ, ಅತ್ತೆಯಾಗಿ, ಹೆಂಡತಿಯಾಗಿ, ಮಗಳಾಗಿ, ಅತ್ತಿಗೆಯಾಗಿ, ನಾದಿನಿಯಾಗಿ

ಹೆಣ್ಣು ನಿರ್ವಹಿಸುವ ಪಾತ್ರವನ್ನು ಪುರಂದರದಾಸರು ಮತ್ತು ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ಚಿತ್ರಿಸಿದ್ದಾರೆ.

ಪುರಂದರದಾಸರಂತೂ ಹೆಣ್ಣಿನ ವೈವಿಧ್ಯಮಯ ಚಿತ್ರವನ್ನು ಕೊಟ್ಟಿದ್ದಾರೆ. "ಸತಿಗೆ ಸ್ವಾತಂತ್ರ್ಯವ ಕೊಡದಿರಿ, ಮಂತಿಗೆಟ್ಟು ಭ್ರಮೆಯ ಬಡದಿರಿ" (5-110) ಎಂಬುದನ್ನು ಮಾತ್ರ ತೆಗೆದುಕೊಂಡು ಪುರಂದರದಾಸರಿಗೆ ಸ್ತ್ರೀಯರ ಬಗೆಗೆ ಒಳ್ಳೆಯ ಅಭಿಪ್ರಾಯವಿಲ್ಲ ಎಂದು ಹೇಳಲಾಗದು. "ಆದದ್ದೆಲ್ಲ ಒಳಿತೇ ಆಯಿತು...." ಎಂಬ ಕೀರ್ತನೆಯಲ್ಲಿ ಒಬ್ಬ ವ್ಯಕ್ತಿಯ ಮಾನಸಿಕ ವಿಕಾಸಕ್ಕೆ ಹೆಂಡತಿ ಹೇಗೆ ನೆರವಾಗಬಲ್ಲಳು ಎಂಬುದನ್ನು ಹೇಳುತ್ತಾರೆ. "ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ...." (ಹ. ಕೀ. ತ., ಪು. 145) ಎಂಬ ಹಾಡಿನಲ್ಲಿ ವಿಧವೆಯರ ಬಗೆಗೆ ಸಮಾಜ ಹಾಗೂ ಕುಟುಂಬ ವರ್ತಿಸುವ ಬಗೆಯನ್ನು ದಾಸರು ಬಹಳ ಅನುಕಂಪದಿಂದ ಹೇಳಿದ್ದಾರೆ. ವೈದಿಕ ಗಂಡನನ್ನು ಮದುವೆಯಾದವಳ ಬವಣೆಯನ್ನು ದಾಸರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಒಲ್ಲೆನೆ ವೈದಿಕ ಗಂಡನ ನಾ
ನೆಲ್ಲಾದರೂ ನೀರ ಧುಮುಕುವೆನಮ್ಮ

ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ
ಕೆಟ್ಟಸೀರೆಯ ನಾನುಡಲಾರೆನೆ
ಒಟ್ಟತೊಳಸಿ ಎನ್ನ ರಟ್ಟೆಯೆಲ್ಲ ನೊಂದವು
ಎಷ್ಟೆಂದು ಹೇಳಲಿ ಕಷ್ಟದ ಒಗತನ.... (6-103)

ವಯಸ್ಸಾದವನನ್ನು ಮದುವೆಯಾದ ಹೆಣ್ಣೊಬ್ಬಳು "ಮುಪ್ಪಿನ ಗಂಡನ ಒಲ್ಲೆನೆ, ತಪ್ಪದೆ ಪಡಿಪಾಟ ಪಡಲಾರೆನವ್ವ.... (6-109) ಎಂದು ತನ್ನ ಪಡಿಪಾಟಲನ್ನು ತೋಡಿಕೊಳ್ಳುತ್ತಾಳೆ.

ಹೆಣ್ಣು ಗೃಹಕೃತ್ಯವನ್ನು ಹೇಗೆ ನಿರ್ವಹಿಸಬೇಕೆಂಬುದನ್ನೂ ದಾಸರು ಹೇಳಿದ್ದಾರೆ.

ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ
ತಂದರೆ ಹತ್ತು ಮನೆಯೊಳಗೊಂದ ಮಾಡಿ
ಇಂದಿಗೆ ಇಲ್ಲವೆಂದು ಮುಖವ ತಿರುಹುತಲಿ ಮದ
ದಿಂದ ಹೋಹ ನಾರಿ ಬಹು ದೊಡ್ಡ ಮಾರಿ (5-109)

ಸಂಸಾರದಲ್ಲೇ ಇದ್ದು ಜ್ಞಾನಾರ್ಜನೆಯಲ್ಲಿ ತೊಡಗಿದ ಮನುಷ್ಯನ ದ್ವೈತಭಾವ ಪುರಂದರದಾಸರಲ್ಲೂ ಅನೇಕ ಕಡೆಗಳಲ್ಲಿ ಕಾಣಿಸುತ್ತದೆ. ಭೋಗಯೋಗಗಳ ತೊಳಲಾಟದಲ್ಲಿ ಸಂಸಾರವೈರಾಗ್ಯಗಳನ್ನು ಪ್ರತಿಬಿಂಬಿಸುವ ಕೀರ್ತನೆಗಳು ಹೊರಬಂದವೆನ್ನಬಹುದು. "ಭ್ರಷ್ಟರಾದರು ಮನುಜರು....ಮಡದಿ ಮಾತನು ಕೇಳಿ ನಡೆದುಕೊಂಬನು ಭ್ರಷ್ಟ" (ಹ. ಕೀ. ತ., ಪು. 323), "ನಂಬಬೇಡಿ ನಾರಿಯರನು ಹಂಬಲ ಹಾರೈಸಬೇಡಿ" (ಉ. ಪ್ರ., ಭಾಗ 2, ಪು. 7), "ಹೆಂಡತಿ ಪ್ರಾಣ ಹಿಂಡುತಿ" (ಹ. ಕೀ. ತ., ಪು. 310)

ಮುಂತಾದುವು ಅವರ ವೈರಾಗ್ಯ ಭಾವನೆಯು ಫಲವಾಗಿ ಅವತರಿಸಿದ ಹೆಣ್ಣಿನ ಚಿತ್ರವಾಗಿ ಮೂಡಿ ಬಂದಿವೆ. ಸಂಸಾರಿಯು ಕಷ್ಟವನ್ನು ಒಂದು ಕಡೆ ವರ್ಣಿಸುತ್ತಾ ಹೀಗೆಂದಿದ್ದಾರೆ : "ಎಡಕೆ ಬಾವಿಯುಂಟು ಬಲಕೆ ಕೆರೆಯು ನೋಡು ಮುಂದೆ ಕಾಳ್ಗಿಚ್ಚು.... ಹಿಂದೆ ಹುಲಿ ಬೆನ್ನಟ್ಟಿ ಬರುತಲಿದೆ" (6-42).

ದಾಂಪತ್ಯ ಎನ್ನುವುದು ಗಂಡ, ಹೆಂಡತಿ ಸೇರಿ ಸಕ್ರಮವಾಗಿ ನಡೆಸಿಕೊಂಡು ಹೋಗ ಬೇಕಾದುದೆಂಬ ಕಲ್ಪನೆಯನ್ನು ಪುರಂದರದಾಸರು ನೀಡಿದ್ದಾರೆ. "ಗಂಡ ಮಾಡಿದ ಪಾಪ ಹೆಂಡತಿಗಿಲ್ಲ, ಹೆಂಡತಿ ಮಾಡಿದ ಪಾಪ ಗಂಡಗುಂಟು, ಹೆಂಡತಿ ಮಾಡಿದ ಪುಣ್ಯ ಗಂಡಗಿಲ್ಲ, ಗಂಡ ಮಾಡಿದ ಪುಣ್ಯ ಹೆಂಡತಿಗುಂಟು" (5-103) ಎಂಬುದನ್ನು ದಾಸರು ಯಾವ ಅರ್ಥದಲ್ಲಿ ಹೇಳಿದ್ದರೂ ಹೆಂಡತಿ ಸಂಸಾರದಲ್ಲಿ ಮುಖ್ಯ ಪಾತ್ರ ವಹಿಸುತ್ತಾಳೆ ಎಂದು ಹೇಳಿದಂತೆ ಆಯಿತು. "ಒಂಟಿಯಲಿ ಹೆಂಡತಿಯು ಬಿಡುವಾತನೇ ಮೂರ್ಖ, ಗಂಟನೊಬ್ಬರ ಕೈಯಲಿಡುವಾತನೇ ಮೂರ್ಖ" (ಉ. ಪ್ರ., ಭಾಗ 1, ಪು. 24) ಎಂದು ಹೇಳುವಾಗ ಸ್ತ್ರೀಯು ಬಗೆಗೆ ಅನುಮಾನ ಎದ್ದು ಕಾಣುತ್ತದೆ.

ಸಂಸಾರದಲ್ಲಿ ಏನೇನಿದ್ದರೆ ಸುಖ ಎಂಬುದು ಈ ಮುಂದಿನ ಕೀರ್ತನೆಯಲ್ಲಿದೆ.

ಉದ್ಯೋಗದಲಿ ಒಳ್ಳೆ ಲಾಭವಾದರೆ ಸುಖವು
ಬದ್ಧನುಡಿ ನುಡಿಯುವುದು ಬಹಳ ಸುಖವು
ಗುದ್ದಾಟವಿರದಣ್ಣ ತಮ್ಮರಿದ್ದರೆ ಸುಖವು
ಬುದ್ಧಿವಂತನಾಗಿ ಬಾಳುವುದು ಸುಖವಯ್ಯ

ಮತ್ಸರವಿರದ ಸೊಸೆಯು ಮನೆಗೆ ಬಂದರೆ ಸುಖವು
ಪುತ್ರತಾ ಬುದ್ಧಿವಂತನಾದರೆ ಸುಖವು
ಹಸ್ತವನು ಎತ್ತಿ ದಾನವನು ಕೊಡುವುದು ಸುಖವು
ವಸ್ತ್ರವನು ಮಾಸದುಡುವುದು ಬಹಳ ಸುಖವಯ್ಯ

ಭೂತಳದಿ ಸಮ್ಮತನು ಆಗಿ ಬಾಳ್ವುದು ಸುಖವು
ಭೂತೇಶನಾ ಪ್ರೀತಿ ಬಹಳ ಸುಖವು
ನೀತಿನಡೆಯನು ನಡೆವುದೇ ಸುಖವು ಹಿರಿಯರ
ಮಾತುಗಳ ನಡಸುವುದು ಬಹಳ ಸುಖವಯ್ಯ (5-148)

ಸುಖದುಃಖಗಳೆರಡನ್ನೂ ಸಮಾನವಾಗಿ ಕಾಣಬೇಕೆಂದು ತಿಳಿಸಿ 'ಸುಖಕೆ ತಾನಾರೊ ದುಃಖಕೆ ತಾನಾರೊ ಸುಖದುಃಖವೆರಡೂ ಶ್ರೀಹರಿಯ ಅಧೀನವಲ್ಲದೆ....' (5-13) ಎಂದು ಸಮಾಧಾನ ಹೇಳುತ್ತಾರೆ.

ಕುಟುಂಬ ಆದರ್ಶಪ್ರಾಯವಾಗಿದ್ದರೆ ಹೇಗಿರುತ್ತದೆಂಬುದನ್ನು ದಾಸರು ಸೂಚಿಸಿದ್ದಾರೆ :

ಸಂಸಾರವೆಂಬಂಥ ಭಾಗ್ಯವಿರಲಿ
ತಂದೆ ನೀನೆ ಕೃಷ್ಣ ತಾಯಿ ಇಂದಿರದೇವಿ
ಪೊಂದಿದ ಅಣ್ಣ ವನಜಸಂಭವನು
ಇಂದುಮುಖಿ ಸರಸ್ವತೀದೇವಿಯೇ ಅತ್ತಿಗೆಯು....

(ಉ. ಪ್ರ., ಭಾಗ 4, ಪು. 38)

ಕುಟುಂಬದ ವಿವಿಧ ಸಂಬಂಧಗಳಲ್ಲಿ ಮೊಟ್ಟಮೊದಲು ಹೇಳಬೇಕಾದುದು ತಾಯಿ-ಮಗುವಿನ ಸಂಬಂಧ. ಇದಕ್ಕೆ ದಾಸರು ಹೆಚ್ಚು ಒತ್ತು ಕೊಟ್ಟಿದ್ದಾರೆ. ಏಕೆಂದರೆ ಇದು ಭಗವಂತ ಮತ್ತು ಭಕ್ತರ ನಡುವಿನ ಸಂಬಂಧಕ್ಕೆ ಪ್ರತೀಕ. ಹುಟ್ಟಿದ ಮಗು ಬೆಳೆಯುತ್ತಾ ಹೋದಂತೆ ಸಕ್ರಮವಾಗಿ ಏನೇನನ್ನು ಕಲಿಯುತ್ತದೆ ಎಂಬುದನ್ನು ದಾಸರು ಹೇಳಿದ್ದಾರೆ. "ಹೊಡೆ ಮರಳ ಕಲಿತ ಶ್ರೀಕೃಷ್ಣ ನಾಗರ ಹೆಡೆಯಂತೆ ತಲೆಯೆತ್ತಲು ಕಲಿತ ಕೃಷ್ಣ ಕಡು ಮುದ್ದು ಸುರಿವಂತೆ ನಗಲು ಕಲಿತ ಕೃಷ್ಣ ನುಡಿಯ ಕಲಿತ 'ಉಗ್ಗು ಉಗ್ಗು' ಎಂದು ಕೃಷ್ಣ ..." (4-21). ತಾಯಿಯ ವಾತ್ಸಲ್ಯ ಅನೇಕ ಕೀರ್ತನೆಗಳಲ್ಲಿ ಮೂಡಿಬಂದಿದೆ. ಮಗುವಿಗೆ ತಾಯಿ ನಡಿಗೆಯನ್ನು ಕಲಿಸುವ ರೀತಿ ಹೀಗೆ ಚಿತ್ರಿತವಾಗಿದೆ : "ಬಿಡು ಬಿಡು ಬಾಲಕ ನಿಲ್ಲು ನಿಲ್ಲೊ ಎಂದು ಕುಡಿಬೆರಳಿಂದ ಕರವನು ಪಿಡಿದು, ಅಡಿಯಿಡು ಮಗನೆ ಒಂದಡಿಯಿಡೊ ಎನುತಲಿ ನಡೆಸಿ ನೋಡುವಳು" (4-4).

ಪುರಂದರದಾಸರಲ್ಲಿ ಮಗುವಿನ ಮುಗ್ಧಚಿತ್ರಗಳು ಬಾಲಕೃಷ್ಣನ ರೂಪದಲ್ಲಿ ಮೂಡಿಬಂದಿವೆ. ಕೃಷ್ಣನ ವರ್ಣನೆಯ ನೆಪದಲ್ಲಿ ಸಾಮಾನ್ಯವಾಗಿ ಎಲ್ಲರ ಮನೆಯಲ್ಲೂ ಕಂಡುಬರುವ ಮಗುವಿನ ಆಟಪಾಠಗಳನ್ನು ಸುಂದರವಾಗಿ ನಿರೂಪಿಸಿದ್ದಾರೆ. ಮಗು ಮಲಗದೆ ಅಳುವಾಗ ಅದು ಮಲಗಲೆಂದು ತಾಯಿ ಹೆದರಿಸುವ ಚಿತ್ರ : "ಬೂಚಿ ಬಂದಿದೆ ರಂಗ ಬೂಚಿ ಬಂದಿದೆ, ಚಾಚಿ ಕುಡಿದು ಸುಮ್ಮನೆ ನೀ ಪಾಚಿಕೊಳ್ಳೊ ಕೃಷ್ಣಯ್ಯ" (4-36). ಇನ್ನೊಂದೆಡೆ ಮಗುವಿನ ಮುಗ್ಧ ಭಾವನೆಗಳನ್ನು ಚಿತ್ರಿಸಿದ್ದಾರೆ.

ರಂಗನನೆತ್ತಿ ಸಂಭ್ರಮದಿಂದಲಿ
ಅಂಗಣದೊಳಗೆ ನಿಂದಾಡಿಸಲು
ತಿಂಗಳ ಬಿಂಬವ ಕಂಡಾಕ್ಷಣ ತ
ನ್ನಂಗೈಯೊಳಗೇ ನಿಲಿಸಿಕೊಡೆಂಬ

ಚಿನ್ನನು ನೋಡಲಿ ಎಂದಕ್ಕರದಲಿ
ಕನ್ನಡಿಯನು ತಂದು ಕೈಯಲಿ ಕೊಡಲು
ತನ್ನ ಮುಖದ ಪ್ರತಿಬಿಂಬವ ಕಂಡು ಅ
ದನ್ನು ಕರೆದು ಬಳಿಯಿರಿಸಿರಿಯೆಂಬ

ಅರಿಯದೆ ದೀಪವ ಕೆಂಪಗೆ ಕಂಡು
ಸೆರಗಿನಲ್ಲಿ ಕೊಡು ಆಡುವೆನೆಂಬ.... (4-22)

ಇವೆಲ್ಲವನ್ನೂ ಸೇರಿಸಿ ಪುರಂದರದಾಸರು ಒಂದೇ ಮಾತಿನಲ್ಲಿ ಹೀಗೆಂದರು : ''ಮಕ್ಕಳಿರ ಬೇಕು ಮನೆತುಂಬಾ ಬಾಲಕೃಷ್ಣನಂಥ ಮಕ್ಕಳಿರಬೇಕು'' (ಹ. ಕೀ. ತ., ಪು. 257).

ಕುಟುಂಬದಲ್ಲಿರುವ ಜನರ ನಡುವೆ ಸೌಹಾರ್ದ ವಾತಾವರಣವಿರಬೇಕು. ಅವಿಭಕ್ತ ಕುಟುಂಬದಲ್ಲಿ ಸರಸ ವಿರಸಗಳಿಗೆ ಕೊರತೆ ಇಲ್ಲ. ಆದರೆ ಎಷ್ಟೇ ಕಷ್ಟನಷ್ಟಗಳಿದ್ದರೂ ಈ ಬಂಧವನ್ನು ಮುಂದುವರಿಸಿಕೊಂಡು ಬರುತ್ತಿರುವ ಭಾರತೀಯ ಚಿತ್ತವೃತ್ತಿ ಪ್ರಶಂಸಾರ್ಹ ವಾದುದು. ಅವಿಭಕ್ತ ಕುಟುಂಬದ ಬಂಧವನ್ನು ಕೆಲವು ಅದ್ಭುತವಾದ ಉಪಮೆಗಳಿಂದ ಅನ್ನಮಾಚಾರ್ಯರು ನಿರೂಪಿಸಿದ್ದಾರೆ. ಪ್ರೀತಿ ವಾತ್ಸಲ್ಯಗಳಿಂದ ಕೂಡಿದ ಸಾವಿರಾರು ವರ್ಷಗಳಿಂದ ನಡೆದುಕೊಂಡು ಬರುತ್ತಿರುವ ಈ ಪವಿತ್ರ ಬಂಧ ''ನೀಡಲೋಪಲ ಯೆಂಡ ನೆಲಕೊನ್ನ ಬಂಧಂಬು'' (ನೆರಳೊಳಗೆ ಬಿಸಿಲು ನೆಲೆಯೂರಿದ ಬಂಧ) ಎಂದಾಗ ಸುಖ ದುಃಖಗಳ ಸಮ್ಮಿಶ್ರದ ಕುಟುಂಬ ಜೀವನ ಕಣ್ಣಿಗೆ ಕಟ್ಟಿದಂತಾಗುತ್ತದೆ (ಅಧ್ಯಾ. ಸಂ., 1, ಪು. 72). ದಾಂಪತ್ಯವನ್ನು ಕುರಿತಂತೆ ಅನ್ನಮಾಚಾರ್ಯರು ಕೆಲವು ಕಡೆ ರಮಣೀಯ ಭಾವಗಳನ್ನು ಕಾವ್ಯರೂಪದಲ್ಲಿ ಮೂಡಿಸಿದ್ದಾರೆ. ಇವೆಲ್ಲ ವೇಂಕಟೇಶ್ವರನ ಮತ್ತು ಅವನ ಹೆಂಡತಿ ಅಲಮೇಲು ಮಂಗಮ್ಮನನ್ನು ಕುರಿತಂಥವೇ. ಆದರೆ ಈ ಕೀರ್ತನೆಗಳಲ್ಲಿ ಕಂಡು ಬರುವ ಚಿತ್ರಗಳು ಭಾರತೀಯರ ದಾಂಪತ್ಯದ ಹಲವು ಮುಖಗಳನ್ನು ಪ್ರತಿಬಿಂಬಿಸುತ್ತವೆ. ಒಂದು ಕಡೆ ಅನ್ನಮಾಚಾರ್ಯರು ಹೀಗೆನ್ನುತ್ತಾರೆ : ''ತೆಲುಗುಲ ನೀ ಪತಿಕಿ ತೆಲ್ಲನಿ ನವ್ವುಲು ಚಲ್ಲಿ, ಅಲಚೇತಿ ಮಣಿವೈತಿ ವಲಮೇಲುಮಂಗಾ'' (ನಿನ್ನ ಪತಿಗೆ ಬಿಳಿನಗೆ ಚೆಲ್ಲಿ ಅಂಗೈಯ ಮಣಿಯಾದೆ ಅಲಮೇಲುಮಂಗಾ, 17-512).

ಮನೆ ಎಂದ ಮೇಲೆ ಜಗಳಗಳಾಗುವುದು ಸಹಜ. ಆದರೆ ಮನೆಯ ಗುಟ್ಟನ್ನು ಹೊರಗೆ ಬಿಟ್ಟುಕೊಡದಿರುವುದೇ ಪ್ರತಿಷ್ಠೆಯ ಸಂಕೇತ. ಮನೆಯೊಳಗಿನ ಜಗಳವನ್ನು ವರ್ಣಿಸುವಾಗ 'ನಡುಮನೆಯ ಜಗಳ' ಎಂಬ ಪದವನ್ನು ಬಳಸುತ್ತಾರೆ ಅನ್ನಮಾ ಚಾರ್ಯರು. ಈ ಬದುಕು ನಡುಮನೆಯ ವೈರದಂಥದು ಎನ್ನುತ್ತಾರೆ. ''ನಡುಮನೆಯ ವಿರೋಧ ನಗೆಗೇಡು ಬದುಕು''[1] ಎಂದು ಹೇಳಿದ್ದಾರೆ.

ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ಕಾಣಬಹುದಾದ ಇನ್ನೊಂದು ಉಲ್ಲೇಖ ತಾಯ್ತನ. ತಾಯಿ ಮತ್ತು ಮಗುವಿನ ಮಧುರ ಬಾಂಧವ್ಯವನ್ನು ಕುಟುಂಬದ ಹಿನ್ನೆಲೆ ಯಲ್ಲಿ ನಿರೂಪಿಸಿದ ಕೆಲವು ಸಾಲುಗಳು ಇವರ ಕೀರ್ತನೆಗಳಲ್ಲಿ ಸಿಕ್ಕುತ್ತವೆ. ಬಂಜೆ ಎಂಬ ಶಬ್ದಕ್ಕೆ ಭಾರತೀಯ ಸಮಾಜದಲ್ಲಿ ಬೆಲೆಯಿಲ್ಲ. ಅನ್ನಮಾಚಾರ್ಯರು ವೇಂಕಟೇಶ್ವರ ನನ್ನು ಕುರಿತು ''ಹುಟ್ಟುಬಂಜೆಯರಿಗೆ ಮಕ್ಕಳನ್ನು ನೀಡುವ ಗೋವಿಂದ''[2] ಎನ್ನುತ್ತಾರೆ.

---

[1] ನಟ್ಟಿಂಟಿ ವೈರಂಬು ನಗುಬಾಟು ಬ್ರತುಕು (8-67)

[2] ಪುಟ್ಟುಗೊಡ್ಡುರಾಂಡ್ರಕು ಬಿಡ್ಡಲಿಚ್ಚೆ ಗೋವಿಂದುಡೇ (ಅನ್ನ, ಸಂ. ಭಾಗ 2,ಪು.1)

ಇನ್ನೊಂದು ಕಡೆ ದೇವತಾನಿಂದಕರನ್ನು ಕುರಿತು ಹೇಳುವಾಗ "ಹೆತ್ತತಾಯನ್ನು ಬಂಜೆ ಎನ್ನುವ ದೇವತಾನಿಂದಕರನ್ನು ಕುರಿತು ಹೇಳಲು ಸಾಧ್ಯವೇ"[1] ಎನ್ನುತ್ತಾರೆ.

ತೌರಿನಲ್ಲಿ ಯಾರಿದ್ದರೂ ತಾಯಿಯನ್ನು ಹೋಲರು. "ಬೇವಿನ ಮರ ತಂಪು, ಭೀಮರಥಿ ನದಿ ತಂಪು, ತೌರಿಗೆ ತಾಯಿ ತಂಪು" ಎಂದು ಗರತಿ ತಾಯಿಯನ್ನು ನೆನೆಯುತ್ತಾಳೆ. ಅನ್ನಮಾಚಾರ್ಯರು ತಾಯಿಯ ಪ್ರೀತಿ ವಾತ್ಸಲ್ಯಗಳನ್ನು ಹಲವೆಡೆ ಪ್ರಸ್ತಾವಿಸಿದ್ದಾರೆ. "ತಾಯಿಗೆ ಇಲ್ಲದ ಮುದ್ದು ದಾದಿಗೆ ಇದೆಯೇ"[2] ಎಂಬ ಮಾತು ಸತ್ಯ. ದಾದಿಯರು ಎಷ್ಟೇ ಪ್ರೀತಿ ತೋರಿದರೂ ತಾಯಿ ಸಮಾನ ಆಗುವುದಿಲ್ಲ. ತಾಯಿಗೆ ಬೇಡದ ಮಗು ಮತ್ತಾರಿಗೂ ಬೇಕಾಗುವುದಿಲ್ಲ. ಮಕ್ಕಳು ಏನು ಮಾಡಿದರೂ ಸಹಿಸಿಕೊಂಡು ಸಾಕುವ ತಾಳ್ಮೆ ತಾಯಿತಂದೆಗೆ ಇರುತ್ತದೆ. "ತಾಯಿತಂದೆಯರು ಮಕ್ಕಳೇನೇ ಮಾಡಿದರೂ ಸಹಿಸಿಕೊಂಡು ಮುದ್ದು ಮಾಡುವರು ಲೋಕದಲಿ"[3] ಎಂದಿದ್ದಾರೆ ಅನ್ನಮಯ್ಯ.

ಮಕ್ಕಳ ಪೋಷಣೆ ಕುಟುಂಬದ ಸಾಂಸ್ಕೃತಿಕ ಪ್ರಯೋಜನಗಳಲ್ಲಿ ಒಂದೆಂಬುದನ್ನು ಹಿಂದೆ ಹೇಳಲಾಗಿದೆ. ತಾಯಿ-ತಂದೆ ನೀಡುವ ಪೋಷಣೆಯನ್ನು ಸರಿಯಾದ ರೀತಿಯಲ್ಲಿ ಪಡೆಯುವುದು ಮಕ್ಕಳ ಹೊಣೆ. ಆದರೆ ಕೆಲವರು ವಕ್ರಬುದ್ಧಿಯಿಂದ ಒಳ್ಳೆಯ ಅವಕಾಶವನ್ನು ಕಳೆದುಕೊಳ್ಳುತ್ತಾರೆ. "ಸಾಕುವ ತಾಯಿತಂದೆಗಳು ಪ್ರೀತಿಯಿಂದ ಬಡಿಸಲು, ತಟ್ಟೆಯನ್ನು ಕಾಲಿಂದೊದೆಯುವ ಮಕ್ಕಳು"[4] ಕೂಡ ಇರುತ್ತಾರೆಂದು ಅನ್ನಮಾಚಾರ್ಯರು ಸೂಚಿಸಿದ್ದಾರೆ. ಆದರೆ ಭಾರತೀಯ ಕೌಟುಂಬಿಕ ಜೀವನದಲ್ಲಿ ತಾಯಿಯ ವಾತ್ಸಲ್ಯ ಅದ್ವಿತೀಯವಾದುದು. 'ಕೇಳದೆ ತಾಯಿಯೂ ಉಣಿಸುವುದಿಲ್ಲ' ಎಂಬ ಗಾದೆಯಿದೆ. ಆದರೆ ಅನ್ನಮಾಚಾರ್ಯರು ಹೇಳುವ ಪ್ರಕಾರ "ಹಸಿವಾದರೂ ಕೇಳದ ಶಿಶುವಿಗೆ ತಾಯಿ ಹಾಲುಣಿಸಿದಂತೆ, ಯಾ ಕಡೆಯ ಕೋರಿಕೆ ಅಡಗಿದ ಯೋಗಿಗೆ ಈಶ್ವರನೇ ರಕ್ಷಕ."[5]

---

[1] ಕನ್ನತಲ್ಲಿ ಗೊಡ್ಡನಿ ಪಲ್ಕು ದೇವತಾನಿಂದಕುಲ ದೆಲುಪಂಗ ವಶಮಯ್ಯ
(16, ಭಾಗ 1, ಪು, 58)

[2] ತಲ್ಲಿಕಿಲೇನಿ ಮುದ್ದು ದಾದಿಕಿಗಲದಾ (8-167).

[3] ತಲ್ಲಿದಂಡ್ರುಲು ಬಿಡ್ಡಲೇಮಿ ಸೇಸಿನಾನು, ಓರುಚುಕ ಮುದ್ದು
ಸೇಸುಕೊಂದುರು ಲೋಕಮುನ (8-97).

[4] ಪೆಂಚೇಟಿ ತಲಿದಂಡ್ರುಲು ಪ್ರಿಯಮ್ಮೈ ವಡ್ಡಿಂಚಗಾನು
ಕಂಚಮು ಕಾಲದನ್ನು ಸಂಗತಿ ಯಾ ಬಿಡ್ಡಲಕು (8-20).

[5] ಆಕಟಿಕಡುಗನಿ ಶಿಶುವುಕು ತಲ್ಲಿ
ಅಡಚಿ ಪಾಲು ದ್ರಾಗಿಂಚಿನ ರೀತಿ
ಯಾ ಕಡಗೋರಿಕಲುಡಿಗಿನ ಯೋಗಿಕಿ
ನೀಶ್ವರುಡೇ ರಕ್ಷಕುಡು (5-216).

### ಬಾಂಧವ್ಯ

ಮನುಷ್ಯ ತನ್ನ ಸಾಂಸ್ಕೃತಿಕ ವಿಕಾಸದ ಕಾಲದಲ್ಲಿ ರೂಪಿಸಿಕೊಂಡ ಇನ್ನೊಂದು ವ್ಯವಸ್ಥೆ ಬಾಂಧವ್ಯ. ಸ್ತ್ರೀ ಪುರುಷ ಸಂಬಂಧ ಪ್ರಕೃತಿ ಸಹಜವಾದುದು. ಈ ಸಹಜ ಸಂಬಂಧ ವಿಧಿವಿಹಿತವಾಗಿ ಮದುವೆ ಎಂಬ ವ್ಯವಸ್ಥೆ ರೂಪುಗೊಂಡು ಕುಟುಂಬವೆಂಬ ಪ್ರಮುಖ ಸಂಸ್ಥೆಯಾಗಿ ಪರಿಣಮಿಸುತ್ತದೆ. ಕುಟುಂಬ ವಿವಿಧ ಬಾಂಧವ್ಯಗಳನ್ನು ಒಳಗೊಂಡಿರುತ್ತದೆ. ಸಾಂಸ್ಕೃತಿಕ ಅಧ್ಯಯನ ಮಾಡುವವರಿಗೆ ಬಾಂಧವ್ಯ ಪರಿಶೀಲನೆ ಬಹಳ ಮುಖ್ಯವಾಗುತ್ತದೆ. ಸಾಮಾಜಿಕ ಮಾನವಶಾಸ್ತ್ರಜ್ಞರು ಬಾಂಧವ್ಯ ಪರಿಭಾಷೆಗೆ ತುಂಬ ಪ್ರಾಧಾನ್ಯ ನೀಡುತ್ತಾರೆ. ಕುಟುಂಬದ ಬೇರೆ ಬೇರೆ ಸದಸ್ಯರು ಹೇಗೆ ನಡೆದುಕೊಳ್ಳುತ್ತಾರೆ, ಅವರ ಮದುವೆಯು ಸ್ವರೂಪವೇನು, ಸ್ತ್ರೀಗೆ ಕುಟುಂಬದಲ್ಲಿರುವ ಸ್ಥಾನವೇನು ಎಂಬ ಪ್ರಶ್ನೆಗಳಿಗೆ ಉತ್ತರ ಪಡೆಯಲು ಬಾಂಧವ್ಯದ ಪರಿಶೀಲನೆ ಅಗತ್ಯ. ಉದಾಹರಣೆಗೆ ಕನ್ನಡದಲ್ಲಿ ತಂದೆಯ ಸಹೋದರನನ್ನು ದೊಡ್ಡಪ್ಪ ಅಥವಾ ಚಿಕ್ಕಪ್ಪ ಎಂದು ಕರೆಯುತ್ತೇವೆ. ತೆಲುಗಿನಲ್ಲೂ ಪೆದನಾನ್ನ, ಚಿನ್ನಾನ್ನ ಎಂಬ ಹೆಸರುಗಳಿವೆ. ಇವು ನಮ್ಮ ಸಂಸ್ಕೃತಿಯಲ್ಲಿ ತಂದೆಯ ಸಹೋದರರಿಗಿರುವ ಸ್ಥಾನವನ್ನು ಸೂಚಿಸುತ್ತವೆ. ಸಲಿಂಗ ಸಹೋದರರ ಮತ್ತು ವಿಲಿಂಗ ಸಹೋದರರ ಮಕ್ಕಳನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವುದು ಕೂಡ ನಮ್ಮ ಸಂಸ್ಕೃತಿಗೆ ಸಂಕೇತ. ಅತ್ತೆ, ಸೊಸೆ, ಅತ್ತಿಗೆ, ನಾದಿನಿ, ಭಾವ, ಮೈದುನ ಮುಂತಾದ ಪದಗಳು ಬಾಂಧವ್ಯದ ಸ್ವರೂಪವನ್ನು ತಿಳಿಸುತ್ತವೆ.

ಪುರಂದರದಾಸರ ಕೀರ್ತನೆಗಳಲ್ಲಿ ಬಾಂಧವ್ಯಕ್ಕೆ ಸಂಬಂಧಿಸಿದಂತೆ ನೂರಾರು ಉಲ್ಲೇಖಗಳು ಕಂಡುಬರುತ್ತವೆ. ಅನ್ನಮಾಚಾರ್ಯರ ಕೀರ್ತನೆಗಳಿಗೆ ಹೋಲಿಸಿದಾಗ ಇವು ಬಹಳ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುದನ್ನು ನೋಡುತ್ತೇವೆ. ಅನ್ನಮಯ್ಯ ವೆಂಕಟೇಶ್ವರನಿಗೆ ಸಂಬಂಧಿಸಿದಂತೆ ಶೃಂಗಾರ ಮತ್ತು ಆಧ್ಯಾತ್ಮಿಕ ಕೀರ್ತನೆಗಳನ್ನೇ ಬರೆದಿರುವುದರಿಂದ ವಿವಿಧ ಬಾಂಧವ್ಯಗಳನ್ನು ಕುರಿತು ಹೇಳುವ ಅವಕಾಶ ಕಡಿಮೆ. ಪುರಂದರದಾಸರ ಕೀರ್ತನೆಗಳಲ್ಲಿ ಲೋಕನೀತಿ ಮತ್ತು ಸಾಮಾಜಿಕ ಕಳಕಳಿ ಪ್ರಮುಖವಾಗಿ ಇವೆ. ಶೃಂಗಾರ ಮತ್ತು ಆಧ್ಯಾತ್ಮಿಕ ಕೀರ್ತನೆಗಳು ಮಾತ್ರವಲ್ಲದೆ ಕೃಷ್ಣನ ವೈವಿಧ್ಯಮಯ ಲೀಲೆಗಳು, ಬಾಂಧವ್ಯಗಳು ಮುಂತಾದವನ್ನೂ ಕುರಿತು ಅನೇಕ ಕೀರ್ತನೆಗಳನ್ನು ದಾಸರು ರಚಿಸಿದ್ದಾರೆ. ಬಾಂಧವ್ಯ ಪರಿಭಾಷೆಯ ಪರಿಶೀಲನೆಯೊಂದನ್ನೇ ವಿಸ್ತೃತವಾಗಿ ಅಧ್ಯಯನ ಮಾಡಬಹುದಾದಷ್ಟು ಆಧಾರ ಸಾಮಗ್ರಿ ಪುರಂದರದಾಸರ ಕೀರ್ತನೆಗಳಲ್ಲಿ ದೊರೆಯುತ್ತದೆ.

ಕುಟುಂಬದ ಸದಸ್ಯರಾಗಿರುವ ತಾಯಿ, ತಂದೆ, ಮಕ್ಕಳು, ಸೊಸೆ, ಅಜ್ಜಿ, ಅಜ್ಜ ಮುಂತಾದವರು ಬಾಂಧವ್ಯದ ಒಂದು ಭಾಗವಾದರೆ, ದೂರದಲ್ಲಿರಬಹುದಾದ ಸೋದರಮಾವಂದಿರು, ಸೋದರತ್ತೆಯರು ಮುಂತಾದವರು ಇನ್ನೊಂದು ಭಾಗವಾಗುತ್ತಾರೆ. ಇಷ್ಟು ಜನ ನೆಂಟರಿಷ್ಟರಿದ್ದರೂ "ಶಕ್ತನಾದರೆ ನೆಂಟರೆಲ್ಲ ಹಿತರು, ಅಶಕ್ತನಾದರೆ ಆಪ್ತ ಜನರೆ ವೈರಿಗಳು" (5-154) ಎಂಬ ಸತ್ಯವನ್ನು ಪುರಂದರದಾಸರು ಹೇಳುತ್ತಾರೆ. ಅನ್ನಮಾಚಾರ್ಯರೂ ಒಂದು ಕಡೆ ಬಂಧುಗಳ ವರ್ತನೆಯನ್ನು "ನೆಂಟರು ಈ ರೀತಿ ಇಷ್ಟು ದಿನ

ಎಲ್ಲಿದ್ದರೋ''[1] ಎಂದು ಕೇಳುತ್ತಾರೆ. ಕುಟುಂಬದಲ್ಲಿ ಆತ್ಮೀಯರೆನಿಸಿಕೊಂಡವರೂ ಕೂಡ ಹೇಗೆ ವರ್ತಿಸುತ್ತಾರೆಂಬುದನ್ನು ಇನ್ನೊಂದು ಕಡೆ ಹೇಳುತ್ತಾರೆ : ''ಸುತರು, ಕಾಂತೆಯರು, ಗೆಳತಿಯರು ನೆಂಟರೇ. ಬರಿ ಆಸೆ ಪಡುವವರಷ್ಟೆ; ತಾಯಿತಂದೆಯರು ಬಂಧುಗಳೇ, ವೇದನೆಯುಂಟು ಮಾಡುತ್ತಾ ತಿರುಗುವವರಷ್ಟೆ; ಅಣ್ಣ ತಮ್ಮಂದಿರು ಹಿತರೇ, ಭಾಗಕ್ಕಾಗಿ ಹೆಣಗುವವರಷ್ಟೆ.''[2]

ಬಾಂಧವ್ಯದ ಮೂಲಕ ಸಂಸ್ಕೃತಿ ಹೇಗೆ ವ್ಯಕ್ತವಾಗುತ್ತದೆಂಬುದಕ್ಕೆ ಕೆಲವು ಉದಾಹರಣೆಗಳು ಪುರಂದರದಾಸರಲ್ಲಿ ಸಿಕ್ಕುತ್ತವೆ. ಕೃಷ್ಣಲೀಲೆಯ ನೆಪದಲ್ಲಿ ಸಂಬಂಧಗಳನ್ನು ಸೂಚಿಸುವ ಒಂದು ಕೀರ್ತನೆ ಹೀಗಿದೆ :

ಋತುಮತಿ ಬಿಡು ಬಿಡು ಸೆರಗ ನೀ
ಋತುವಾದರೆ ನಾ ರತಿ ಕೊಡ ಬರುವೆ

ಅಣ್ಣಯ್ಯ ಕೃಷ್ಣ ಬಿಡೊ ಸೆರಗ ನಾ
ಅಣ್ಣನಲ್ಲವೆ ನಿನ್ನ ಅಣ್ಣನ ಭಾವ

ಭಾವಯ್ಯ ಕೃಷ್ಣ ಬಿಡೊ ಸೆರಗ ನಾ
ಭಾವನಲ್ಲವೆ ನಿನ್ನ ಭಾವನ ತಮ್ಮ

ತಮ್ಮಯ್ಯ ಕೃಷ್ಣ ಬಿಡೊ ಸೆರಗ ನಾ
ತಮ್ಮನಲ್ಲವೆ ನಿನ್ನ ತಮ್ಮನ ಬೀಗ

ಬೀಗಯ್ಯ ಕೃಷ್ಣ ಬಿಡೊ ಸೆರಗ ನಾ
ಬೀಗನಲ್ಲವೆ ನಿನ್ನ ಬೀಗನ ಬೀಗ

ಮಾವಯ್ಯ ಕೃಷ್ಣ ಬಿಡೊ ಸೆರಗ ನಾ
ಮಾವನಲ್ಲವೆ ನಿನ್ನ ಮಾವನ ಮಗನು

ಕಂದಯ್ಯ ಕೃಷ್ಣ ಬಿಡೊ ಸೆರಗ ನಾ
ಕಂದನಲ್ಲವೆ ನಿನ್ನ ಕಂದನ ತಂದೆ....

(ಉ.ಪ್ರ., ಭಾಗ 3, ಪು. 52)

---

[1] ಚುಟ್ಟರಿಕಾಲು ಈ ರೀತಿ ನಿನ್ನಾಳ್ಳದಾಕಾ ನೆಂದುಂಡಿರೊ (8-248).

[2] ಚುಟ್ಟಂಬುಲಾ ತನಕು ಸುತುಲುಗಾಂತಲು ಚೆಲುಲು
ವಟ್ಟಿಯಾಸಲ ಬೆಟ್ಟುವಾರೇ ಕಾಕ
ತಗು ಬಂಧುಲಾ ತನಕು ತಲ್ಲುಲುನು ತಂಡ್ರುಲುನು
ವಗಲ ಬೆಟ್ಟುಚು ದಿಗುರುವಾರೇ ಕಾಕ
ಅಂತ ಹಿತುಲಾ ತನಕು ನನ್ನಲುನು ದಮ್ಮುಲನು
ವಂತುವಾಸಿಕಿ ಬೆನುಗುವಾರೇಕಾಕ (ಅಧ್ಯಾ. ಸಂ. 1, ಪು. 120).

ಬಾಂಧವ್ಯವನ್ನು ಯೋಗಸಾಧನೆಗೆ ಅಥವಾ ವೈರಾಗ್ಯಭಾವಕ್ಕೆ ಪ್ರತೀಕವಾಗಿ ಬಳಸಿರುವ ಅನೇಕ ಸಂದರ್ಭಗಳಿವೆ. ಇಂಥ ಮಾರ್ಮಿಕ ಕಾವ್ಯದಲ್ಲಿ ಪ್ರತಿಮೆಗಳನ್ನು ಅರ್ಥಮಾಡಿಕೊಳ್ಳುವುದು ಅನೇಕ ಸಂದರ್ಭಗಳಲ್ಲಿ ಕಷ್ಟ. ಇದು ಹೇಗೇ ಇರಲಿ; ಪ್ರಸ್ತುತ ದಲ್ಲಿ ಲೌಕಿಕವಾಗಿ ಕುಟುಂಬದ ವಿವಿಧ ಸದಸ್ಯರ ಸ್ಥಾನಮಾನಗಳು, ಅವರನ್ನು ಕುರಿತಂತೆ ಸಮಾಜದಲ್ಲಿರುವ ಅಭಿಪ್ರಾಯಗಳು ಮುಂತಾದವು ಈ ಉಲ್ಲೇಖಗಳಿಂದ ತಿಳಿದು ಬರುತ್ತದೆ. "ಆರುಮಂದಿ ಮಕ್ಕಳುಂಟು, ಮತ್ತಾರುಮಂದಿ ಪ್ರೇರಕರುಂಟು, ಪ್ರೇರಕರಿಗೆ ಕರ್ತರುಂಟು" (ಉ.ಪ್ರ., ಭಾಗ 4, ಪು. 8) ಎಂಬ ವಾಕ್ಯಗಳು ತಾತ್ತ್ವಿಕ ಪ್ರತಿಮೆ ಯನ್ನು ವಿಶದಪಡಿಸುತ್ತವೆ. ಇದೇ ಕೀರ್ತನೆಯಲ್ಲಿ "ಅತ್ತೆಯೆಂಬೋಳು ಬಲುಖೋಡಿ, ಎನ್ನೊತ್ತಿ ಆಳುವ ಪುರುಷ ಹೇಡಿ, ಮತ್ತೆ ಮಾವ ಅಡನಾಡಿ, ಸರಹೊತ್ತಿಗೆ ಬಾಹೋನು ಮೈದುನ ಓಡಿ, ನೆಗೆಣ್ಣಿಯೆಂಬೋಳು ಮುಂಗೋಪಿ, ಮಲಮಗಳು ಕಂಡರೆ ಸೇರಳು ಮಹಾಪಾಪಿ, ಹಗೆಗಾರತ್ತಿಗೆ ಬಲುಕೋಪಿ, ಇದರ ಬಗೆ ತಿಳಿಯದ ನಾದಿನಿ ಮಹಾಪಾಪಿ ಎಷ್ಟು ಹೇಳಲಿ ನಿಮಗೆಲ್ಲ, ಈ ಕಷ್ಟ ಸಂಸಾರದೊಳಗಿಷ್ಟು ಸುಖವಿಲ್ಲ" ಎಂದಿದೆ. ಹೀಗೆಯೇ ನೋಡುತ್ತಾ ಹೋದರೆ ಎಷ್ಟೋ ಪಾಪಗಳು ಕಂಡುಬರುತ್ತವೆ. ಅನ್ನಮಾಚಾರ್ಯರು ಒಂದೆಡೆ ಹೀಗೆನ್ನುತ್ತಾರೆ: ಪಾಪಗಳನ್ನು ಎಣಿಸಿನೋಡಿದರೆ ಎಷ್ಟೋ ಇವೆ. ಗಳಿಸ ಬೇಕಾದ ಪದಾರ್ಥಗಳು ಎಷ್ಟೋ ಇವೆ." [1]

ವೈರಾಗ್ಯವುಂಟಾದ ಕಾಲದಲ್ಲಿ ಸಂಸಾರದೊಳಗೆ ಸುಖವಿಲ್ಲವೆಂದು ಇಬ್ಬರು ಕೀರ್ತನ ಕಾರರೂ ಸಾರುತ್ತಾರೆ. ಆದರೆ ಅವಿಭಕ್ತ ಕುಟುಂಬದ ಹಿತ ಎಂಥದೆಂಬುದನ್ನು ಇಬ್ಬರೂ ಬಲ್ಲವರೇ. "ಪಿತಮಾತೆ ಸತಿಸಂತರನಗಲಿರಬೇಡ" (5-33) ಎಂದು ಪುರಂದರದಾಸರು ಹಿತ ನುಡಿಯುತ್ತಾರೆ. ಹಾಗೆ ಅಗಲಲು ಸ್ತ್ರೀಯೇ ಕಾರಣ ಎಂಬುದು ಅವರ ಭಾವನೆ: "ಅತ್ತೆ ಮಾವನ ಕೂಡ ಅತಿ ಮತ್ಸರವಮಾಡಿ ನೆತ್ತಿಗೆ ಮದ್ದನು ಊಡುವಳು" (5-106) ಎಂದು ನಿಂದಿಸುತ್ತಾರೆ. ಅಂಥ ಸತಿಯನ್ನು ಆಜ್ಞೆಯಿಂದ ಆಳಬೇಕೆಂದು ಅವರು ಹೇಳುತ್ತಾರೆ.

ಬಂಧುಗಳ ಜೊತೆ ವರ್ತಿಸಬೇಕಾದ ರೀತಿಯನ್ನು ವಿಶದಪಡಿಸುವಾಗ ದಾಸರು "ನಂಟರಿಗೆ ಸಾಲವನು ಕೊಡುವಾತ ಮೂರ್ಖ"(ಹ.ಕೀ.ತ., ಪು.126-127)ಎನ್ನುತ್ತಾರೆ. ಪಿತೃಸ್ಥಾನೀಯ ಕುಟುಂಬ ಪದ್ಧತಿಗೆ ತಕ್ಕಂತೆ ತಂದೆಯ ಮನೆಯಲ್ಲೇ ಗಂಡಸರಿರಬೇಕೆಂದು ಸೂಚಿಸುತ್ತಾರೆ. ಮಡದಿ ಹುಟ್ಟಿದ ಮನೆಯಲ್ಲಿ ಸೇರಿಕೊಂಡರೆ ಅಲ್ಲಿಯ ಉಪಚಾರ ಹೇಗಿರುತ್ತದೆ ಎಂಬುದನ್ನು ದಾಸರು ಚಿತ್ರಿಸಿದ್ದಾರೆ.

> ಹೆಣ್ಣುಕೊಟ್ಟತ್ತೆಮಾವಂದಿರ ಮನೆಯಲ್ಲಿ
> ಸೇರಿಯಿರುವರೆ ಎಲೆ ಮನುಜ
> ಬಂದ ಮೊದಲು ಇತ್ತಬನ್ನಿ ಕುಳ್ಳಿರೆಂದು ಬಲು ಉಪಚರಿಸುವರು

[1] ವಡಿನೆನ್ನೈನಾಗಲವು ವಾವುಲೆಂಚಿ ಚೂಚುಕೊಂಟೇ
ಗಡಿಯಿಂಚೇ ಪದಾರ್ಥಾಲು ಕಲವೆನ್ನೈನಾ (8-227).

ಅಂದಿನ ಮರುದಿನವೇ ಬಂದ ಸ್ನೇಹಿತರನ್ನ ಕಂಡಂತೆ ಕಾಣುವರೊ
ಬಂದ ಮೂರರಲಿ ಪರದೇಶಿಯ ಕಂಡಂತೆ ಸಡ್ಡೆಮಾಡದೆ ಇಹರೊ ಮುದ
ದಿಂದ ನಾಲ್ಕು ದಿವಸ ಇದ್ದರೆ ಮಾನಭಂಗ ಮಾಡಿ ಮಾತಾಡುವರೊ
ಐದನೆಯ ದಿನದಲಿ ಆಕಳು ಬರಲಿಲ್ಲ ಅರಸಿತರಬೇಕೆಂಬರೊ....

(ಪು. ಸಾ. ದ., ಸಂ, 3, ಪು. 145)

ಮನೆಯಲ್ಲಿ ಬೇರೆ ಬೇರೆ ಸ್ವಭಾವದ ಜನರಿರುತ್ತಾರೆ. ಒಳ್ಳೆಯದು ಬಹಳವಿದ್ದರೂ ಏನಾದರೂ ಸ್ವಲ್ಪ ಕೆಟ್ಟದ್ದಾದರೆ ಥಟ್ಟನೆ ಎಲ್ಲರ ಗಮನಕ್ಕೂ ಬರುತ್ತದೆ. ದೊಡ್ಡ ಕುಟುಂಬಗಳಲ್ಲಿ ಸರಸವಿರಸಗಳು ಸರ್ವೇ ಸಾಮಾನ್ಯ. ಮುಂದಿನ ಕೀರ್ತನೆಯಲ್ಲಿ ವಿರಸವೇ ಪ್ರಧಾನವಾದ ವಿವಿಧ ಬಾಂಧವ್ಯಗಳ ಚಿತ್ರ ಕಾಣುತ್ತದೆ.

ಸುಣ್ಣವಿಲ್ಲ ಭಾಗವತರೆ
ನುಣ್ಣನೆ ಗೋಡೆಗೆ ನೆನ್ನೆ ತೊಡೆದುಬಿಟ್ಟೆ

ವೀಳ್ಯ ಹಾಕುವನಲ್ಲ ಪಾಧಿಷ್ಠ ಗಂಡನು
ಬಾಳು ಸಟೆ ಎನ್ನ ಬಾಯಿ ನೋಡಿ
ಹಾಳು ಮನೆಯಹೊಕ್ಕು ಒಡಲು ಉರಿಯುತಿದೆ
ಹೇಳಿ ಈ ಬದುಕಿನ್ನು ಪ್ರಯೋಜನವೇನು

ಮದ್ದು ತಿಂದು ತಿಂದು ಮನೆಯೆಲ್ಲ ಬರಿದಾಗಿ
ಹೊದ್ದಿತು ಮೂದೇವಿ ಮೈದುನಗೆ
ಮದ್ದಿಕ್ಕೊ ಸಂಚಿಯು ಭಂಗಿ ಮುಕ್ಕಿ ಭಾವ
ಬಿದ್ದುಕೊಳುತಾನೆ ಒಳಗೆ ಕದವ ಮುಚ್ಚಿ

ತೊನ್ನಬಡುಕಮಾವ ಅನ್ಯಕಾರಿ ಅತ್ತೆ
ಗನ್ನ ಘಾತಕಿರಂಡೆ ಅತ್ತಿಗೆಯು
ಎನ್ನಗೋಳು ತಾನೆ ನಾಶವೆಂದಿಗಿಹುದೊ
ಪನ್ನಗಶಯನ ಶ್ರೀ ಪುರಂದರವಿಠಲ (ಉ. ಪ್ರ., ಭಾಗ 2, ಪು. 37)

ಇಂಥ ಕುಟುಂಬದಲ್ಲಿ ಬಾಳಲಾರದ ಹೆಣ್ಣು ತನ್ನ ಗಂಡನಿಗೆ ಈ ಪರಿಹೇಳುತ್ತಾಳೆ : "ತಾಯ ಹೊರಡಿಸು ತಂದೆ ಮೊದಲೆ ದಾಯಾದ್ಯರ ಮಾಯೆಯನು ಬಿಡು, ನಿನಗೆ ಬೇಕಾದರೆ ನ್ಯಾಯದಲಿ ಬೇರೆ ಮನೆಯನು ಕಟ್ಟು....ಅಣ್ಣತಮ್ಮಂದಿರಾ ಹೆಣ್ಣು ಒಡ ಹುಟ್ಟಿದರ ಇನ್ನು ಬಿಡು ನಾ ನಿನಗೆ ಬೇಕಾದರೆ...." (ಉ. ಪ್ರ., ಭಾಗ 2, ಪು. 63).

ಮೇಲಿನ ಕೀರ್ತನೆಯ ಬಾಹ್ಯಸ್ವರೂಪವನ್ನು ನೋಡಿ ಪುರಂದರದಾಸರು ಯಾವಾಗಲೂ ಮನೆಯ ಕೆಟ್ಟ ಸ್ವರೂಪವನ್ನೇ ನಿರೂಪಿಸುತ್ತಾರೆಂದು ಭಾವಿಸಬಾರದು;

ಸಂಸಾರದ ಬಗೆಗೆ ವೈರಾಗ್ಯ ಹೊಂದಿರಬೇಕೆಂಬ ಭಾವನೆಯೇ ಇದಕ್ಕೆ ತಳಹದಿಯಾದರೂ ಇಂಥ ಕೀರ್ತನೆಗಳಲ್ಲಿ ಆಧ್ಯಾತ್ಮಿಕ ಸಾಧನೆಯ ಒಳಪದರಗಳನ್ನು ಗುರುತಿಸಬಹುದು. ಒಂದು ಕೀರ್ತನೆಯಲ್ಲಿ 'ದ್ವಂದ್ವಾರ್ಥಗಳೆಲ್ಲ ಬಿಚ್ಚಲಿ' ಎಂದು ಹೇಳಿ ಕೀರ್ತನೆಗಳ ಗೂಢಾರ್ಥವನ್ನು ದಾಸರು ಸೂಚಿಸಿದ್ದಾರೆ : "ಮನೆಯ ಗಂಡ ಮಾಯವಾಗಲಿ, ಉಣ ಬಂದ ಮೈದುನ ಒರಗಲಿ, ಘನ ಅತ್ತಿಗೆ ನಾದಿನಿ ಸಾಯಲಿ, ನೆರೆಮನೆ ಹಾಳಾಗಿ ಹೋಗಲೋ ಹರಿಯೆ, ಅತ್ತೆಯ ಕಣ್ಣೆರಡು ಇಂಗಲಿ, ಮಾವನ ಕಾಲೆರಡು ಮುರಿಯಲಿ, ಹಿತ್ತಲ ಗೋಡೆಯು ಬೀಳಲಿ, ಕಾಡಕತ್ತಲೆಯಾದರೂ ಕವಿಯಲಿ ಕಂದನ ಕಣ್ಣೆರಡು ಮುಚ್ಚಲಿ, ಚಂದವಾದ ಹಾವು ಕಚ್ಚಲಿ, ದ್ವಂದ್ವಾರ್ಥಗಳೆಲ್ಲ ಬಿಚ್ಚಲಿ" (ಉ. ಪ್ರ. ಭಾಗ 3, ಪು. 8).

ಹಿಂದೂ ಪುರಾಣಗಳಲ್ಲಿರುವ ಬಾಂಧವ್ಯಗಳನ್ನು ಪರಿಶೀಲಿಸಿದರೆ ಅವುಗಳ ವೈವಿಧ್ಯ ನಮ್ಮನ್ನು ಬೆರಗುಗೊಳಿಸುತ್ತದೆ. ಒಬ್ಬನೇ ದೇವತೆ ಇನ್ನೊಬ್ಬ ದೇವತೆಯೊಂದಿಗೆ ಪಡೆದಿರುವ ಸಂಬಂಧ ಎಲ್ಲ ರೀತಿಯ ಬಾಂಧವ್ಯಗಳಿಗೂ ನಿದರ್ಶನವಾಗಿರುತ್ತದೆ. ಇಂಥ ಬಾಂಧವ್ಯಗಳನ್ನು ನಿಜ ಜೀವನದಲ್ಲಿ ಕಾಣಲು ಶಕ್ಯವಿಲ್ಲ. ಕುತೂಹಲಕಾರಿಯಾಗಿರುವ ಈ ಬಾಂಧವ್ಯಗಳನ್ನು ಪುರಂದರದಾಸರು ಅಲ್ಲಲ್ಲಿ ನಿರೂಪಿಸಿದ್ದಾರೆ. ವಿಷ್ಣುವಿಗೂ ಇಂದ್ರನಿಗೂ ಇರುವ ಸಂಬಂಧ, ಇಂದ್ರನ ಮಗನಾದ ಅರ್ಜುನನಿಗೂ ಕೃಷ್ಣನಿಗೂ ಇರುವ ಸಂಬಂಧ, ಸಮುದ್ರಕ್ಕೂ ವಿಷ್ಣುವಿಗೂ ಇರುವ ಸಂಬಂಧ, ಬ್ರಹ್ಮ ವಿಷ್ಣು ಸಂಬಂಧ, ರಾಧಾ ಮಾಧವ ಸಂಬಂಧ ಮುಂತಾದವನ್ನು ಪರಿಶೀಲಿಸುತ್ತಾ ಹೋದರೆ ಗೊಂದಲ ಉಂಟಾಗುತ್ತದೆ. ರಂಗನನ್ನು ಕುರಿತು ದಾಸರು ಹೀಗೆನ್ನುತ್ತಾರೆ :

ತಮ್ಮಗೆ ನೀ ಮತ್ತೆ ತಮ್ಮನಾದೆಯೊ ರಂಗ
ಬೊಮ್ಮಗೆ ನೀ ಪರಬೊಮ್ಮನಾಗಿ
ಹೆಮ್ಮಗನ ಮಗನ ಮೊಮ್ಮಗನಾದೆಯೊ ರಂಗ
ಮುಮ್ಮಗನ ಮಗಳ ನೀ ಮದುವ್ಯಾದ್ಯೋ ರಂಗ

ಮಾವನಿಗೆ ನೀ ಮತ್ತೆ ಮಾವನಾದೆಯೋ ರಂಗ
ಮಾವನ ಮಗಳ ನೀ ಮದುವ್ಯಾಗಿ
ಭಾವಗೆ ನೀ ಮತ್ತೆ ಭಾವನಾದೆಯೋ ರಂಗ
ಭಾವಜ ಸಖನಿಗೆ ಭಾವನಾದ್ಯೋ

ಅತ್ತೆಯ ಅರ್ಥಿಲಿ ಆಳಿದೆಯೋ ರಂಗ
ಅತ್ತೆಯ ಮಗಳ ನೀ ಮದುವ್ಯಾಗಿ.... (ಹ. ಕೀ. ತ., ಪು. 246)

ಭಾವಜನ ಅಯ್ಯನಾದ ವಿಷ್ಣು ಮಾವನಳಿಯ, ಭಾವತನಯ, ಮಾವನ ಮಡದಿಯ ಮಗಳ ಸೊಸೆಯಗಂಡ, ಅತ್ತಿಗೆಗೆ ಮೈದುನ, ಅತ್ತಿಗೆಯ ಮಗಳಗಂಡ, ಮತ್ತೆ ಮೇಲೆ ಅತ್ತಿಗೆಯ ಪುತ್ರಿಯ ಮುದ್ದಾಡುವವನೆಂದು ಚಮತ್ಕಾರದಿಂದ ಶ್ರೀಕೃಷ್ಣನ ಬಾಂಧವ್ಯ

ಗಳನ್ನು ನಿರೂಪಿಸುವ ಸಂದರ್ಭಗಳನ್ನೂ ಪುರಂದರದಾಸರ ಕೀರ್ತನೆಗಳಲ್ಲಿ ನೋಡಬಹುದು (4-85).

ಬಾಂಧವ್ಯವನ್ನು ಕುರಿತು ಹೇಳುವಾಗ ಭಾರತೀಯ ಕುಟುಂಬ ಜೀವನದಲ್ಲಿ ಅತ್ತೆ ಮತ್ತು ಸೊಸೆಗಿರುವ ಬಾಂಧವ್ಯವನ್ನು ಪ್ರತ್ಯೇಕವಾಗಿ ಪರಿಶೀಲಿಸಬೇಕು. ಪಿತೃಸ್ಥಾನೀಯ ಕುಟುಂಬದಲ್ಲಿ ಅತ್ತೆಸೊಸೆ ಒಟ್ಟಿಗೆ ಬಾಳಬೇಕಾದ ಪರಿಸ್ಥಿತಿ ಒದಗುತ್ತದೆ. ಭಾರತೀಯ ಸಮಾಜದಲ್ಲಿ ಸ್ತ್ರೀಗೆ ನೀಡಿರುವ ಸ್ಥಾನದ ದೃಷ್ಟಿಯಿಂದ ಅತ್ತೆ ಸೊಸೆಯನ್ನು ಕೀಳಾಗಿ ಕಾಣುವುದು ಸಹಜವೇ. ಇದನ್ನು ಒಂದು ಸಾಮಾಜಿಕ ಸಮಸ್ಯೆ ಎನ್ನುವುದಕ್ಕಿಂತ ಮನೋವೈಜ್ಞಾನಿಕ ಸಮಸ್ಯೆ ಎನ್ನಬಹುದು. ತನ್ನ ಮೇಲಿನ ಪ್ರೀತಿಯಿಂದ ಮಗನನ್ನು ಕಸಿದು ಕೊಂಡ ಸೊಸೆಯ ಬಗೆಗೆ ಅತ್ತೆಗೆ ಅನುಮಾನ, ದ್ವೇಷ, ಅಸೂಯೆ ಇರುತ್ತದೆಂದು ಕಾಣುತ್ತದೆ. ಅತ್ತೆಸೊಸೆಯರ ನಡುವಿನ ವಿರಸವನ್ನು ಪುರಂದರದಾಸರು ಮತ್ತು ಅನ್ನಮಾಚಾರ್ಯರು ಹಲವೆಡೆಗಳಲ್ಲಿ ಉಲ್ಲೇಖಿಸಿದ್ದಾರೆ. ಅತ್ತೆಸತ್ತರೂ ಸೊಸೆ ಅಳುವುದಿಲ್ಲ ಎನ್ನುವಷ್ಟರ ಮಟ್ಟಿಗೆ ಈ ವೈಮನಸ್ಯ ಚಿತ್ರಿತವಾಗಿದೆ.

ಕಣ್ಣಲ್ಲಿ ನೀರಿಲ್ಲ ಮನದಲ್ಲಿ ಕರಗಿಲ್ಲ
ಅತ್ತೆ ಸತ್ತರೆ ಸೊಸೆ ಅಳುವಂತೆ

ಅತ್ತೆ ಅತ್ತೆ ಎಂತೆಂದು ನಾನತ್ತೆ
ಅತ್ತೆ ಸತ್ತರೆ ಎದೆ ಎರಡು ಪರಿಯಾಯಿತೆಂದು
ಅತ್ತೆ ಅತ್ತೆ ಎಂದು ಅತ್ತೆ ಪುರಂದರವಿಠಲ.... (6-74)

''ಅತ್ತೆಯಿಲ್ಲದ ಸೊಸೆ ಉತ್ತಮಳು'' ಎಂಬುದು ತೆಲುಗಿನ ಪ್ರಸಿದ್ಧ ಗಾದೆ. ''ಬಾರೇ ಸೊಸೆ ರಚ್ಚೆ ಮಾಡುವ ಸೊಸೆ'' ಎಂದು ಅತ್ತೆ ಕರೆದರೆ ''ಹೋಗೇ ಹೋಗೇ ಅತ್ತಯ್ಯ'' ಎಂದು ಸೊಸೆ ಉತ್ತರಿಸುವ ಜನಪದ ಗೀತೆಯನ್ನು ಅನ್ನಮಾಚಾರ್ಯರು ಒಂದು ಕೀರ್ತನೆಯಲ್ಲಿ ಅಳವಡಿಸಿಕೊಂಡಿದ್ದಾರೆ. [1]

ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಬೇರೆ ರೀತಿಯ ಬಾಂಧವ್ಯಗಳ ಉಲ್ಲೇಖವನ್ನೂ ಅಲ್ಲಲ್ಲಿ ನೋಡುತ್ತೇವೆ. ಆಧ್ಯಾತ್ಮಿಕ ಚಿಂತನೆಯೇ ಪ್ರಧಾನವಾದುದರಿಂದ, ಬಾಂಧವ್ಯವನ್ನು ಕುರಿತ ಕೆಲವು ಕೀರ್ತನೆಗಳು ಕೂಡ ಭಗವಂತನ ಪರವಾಗಿರುತ್ತವೆ. ಆದರೆ ಕೆಲವು ಕೀರ್ತನೆಗಳಲ್ಲಿ ಆಂಧ್ರರ 'ಮೇನರಿಕಂ' ಸಂಬಂಧದ ಸೂಚನೆಗಳು ಎದ್ದು ಕಾಣುತ್ತವೆ. ಅಕ್ಕನ ಗಂಡನಾದರೂ ಸೋದರಮಾವನ ಅಥವಾ ಸೋದರತ್ತೆಯ ಮಗನಾದರೂ ಸರಸವಾಡತಕ್ಕ ಭಾವನಾಗಿರುತ್ತಾನೆ. ಭಾವನನ್ನು ಗೇಲಿಮಾಡುವ ಸ್ವಾತಂತ್ರ್ಯ ತರುಣಿಯರಿಗಿರುತ್ತದೆ.'' ನಮ್ಮ ಭಾವ ಜಾಣ, ನನಗೆ ಕೋಪ ಬರುತ್ತದೆ, ನಾನು ಸಹಿಸು

---

[1] ರಾವೇ ಕೋಡಲ ರಟ್ಟಡಿ ಕೋಡಲ
ಪೋವೇ ಪೋವೇ ಅತ್ತಯ್ಯ.... (ಅನ್ನ. ಸಂ. ಭಾಗ 2, ಪು. 44).

ವುದಿಲ್ಲವೆಂದು ನಾನೇನಾದರು ಹೇಳಿದರೆ ಗಲಾಟೆ ಮಾಡುತ್ತಾರೆ''[1] ಎಂದು ಭಾವನ ಬಗೆಗೆ ನಾದಿನಿ ಹೇಳುವುದನ್ನು ಅನ್ನಮಾಚಾರ್ಯರು ವರ್ಣಿಸಿದ್ದಾರೆ. ನೆನಪು ಬಂದೆಡೆಯಲ್ಲೆಲ್ಲ ವಿಲಿಂಗ ಸಹೋದರರ ಮಕ್ಕಳನ್ನು ಪ್ರಿಯ ಎಂದೇ ನಿರೂಪಿಸಿದ್ದಾರೆ ಅನ್ನಮಯ್ಯ.[2] ಪೌರಾಣಿಕ ಪ್ರಖ್ಯಾತಿ ಪಡೆದಿರುವ ಕೆಲವು ಸಂಬಂಧಗಳನ್ನು ಮೇಲೆ ಹೇಳಿದಂತೆ ವಿಲಿಂಗ ಸಹೋದರರ ಸಂಬಂಧವಾಗಿ ಪರಿವರ್ತಿಸಿರುವ ಸಂದರ್ಭಗಳೂ ಇವೆ. ಅನ್ನಮಾಚಾರ್ಯರ ಅಭಿಪ್ರಾಯದಂತೆ ಕೃಷ್ಣ ಕುಂತಿಯ ಸೋದರಳಿಯ.[3]

ಅಲಮೇಲುಮಂಗಾದೇವಿಯ ಜೊತೆ ವೇಂಕಟೇಶ್ವರನ ಸಂಬಂಧವನ್ನು ಕೂಡ ಅನೇಕ ಸಂದರ್ಭಗಳಲ್ಲಿ ವಿಲಿಂಗ ಸಹೋದರ ಸಂತಾನ ಸಂಬಂಧದಂತೆ ನಿರೂಪಿಸಿರುವುದನ್ನು ನೋಡುತ್ತೇವೆ (12-284, 13-177, 13-202). ''ಕೃಷ್ಣ ಯಾದವ ಸ್ತ್ರೀಯರಿಗೆಲ್ಲ ಮೈದುನ ತಾನಾದ, ಎಲ್ಲರೂ ಇಂಥವರೇ, ಇವರಿಗೆಂಥ ಸಂಬಂಧವೋ.''[3]

ಇವರಿಬ್ಬರ ಕೀರ್ತನೆಗಳಲ್ಲಿ ಕಂಡುಬರುವ ಉಲ್ಲೇಖಗಳನ್ನು ಪರಿಶೀಲಿಸಿದಾಗ ಒಂದು ವಿಷಯ ನಮ್ಮ ಗಮನಕ್ಕೆ ಬರುತ್ತದೆ. ಪುರಂದರದಾಸರ ಬಾಂಧವ್ಯ ವರ್ಣನೆಗಳು ಕುಟುಂಬದ ವೈವಿಧ್ಯವನ್ನೂ ವಿವಿಧ ಸಂಬಂಧಗಳನ್ನೂ ಚಿತ್ರಿಸುತ್ತವೆ. ಕೆಲವು ಕಡೆ ಆಧ್ಯಾತ್ಮಿಕ ವಿಷಯಗಳನ್ನು ಮಾರ್ಮಿಕವಾಗಿ ಹೇಳಲು ಕೂಡ ಬಾಂಧವ್ಯ ಪರಿಭಾಷೆಯನ್ನು ದಾಸರು ಬಳಸಿದ್ದಾರೆ. ಅನ್ನಮಾಚಾರ್ಯರು ವೇಂಕಟೇಶ್ವರನ ವರ್ಣನೆಯ ನೇಪಥ್ಯವನ್ನೇ ಇಟ್ಟುಕೊಂಡು ಬಾಂಧವ್ಯದ ವಿವರಣೆಗಳನ್ನು ನೀಡಿದ್ದಾರೆ.

## ವೇಶ್ಯಾಪದ್ಧತಿ

ವಿವಾಹ, ಕುಟುಂಬ ಮತ್ತು ಬಾಂಧವ್ಯಗಳಿಗೆ ಪರೋಕ್ಷ ಸಂಬಂಧವಿರುವ ಸಾಮಾಜಿಕ ಪದ್ಧತಿಗಳಲ್ಲಿ ವೇಶ್ಯಾಪದ್ಧತಿಯೂ ಒಂದು. ಪ್ರಪಂಚದ ಎಲ್ಲ ಕಡೆಯೂ ಇದು ಯಾವುದಾದರೊಂದು ರೂಪದಲ್ಲಿ ಕಾಣಿಸಿಕೊಳ್ಳುತ್ತಿರುತ್ತದೆ. ಪ್ರಾಚೀನ ಭಾರತದ ಸ್ಮೃತಿಗಳಲ್ಲಿ ಇದರ ಉಲ್ಲೇಖವಿದೆ. ಗೌತಮ, ಮನು, ನಾರದ ಮುಂತಾದವರು ವೇಶ್ಯಾಪದ್ಧತಿಯನ್ನು ಕುರಿತು ಸೂಚನಾಪ್ರಾಯವಾಗಿ ತಿಳಿಸಿದ್ದಾರೆ.

ಭಾರತದ ಲೌಕಿಕ ಪದ್ಧತಿಗಳಲ್ಲಿ ಅನೇಕವು ಧಾರ್ಮಿಕ ಹಿನ್ನೆಲೆಯಿಂದಲೇ ಮೂಡಿಬಂದಂಥವು. ಸಂಗೀತ, ಸಾಹಿತ್ಯ, ಚಿತ್ರಕಲೆ, ನಾಟ್ಯ ಮುಂತಾದ ಯಾವುದೇ ಪ್ರಕಾರವನ್ನು ತೆಗೆದುಕೊಂಡರೂ ಅವು ಈ ಹಿನ್ನೆಲೆಯಿಂದ ಮುಕ್ತವಾಗಿಲ್ಲ ಎಂಬುದು ಸ್ಪಷ್ಟ. ವೇಶ್ಯಾ

---

[1] ಬಾಪು ಬಾಪು ಜಾಣಗದೇ ಬಾವಗಾರು
ಕೋಪಗಿಂಚೇ ನೋಪನಂಟೇ ಗೋಲ ಬಾವಗಾರು (8-16).

[2] ಮೇಟಿಯೈನ ಗೊಂತಿದೇವಿ ಮೇನಲ್ಲುಡಿತಡು.
ಕೋಟಿಕಿ ಬಡಗಗಾನು ಕೊಂಡಯೆತ್ತೆನು (10-6).

[3] ಮಂದಗೊಲ್ಲೆತಲಕೆಲ್ಲ ಮರಿದಿದಾನ್ನೆನಾಡು
ಯಿಂದರು ನಿಂದರೇ ವೀರಿಕೆನ್ನಟಿ ಸಂಬಂಧಮೋ (7-275).

ಪದ್ಧತಿಗೆ ಮೂಲವಾಗಲ್ಲದಿದ್ದರೂ ಅನುಬಂಧವಾಗಿ ದೇವದಾಸಿಪದ್ಧತಿ ಮೂಡಿಬಂದಿರು ವುದನ್ನು ನೋಡುತ್ತೇವೆ. ದೇವರ ಸೇವೆಗೆ ಮೀಸಲಾದ ಸ್ತ್ರೀಯರು ಗೀತ ನೃತ್ಯಗಳ ಮೂಲಕ ದೇವರನ್ನು ರಂಜಿಸುವುದು ಮಾತ್ರವಲ್ಲದೆ ದೇವರ ಭಕ್ತರನ್ನೂ ರಂಜಿಸಬೇಕಾಗಿ ಬಂತು. ಈ ರೀತಿ ದೇವದಾಸಿಯರು ವೇಶ್ಯೆಯರ ಮಟ್ಟಕ್ಕೆ ಇಳಿದುದು ಧರ್ಮಭ್ರಷ್ಟತೆಗೆ ಒಂದು ಉದಾಹರಣೆ ಎನ್ನಬೇಕು. ದೇವರ ಪೂಜಾ ಸಮಯದಲ್ಲಿ ನೃತ್ಯಮಾಡಿ ಅನಂತರ ವೇಶ್ಯಾವೃತ್ತಿಯಲ್ಲಿ ತೊಡಗಿದ್ದ ವಿಜಯನಗರ ಕಾಲದ ದೇವದಾಸಿಯರ ಬಗೆಗೆ ಪಾಯೇಸನು ಬರೆದಿದ್ದಾನೆ.[1] ಅವರ ಬಗೆಗೆ ಜನರು ಗೌರವ ತೋರಿಸುತ್ತಿದ್ದರೆಂದೂ ಕೂಡ ಅವನೇ ಹೇಳಿದ್ದಾನೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ದೇವದಾಸಿಯರು ರಾಜಕೀಯದಲ್ಲೂ ಪಾಲುಗೊಳ್ಳುತ್ತಿದ್ದರೆಂಬ ವಿಚಾರ ವಿದೇಶೀಯರ ಬರೆಹಗಳಿಂದ ತಿಳಿಯುತ್ತದೆ. ದೇವದಾಸಿಯರ ಬಗೆಗಿನ ಉಲ್ಲೇಖಗಳು ಕನ್ನಡ ಸಾಹಿತ್ಯದಲ್ಲೂ ತೆಲುಗು ಸಾಹಿತ್ಯದಲ್ಲೂ ಸಾಕಷ್ಟಿವೆ.

ದೇವದಾಸಿ ಪದ್ಧತಿ ಕರ್ನಾಟಕದಲ್ಲಿ ಜೋಗತಿ ಸಂಪ್ರದಾಯವೆಂಬ ನಿರ್ದಿಷ್ಟ ವ್ಯವಸ್ಥೆಯಾಗಿ ರೂಪುಗೊಂಡಿದೆ. ಎಲ್ಲಮ್ಮನ ಹೆಸರಿನಲ್ಲಿ ಜೋಗತಿ ಬಿಡುವ ಸಂಪ್ರದಾಯ ಉತ್ತರ ಕರ್ನಾಟಕದ ಅನೇಕ ಭಾಗಗಳಲ್ಲಿ ಕಂಡುಬರುತ್ತದೆ. ಎಲ್ಲಮ್ಮನ ಜೋಗತಿ ಸಂಪ್ರದಾಯ ಪುರಂದರದಾಸರ ಕಾಲಕ್ಕೇ ಪ್ರಖ್ಯಾತವಾಗಿತ್ತು ಎಂಬುದಕ್ಕೆ ಹಿಂದೆ ಉಲ್ಲೇಖಿಸಿದ ಕೀರ್ತನೆ (ಪು. 49) ಸಾಕ್ಷಿಯಾಗಿದೆ. ಇದೇ ಸಂಪ್ರದಾಯ ಆಂಧ್ರದ ಹಲವು ಕಡೆಗಳಲ್ಲಿ ಇಂದಿಗೂ ಜೀವಂತವಾಗಿದೆ. ದೇವರಿಗಾಗಿ ಮನೆಯಲ್ಲಿ ಒಬ್ಬರನ್ನು ಬಸವಿಯಾಗಿ ಬಿಡುವ ಈ ಸಂಪ್ರದಾಯ ವೇಶ್ಯಾಪದ್ಧತಿಗೆ ಪೋಷಕವಾಗಿದೆ. ಅನ್ನಮಾ ಚಾರ್ಯರು ಒಂದೆಡೆ ದೇವರ ವೇಶ್ಯೆ (ದೇವುಲಸಾನಿ) ಬಗೆಗೆ ಹೇಳಿದ್ದಾರೆ.[2]

ಪ್ರಾಚೀನ ಸಾಹಿತ್ಯದಲ್ಲಿ ವೇಶ್ಯೆಯರ ವರ್ಣನೆಗಳಿಗೆ ಮಿತಿಯೇ ಇಲ್ಲ. ವೇಶ್ಯೆಯರ ಬಗೆಗೆ ಗೌರವ ಭಾವವಿತ್ತು ಎಂದಿರುವ ವಿದೇಶೀಯರ ಬರೆಹಗಳಿಗೂ ನಮ್ಮ ಕವಿಗಳು ನೀಡಿರುವ ವೇಶ್ಯಾಜೀವನ ಚಿತ್ರಣಗಳಿಗೂ ವ್ಯತ್ಯಾಸ ಕಂಡುಬರುತ್ತದೆ. ಸೂಳೆ, ಬೆಲೆವೆಣ್ಣು, ಗಣಿಕೆ, ಜಾರೆ ಎಂಬುದಾಗಿ ನಮ್ಮ ಕವಿಗಳು ಬಳಸಿರುವ ಪದಗಳು, ಅವರ ವರ್ಣನೆಗಳು ಸಮಾಜದಲ್ಲಿ ವೇಶ್ಯೆಯರಿಗೆ ಗೌರವಸ್ಥಾನವಿರಲಿಲ್ಲವೆಂಬುದನ್ನು ಸಾರುತ್ತವೆ. ಪುರಂದರ ದಾಸರು ಮತ್ತು ಅನ್ನಮಾಚಾರ್ಯರು ನೀಡಿರುವ ಚಿತ್ರಣದಲ್ಲೂ ವ್ಯತ್ಯಾಸವಿದೆ. ಆದರೆ ವೇಶ್ಯೆಯರನ್ನು ಕೆಲವರು ಕೊಂಡಾಡುತ್ತಿದ್ದರೆಂಬುದಕ್ಕೆ ಪುರಂದರದಾಸರ ಕೀರ್ತನೆ ಸಾಕ್ಷ್ಯನೀಡುತ್ತದೆ : "ಸ್ಥಿರವಾದ ಪತಿವ್ರತೆಯ ಪರರು ನಿಂದಿಪ ಕಾಲ, ಧರೆಗೆ ಜಾರೆಯಳ ಕೊಂಡಾಡುವ ಕಾಲ" (ಉ. ಪ್ರ., ಭಾಗ 1, ಪು. 65). ವೇಶ್ಯೆಯರನ್ನು

---

[1] ಪ್ರವಾಸಿಕಂಡ ಇಂಡಿಯ, ಭಾಗ 2, ಪು. 360.

[2] ದಂಡಿಕೋಡ ನೂಡಿಗಪುದಾನನಯ್ಯೆನಂಟೇನೇಲ
ಚಂಡಿವೋರಿ ನೀ ದೇವುಲಸಾನಿ ಜೇಸೇವಯ್ಯ (17-504).

ಹಂಡುಕಿಕೊಂಡು ಹೋಗುವವರನ್ನೂ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಪುರಂದರದಾಸರು ತಿರುಪತಿ ವೇಂಕಟನಿಗೂ ಮಿಂಡ ಎಂಬ ಬಿರುದನ್ನು ಹಚ್ಚಿದ್ದಾರೆ.[1]

ವ್ಯಭಿಚರಿಸಿದ ಗಂಡಸರನ್ನೂ ಹೆಂಗಸರನ್ನೂ ದಾಸರು ಸಮಾನವಾಗಿ ನಿಂದಿಸು ತ್ತಾರೆ. ಧಾರ್ಮಿಕ ಮನೋವೃತ್ತಿಗೂ ವ್ಯಭಿಚಾರಕ್ಕೂ ಇರುವ ಅಂತರವನ್ನು ಪರಿಣಾಮ ಕಾರಿಯಾಗಿ ಹೇಳಿದ್ದಾರೆ :

ಸೂಳೆಯಗಾರನಿಗೆ ತುಳಸಿಮಾಲೆಯು ಶೃಂಗಾರವೇಕೊ
ಶ್ರೀಲೋಲನ ನೆನೆಯದ ಬಾಳುವೆಯೇತಕೊ (2-100)

ಉತ್ತಮ ಸ್ತ್ರೀಯನ್ನು ಬಿಟ್ಟು ಜಾರೆಯ ಸಹವಾಸ ಮಾಡಿದವನನ್ನೂ ಗಂಡನನ್ನು ಬಿಟ್ಟು ಮಿಂಡನನ್ನು ಕೂಡಿದ ಹೆಂಗಸರನ್ನೂ ಸಮಾನವಾಗಿ ತಿರಸ್ಕರಿಸಿದ್ದಾರೆ ಪುರಂದರದಾಸರು.[2]

ಇಂಥವೇ ಭಾವಗಳನ್ನು ಅನ್ನಮಾಚಾರ್ಯರೂ ವ್ಯಕ್ತಪಡಿಸಿದ್ದಾರೆ. "ಮದುವೆ ಯಾದ ಹೆಂಡತಿ ಸಮೀಪದಲ್ಲೇ ಇರಲು, ಬೇಸರಪಡದೆ ಬೆಲೆವೆಣ್ಣ ಹುಡುಕಿದಂತೆ"[3] ಎನ್ನುತ್ತಾರೆ. ಯಾದವ ಕಾಂತೆಯರನ್ನು ರಮಿಸುವ ಸೂಳೆಗಾರನೆಂದು ದೇವರನ್ನು ನಿಂದಿಸುವುದಕ್ಕೂ ಅವರು ಹಿಂಜರಿಯುವುದಿಲ್ಲ.[4]

ಎಲ್ಲಮ್ಮ ಜೋಗತಿಯರ ಸಂಪ್ರದಾಯದಂತೆ ಆಂಧ್ರದಲ್ಲೂ ಕೆಲವು ಧಾರ್ಮಿಕ ಸಂಪ್ರದಾಯಗಳಿವೆ. ಇಂಥ ಪದ್ಧತಿಗಳನ್ನು ನೋಡಿ ಬೇಸರಪಟ್ಟುಕೊಂಡೋ ಏನೋ ಒಂದು ಕಡೆ ಅನ್ನಮಾಚಾರ್ಯರು ಹೀಗೆಂದಿದ್ದಾರೆ: ಅಯ್ಯೋ, ದೇವರು ಇಷ್ಟರಲ್ಲೇ ಇಷ್ಟೆಲ್ಲಾ ಮಾಡಿದ ಸಂತೆಯ ಸೂಳೆಯ ತಂದು ಸನ್ಯಾಸಿಯಾಗಿ ಮಾಡಿದ."[5] ವ್ಯಭಿಚಾರ

---

[1] ಎಲ್ಲಾ ದೇವರ ಗಂಡ ಅವ ಚಿಲ್ಲರೆ ದೈವದ ಮಿಂಡ
ಬಲ್ಲಿದರಿಗೆ ಉದ್ದಂಡ (ಉ. ಪ್ರ. ಭಾಗ 1, ಪು. 27).

[2] ಉತ್ತಮ ಸ್ತ್ರೀಯಳ ಬಿಟ್ಟು ತನ್ನ
ವೃತ್ತಿಗಳೆಲ್ಲ ಸೂಳೆಗೆಕೊಟ್ಟು
ಮತ್ತರೊಳಗೆ ಕೂಡಿಕೆಟ್ಟು....
ಗಂಡನ್ನ ತಾ ಬಿಡುತಿಹಳು ಪರ
ಮಿಂಡನ್ನ ಕೂಡಿ ಲೋಲಾಡುತಿಹಳು
ಮುಂಡೇರು ಹೆಚ್ಚು ಜಗದೊಳು....(ಉ. ಪ್ರ., ಭಾಗ 1, ಪು. 64).

[3] ಚೇಸುಕೊನ್ನಯಿಲ್ಲಾಲು ಚೇರುವನೇ ವುಂಡಗಾನು
ವೇಸರಕ ವೆಲಯಾಲಿ ವೆತಕಿನಟ್ಲು (ಅಧ್ಯಾ., ಸಂ., ಭಾಗ 2, ಪು. 71).

[4] ಲಂಪುಗುಬ್ಬಗೊಲ್ಲೆತಲ ಲಂಜಕಾಡ ನೀ
ಯಿಂಪುಲೇ ವೆದಕಂಬಟ್ಟೇ ನೆಟ್ಲರಾವೋರಿ (4-127).

[5] ಇಂತ ಸೇಸೆಬೊ ದೈವಮಿಂತಲೋನನೇ ಅಯ್ಯೋ
ಸಂತ ಪಾಕಲಂಜದೆಚ್ಚಿ ಸಂನ್ಯಾಸಿಜೇಸೆ (ಅಧ್ಯಾ. ಸಂ., ಭಾಗ 1, ಪು. 188).

ವೆಂಬುದು ವೇಶ್ಯೆಯರ ಜೊತೆಯಲ್ಲೇ ಆಗಬೇಕಾಗಿಲ್ಲ. ಮಾನಸಿಕ ವ್ಯಭಿಚಾರಿ ವೇಶ್ಯಾ ಲೋಲನಿಗಿಂತಲೂ ಕೆಟ್ಟವನು ಎಂಬುದು ಜ್ಞಾನಿಗಳ ಅಭಿಪ್ರಾಯ. ಇಂಥ ಅಭಿಪ್ರಾಯ ವನ್ನೇ ಅನ್ನಮಾಚಾರ್ಯರು ತಮ್ಮ ಆಧ್ಯಾತ್ಮಿಕ ಸಂಕೀರ್ತನೆಗಳಲ್ಲಿ ವ್ಯಕ್ತಪಡಿಸಿದ್ದಾರೆ: "ಬ್ರಹ್ಮಚರ್ಯ ಎಲ್ಲಿಂದ ಸಿದ್ಧಿಸುವುದು? ಎದುರಿನಲ್ಲಿ ಕಾಂತೆಯರನ್ನು ನೋಡಿದಾಗ ಮನೋವ್ಯಭಿಚಾರದಿಂದ ಅದು ಚಲಿಸುತ್ತದೆ."[1]

**ಜಾತಿ ಪದ್ಧತಿ**

ಕನ್ನಡ ನಾಡಿನಲ್ಲಿ ಸಾಮಾಜಿಕ ಕ್ರಾಂತಿಗೆ ವಚನಕಾರರು ನಾಂದಿಗೀತೆ ಹಾಡಿದರು. ಅದು ಹರಿದಾಸ ಸಾಹಿತ್ಯದಲ್ಲೂ ತಕ್ಕಮಟ್ಟಿಗೆ ಕಾಣಿಸಿಕೊಂಡು ಜಾತ್ಯತೀತ ಸಮಾಜದೆಡೆಗೆ ಭಕ್ತರನ್ನು ಕರೆದೊಯ್ದಿದೆ. "ಕುಲದ ಮೇಲೆ ಹೋಗಬೇಡ ಮನುಜ, ಕುಲವಿಲ್ಲ ಜ್ಞಾನಿ ಗಳಿಗೆ"[2] ಎಂಬ ಮಾತನ್ನು ಅನೇಕ ಕೀರ್ತನಕಾರರು ಹೇಳಿದ್ದಾರೆ. ಕುಲವಿಲ್ಲವೆಂದ್ಯ ಹೇಳುವಾಗಲೇ ವಿವಿಧ ಕುಲಗಳನ್ನು ಹೆಸರಿಸುವ ಸಂದರ್ಭಗಳಿವೆ. ಇಪ್ಪತ್ತೊಂದು ಕುಲ ಗಳನ್ನು (3-49) ಪುರಂದರದಾಸರು ಗುರುತಿಸಿದ್ದರೆಂದು ಗೊತ್ತಾಗುತ್ತದೆ.

ಜಾತಿ ಎಂಬುದು ತಾಯಿಯ ಮತ್ತು ತಂದೆಯ ಕಡೆಯ ಬಂಧುಗಳ ಸಂಬಂಧದ ಆಧಾರದ ಮೇಲೆ ರೂಪುಗೊಂಡಿರುವ ವ್ಯವಸ್ಥೆ. ಇದನ್ನು ಕುಟುಂಬ ಮತ್ತು ಬಾಂಧವ್ಯ ಗಳ ಮುಂದುವರಿಕೆ ಎಂದು ಹೇಳಬಹುದು. ವರ್ಣ, ಕುಲ, ಜಾತಿ ಎಂಬ ಪದಗಳು ಬೇರೆ ಬೇರೆ ಕಾರಣಗಳಿಂದ ರೂಪುಗೊಂಡು ಬಹುಪಾಲು ಒಂದೇ ಅರ್ಥದಲ್ಲಿ ಇಂದು ಬಳಕೆ ಯಾಗುತ್ತಿವೆ. ಸಮಾಜ ಜೀವನದ ವಿಭಾಗಗಳಾಗಿ ವರ್ಣಗಳೇರ್ಪಟ್ಟು, ವರ್ಣಾಶ್ರಮ ಧರ್ಮ ಭಾರತೀಯ ಜನಜೀವನದ ಅವಿಭಾಜ್ಯ ಅಂಗವಾಗಿ ಮುಂದುವರಿದಿದೆ. ಚಾತುರ್ವರ್ಣ್ಯ ವ್ಯವಸ್ಥೆ ಬಹಳ ಪ್ರಾಚೀನ ಕಾಲದಿಂದ ಬಳಕೆಯಲ್ಲಿದ್ದು ಸಾಹಿತ್ಯದಲ್ಲಿ ಹೇರಳವಾಗಿ ಉಲ್ಲೇಖಗೊಂಡಿದೆ.

ಕುಲ ಮತ್ತು ಜಾತಿ ಕೀರ್ತನೆಗಳಲ್ಲಿ ಒಂದೇ ಅರ್ಥದಲ್ಲಿ ಬಳಕೆಯಾಗಿದೆ. ಮಾನವ ಶಾಸ್ತ್ರದಲ್ಲಿ ಕುಲ (clan) ಮತ್ತು ಜಾತಿ (caste) ಎಂಬುದನ್ನು ಪಾರಿಭಾಷಿಕ ಪದ ಗಳಾಗಿ ಪರಿಗಣಿಸಿ ನಿರ್ದಿಷ್ಟ ಅರ್ಥದಲ್ಲಿ ಬಳಸಿರುವುದನ್ನು ನೋಡುತ್ತೇವೆ. ಈ ಅರ್ಥ ದಲ್ಲಿ ಕುಲ; ತಂದೆ ಅಥವಾ ತಾಯಿಗೆ ಮಾತ್ರ ಮನ್ನಣೆಕೊಡುವಂಥದು. ಆದಿವಾಸಿಗಳಲ್ಲಿ ತಾಯಿಯ ಕುಲಕ್ಕೆ ಅಥವಾ ತಂದೆಯ ಕುಲಕ್ಕೆ ಸೇರಿರುವ ಉದಾಹರಣೆಗಳನ್ನು ನೋಡು ತ್ತೇವೆ. ತಾಯಿಯ ಕುಲಕ್ಕೆ ಸೇರಿದವರು ಆ ಕುಲದ ಹೆಸರನ್ನೇ ಇಟ್ಟುಕೊಳ್ಳುತ್ತಾರೆ.

---

[1] ಎಕ್ಕಡ ಸಿದ್ಧಿಂಚು ಬ್ರಹ್ಮಚರ್ಯಮು ಯೆದುಟನೇ ಕಾಂತಲ ಜೂಚಿನ ವೇಳನು
ಚಕ್ಕಗಾ ಮನೋವ್ಯಭಿಚಾರಂಬುನ ಚಲಿಯಿಂಚುಗಾಕ

(ಅಧ್ಯಾ. ಸಂ., ಭಾಗ 1, ಪು. 12).

[2] ಪುರಂದರದಾಸರ ಕೀರ್ತನೆ, ಉ. ಪ್ರ., ಭಾಗ 3, ಪು. 62.

ಅಲ್ಲಿಯ ಎಲ್ಲ ಚಟುವಟಿಕೆಗಳಲ್ಲೂ ಭಾಗವಹಿಸುತ್ತಾರೆ. ತಾಯಿಯ ಅಥವಾ ತಂದೆಯ ಕಡೆಯ ರಕ್ತಸಂಬಂಧಿಗಳು ಒಂದೇ ಸಂತತಿಗೆ ಸೇರಿದವರಾಗುತ್ತಾರೆ. ಇದರ ವ್ಯಾಪ್ತಿ ವಿಸ್ತಾರಗೊಂಡಾಗ ಬಹಳ ಹಿಂದಿನ ವಂಶಜರನ್ನೂ ಸೇರಿಸಿಕೊಂಡು ಕುಲ ಎನ್ನುತ್ತಾರೆ.

ವರ್ಣವ್ಯವಸ್ಥೆಯ ಮೂಲಗಳನ್ನು ಹುಡುಕುವವರು ಅದು ವೃತ್ತಿಯಿಂದ, ಪ್ರವೃತ್ತಿಯಿಂದ ಆದುದೇ ಹೊರತು ಹುಟ್ಟುಗುಣ ಅಲ್ಲವೆನ್ನುತ್ತಾರೆ. ಜಾತಿಗಳು ಕೂಡ ವೃತ್ತಿಮೂಲವೇ ಆಗಿದ್ದು ಬರಬರುತ್ತಾ ಹುಟ್ಟಿನಿಂದಲೇ ನಿರ್ಧಾರವಾಗುವ ವ್ಯವಸ್ಥೆಯಾಗಿ ಪರಿಣಮಿಸಿವೆ. ಪ್ರಕೃತ ಪರಿಶೀಲನೆಯಲ್ಲಿ ಕುಲ ಮತ್ತು ಜಾತಿಗೆ ಇರುವ ಸಾಮಾನ್ಯಾರ್ಥವನ್ನೇ ಸ್ವೀಕರಿಸಲಾಗಿದೆ. ಕೀರ್ತನೆಗಳಲ್ಲಿ ಕಂಡುಬರುವ ಉಲ್ಲೇಖಗಳು ಕುಲ, ಜಾತಿ, ವೃತ್ತಿ ಎಂಬ ಮೂರರಕ್ಕೂ ಸೂಚಕಗಳಾಗಿವೆ.

ವರ್ಣಾಶ್ರಮಧರ್ಮವನ್ನು ಕುರಿತಂತೆ ಭಾರತೀಯ ಸಾಹಿತ್ಯ ಸಾವಿರಾರು ಉಲ್ಲೇಖಗಳನ್ನು ನೀಡಿದೆ. ವಿಜಯನಗರದ ದೊರೆಗಳ ಕಾಲದಲ್ಲೂ ವರ್ಣಾಶ್ರಮ ವ್ಯವಸ್ಥೆಯ ಬಗೆಗೆ ಗೌರವವಿತ್ತು. ಬಾರ್ಬೋಸ, ಪಾಯೇಸ್ ಮುಂತಾದವರ ಉಲ್ಲೇಖಗಳಿಂದ ಬ್ರಾಹ್ಮಣರಿಗೆ ಮುಖ್ಯ ಸ್ಥಾನವಿತ್ತೆಂದು ತಿಳಿದುಬರುತ್ತದೆ. ಶ್ರೀಕೃಷ್ಣದೇವರಾಯ ಬ್ರಾಹ್ಮಣರನ್ನು ಪೂಜಿಸಲು ಮಾಡಿದ ವೆಚ್ಚವನ್ನು ಖರ್ಚೆಂದು ಪರಿಗಣಿಸಬಾರದೆಂದು ಹೇಳಿದ್ದಾನೆ (ಆಮುಕ್ತಮಾಲ್ಯದ, 5-262). ಬ್ರಾಹ್ಮಣರನೇಕರು ಸರ್ಕಾರಿ ಅಧಿಕಾರದಲ್ಲಿದ್ದು, ಯುದ್ಧಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದರು. ರಾಯಸಂಕೊಂಡಮರಸಯ್ಯ ಮುಂತಾದ ಬ್ರಾಹ್ಮಣ ಸೇನಾನಿಗಳು ಶ್ರೀಕೃಷ್ಣದೇವರಾಯನಿಗೆ ಆಪ್ತರಾಗಿದ್ದರು.

ವಿಜಯನಗರ ಕಾಲಕ್ಕೆ ಬ್ರಾಹ್ಮಣರಲ್ಲೂ ಒಳಪಂಗಡಗಳೇರ್ಪಟ್ಟವು. ಪ್ರಾದೇಶಿಕವಾಗಿ ಮತ್ತು ಮತೀಯವಾಗಿ ಬ್ರಾಹ್ಮಣರನ್ನು ವಿಭಜಿಸಿದ ವಿವರಗಳನ್ನು ಕೆಲವು ಕಾವ್ಯಗಳಲ್ಲಿ ನೋಡಬಹುದು. ದಾಸರ ಕೃತಿಗಳಲ್ಲಿ ನಾಮ, ತಿರುಚೂರ್ಣ, ಗೋಪಿಚಂದನ, ಪಂಚಮುದ್ರೆಗಳು ಮುಂತಾದ ಮತೀಯ ಸಂಕೇತಗಳ ವರ್ಣನೆಗಳಿಗೆ ಕೊರತೆಯಿಲ್ಲ. ಇದರ ಜೊತೆಯಲ್ಲಿ ಧರ್ಮಶ್ರದ್ಧೆಯಿಲ್ಲದ ಬಾಹ್ಯವೇಷಧಾರಿಗಳ ಬಗೆಗೆ ಹೇಳುವ ಧೈರ್ಯವೂ ದಾಸರಿಗಿತ್ತು ಎಂಬುದು ಅವರ ಕೃತಿಗಳಲ್ಲಿ ವಿದಿತವಾಗಿದೆ. "ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶಭಕುತಿಯಿಲ್ಲ" ಎಂದು ಜರಿಯುತ್ತಾರೆ (2-46). "ದಿನದಿನ ನೊಸಲೊಳು ತಿರುಮಣಿಯಿಟ್ಟರೆ ದೇವರಿಗೆ ತೃಪ್ತಿಯಾದೀತೆ" (2-102) ಎಂದು ದಾಸರು ನಿರ್ಭಿಡೆಯಿಂದ ಪ್ರಶ್ನಿಸುತ್ತಾರೆ. ಕೆಟ್ಟ ಬ್ರಾಹ್ಮಣನ ಬಗೆಗೆ ಅನ್ನಮಾಚಾರ್ಯರಿಗೂ ಅನುಕಂಪವಿಲ್ಲ. "ಪಾಪವರಿಯದ ಬ್ರಾಹ್ಮಣ ತೋರಿಸಲಾಗದ ಸ್ಥಳವನ್ನು ತೋರಿಸುತ್ತಾನೆ. ತಣಿಯದೆ ಜೀವಿಗಳ ತಲೆಗಳನ್ನು ಬೇಕೆಂದು ತಿನ್ನುವ

ಬ್ರಾಹ್ಮಣ ತಾನು ಯಾರು, ಬೇರೆಯವರು ಯಾರು ಎಂದರಿಯದೆ ರಾಜನಾಗಿ ಘನವಂಶವನ್ನು ಸುಟ್ಟುಹಾಕುತ್ತಾನೆ'' ಎನ್ನುತ್ತಾರೆ ಅನ್ನಮಯ್ಯ.[1]

ಈ ಕಾಲದ ಸಾಹಿತ್ಯದಲ್ಲಿ ಕ್ಷತ್ರಿಯರ ಹೆಸರು ಬಹುಮಟ್ಟಿಗೆ ಕಂಡುಬರುವುದಿಲ್ಲವೆಂಬುದು ಗಮನಾರ್ಹ.[2] ವೈಶ್ಯರ ಬಗೆಗೆ ಮತ್ತು ವ್ಯಾಪಾರದ ಚಟುವಟಿಕೆಗಳ ಬಗೆಗೆ ಹಲವು ಉಲ್ಲೇಖಗಳು ಕಂಡುಬರುತ್ತವೆ. ''ವ್ಯಾಪಾರವೆನಗಾಯಿತು....'' (2-1·33) ಮುಂತಾದ ಕೀರ್ತನೆಗಳಲ್ಲಿ ಕುಲದ ಬಗೆಗೆ ಹೇಳದಿದ್ದರೂ ವೈಶ್ಯಕುಲವೃತ್ತಿಯಾದ ವ್ಯಾಪಾರವನ್ನು ಪುರಂದರದಾಸರು ವರ್ಣಿಸಿದ್ದಾರೆ. ವೈಶ್ಯರನ್ನು 'ಕೋಮಟಿ'ಗಳು ಎಂದು ಹೇಳುವುದು ರೂಢಿ. ಹಣದ ವ್ಯವಹಾರದಲ್ಲೇ ತೊಡಗಿರುವ ಕೋಮಟಿಗಳನ್ನು ಜಿಪುಣರಾಗಿ ಅನೇಕ ಕವಿಗಳು ನಿರೂಪಿಸಿರುವುದನ್ನು ಕಾಣುತ್ತೇವೆ. ''ಕೋಮಟಿ ಮನೆಯ ಪಕ್ಕದಲ್ಲಿ ಇದ್ದಂತಾಯಿತು ನನ್ನ ಬದುಕು''[3] ಎಂದು ಈ ಅರ್ಥದಲ್ಲೇ ಅನ್ನಮಯ್ಯ ಹೇಳಿದ್ದಾರೆ. 'ಮೋನರಿಕ' ಬಗೆಗೆ ಹೇಳುವಾಗಲೂ 'ಕೋಮಟಿ ಮೋನರಿಕ' ಎಂಬ ಪದವನ್ನು ಆಚಾರ್ಯರು ಬಳಸಿದ್ದಾರೆ (17-305). ಜಿಪುಣರಾದ ವೈಶ್ಯರು ಯಾವಾಗಲೂ 'ಮೋನರಿಕ' ಬಯಸುತ್ತಾರೆಂದು ಅವರ ಅರ್ಥವಿರಬಹುದು. ಪ್ರಿಯತಮೆ ಹೇಳುವ ಮಾತು: ''ಒಂದು ವೇಳೆ ಒಲ್ಲದಿದ್ದರೆ ಸುಮ್ಮನೆ ಆಸೆ ತೋರಿಸುವುದೇಕೆ? ಆಗಲೇ ಹೋಗು ಎಂದು ಹೇಳಿಬಿಡಬಾರದಿತ್ತೆ? ಮತ್ತೆ ಮತ್ತೆ ಕೇಳಲು ಇದೇನು 'ಕೋಮಟಿ ಮೋನರಿಕವೇ', ಸ್ಥಿರವಾಗಿ ನೀನೊಬ್ಬನೇ ಸುಖವಾಗಿರು.''[4]

ಯಾವ ವಿಷಯವನ್ನಾದರೂ ಆಧ್ಯಾತ್ಮಿಕ ವಸ್ತುವನ್ನಾಗಿ ಪರಿವರ್ತಿಸುವ ಜಾಣ್ಮೆ ಕೀರ್ತನಕಾರರಿಗಿದೆ. ವೇಂಕಟೇಶ್ವರನನ್ನು ಕೀರ್ತಿಸುವಾಗ 'ಭಕ್ತಿ ಮುಕ್ತಿ ಕೊಡುವ ಪರಮಾತ್ಮ' ಎಂದು ಹೇಳಿ 'ಪರಮಾತ್ಮ ಬಚ್ಚು (ಬೆಳ್ಳಿ ಚಿನ್ನಗಳ ನಾಣ್ಯಗಳನ್ನು ನೋಡಿ

---

[1] ಪಾಪಮೆರುಂಗನಿ ಬ್ರಾಹ್ಮಣುಯೆಂದು
ಜೂಪರಾನಿ ಚೋಟು ಚೂಪೀನಯ್ಯಾ
ತನಿವೋಕ ಜೀವಮು ತಲಕಾಯನುಂಜುಡು
ಪನಿವಡಿ ತಿನ್ನ ಬ್ರಾಹ್ಮಡು
ಯೆನಿಸಿ ಯೆದಿರಿದನ್ನು ನೆರುಗಕ ವಿಭುಡೈ
ಘನವಂಶಮು ಮುಂಟಗಲಪೀನಯ್ಯಾ (ಅಧ್ಯಾ. ಸಂ., ಭಾಗ 1, ಪು: 139).

[2] ಡಾ. ಕೆ. ಶ್ರೀಕಂಠಯ್ಯ, 1983, ಪು. 189.

[3] ಪೊದ್ದು ಪೊದ್ದು ಕೋಮಟಿಂಡ್ಲ ಪೊರುಗಾಯ ಬದುಕು (15-73).

[4] ವೊಲಸೀನೊಲ್ಲನಿ ವಾಡ ವೂರಕೇ ಆಸಿಯ್ಯನೇಲ
ಪೊಲಸಿ ಅಪ್ಪುಡೇ ನನ್ನು ಬೊಮ್ಮನರಾದಾ
ಕುಲಿಕಿ ನೇ ಗೊಸರಗ ಗೋಮಟಿ ಮೇನರಿಕವಾ
ನೆಲವೈ ಸುಖಾನನುಂಡು ನೀ ವೊಕ್ಕಡವೇ (17-305).

ಒತ್ತೆ ಇಟ್ಟುಕೊಳ್ಳುವ ವೈಶ್ಯ) ಕೈಯ ಒರೆಗಲ್ಲು'[1] ಎಂದು ಅನ್ನಮಾಚಾರ್ಯರು ಹೇಳುತ್ತಾರೆ. ಒರೆಗಲ್ಲಿನ ಮೇಲೆ ಚಿನ್ನ ಗೀಚಿ ನೋಡುವಂತೆ ಪರಮಾತ್ಮನನ್ನೇ ಆಧಾರವಾಗಿಟ್ಟುಕೊಂಡು ಭಕ್ತ ಜಗತ್ತಿನ ಬೆಲೆ ತಿಳಿಯುವನೆಂದು ಅರ್ಥ.

ಲೋಕವ್ಯವಹಾರಗಳನ್ನು ವರ್ಣಿಸುವ ಪುರಂದರದಾಸರು ಬೇರೆ ಬೇರೆ ಜಾತಿಗಳ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಇವನ್ನು ಲೋಕವ್ಯವಹಾರದ ಸೂಚಕಗಳಾಗಿ, ಆಧ್ಯಾತ್ಮಿಕ ಪ್ರತಿಮೆಗಳಾಗಿ, ವೃತ್ತಿಯ ಪ್ರತಿನಿಧಿಗಳಾಗಿ ಸಂದರ್ಭಕ್ಕೆ ತಕ್ಕಂತೆ ಬಳಸಿದ್ದಾರೆ. ಹಾರುವಾ (3-58), ಬಡಿಗ (1-14), ಹಾವುಗೆಯುವ, ಕಟ್ಟಿಗೆಯುವ(3-25), ಬೇಟೆಗಾರ(3-58), ಕಂಚುಗಾರ(2-46), ಮಡಿವಾಳ(5-101), ಹೊಲತಿ, ಚಂಡಾಲತಿ, ಕುಲಹೀನೆ (3-58), ಬಾಕುಳಿಗವೃತ್ತಿ (3-1), ಕುಂಬಿಕಾರ (6-2), ಮುಂತಾದ ಹೆಸರುಗಳು ಪುರಂದರದಾಸರ ಹಾಡುಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.

ಪುರಂದರದಾಸರು ಜಾತಿಯ ಅಥವಾ ವೃತ್ತಿಯ ಹೆಸರುಗಳನ್ನು ಬಳಸಿದ ಕೆಲವು ಸ್ವಾರಸ್ಯಕರ ಸಂದರ್ಭಗಳಿವೆ.

> ಲಂಗೋಟಿ ಬಲುಒಳ್ಳೆದಣ್ಣ ಒಬ್ಬರ
> ಹಂಗಿಲ್ಲದೆ ಆಚಾರಕೆ ಒದಗುವ
> ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ
> ಪೊಡವಿಯೊಳ್ ಯಾಚಕರಿಗೆ ನೆರವು....(5-101)

ಬಟ್ಟೆಗಳ ಸಮೃದ್ಧಿ ಮಡಿವಾಳರಿಗೆ ವರ, ಲಂಗೋಟಿಯಂಥ ಸಣ್ಣ ಬಟ್ಟೆ ಚೂರು ಅವರಿಗೆ ಶತ್ರು ಎಂಬುದನ್ನು ಈ ಕೀರ್ತನೆಯಲ್ಲಿ ಚಿತ್ರಿಸಿದ್ದಾರೆ.

ದಾಸರ ಹಾಡು ಯಾವಾಗಲೂ ಇಷ್ಟೇ ಸರಳವಾಗಿರುವುದಿಲ್ಲ. "ಕೀಳುಕೋಟೆಯೊಳೊಬ್ಬ ಅಗಸಾಲ ಸತ್ತರೆ ಮೇಲುಕೋಟೆಯೊಳೊಬ್ಬ ಅಗಸತಿ ಅಳುವಳು" (ಉ. ಪ್ರ., ಭಾಗ 2 ಪು. 6) ಮುಂತಾದ ಹಾಡುಗಳಲ್ಲಿ ತಾತ್ತ್ವಿಕ ವಿಷಯಗಳನ್ನೂ ಹೇಳುವುದುಂಟು. ಇದು ಒಂದು ರೀತಿಯ ನಿರೂಪಣೆಯಾದರೆ, ದೇವರ ಪದಾರ್ಥಗಳು ಸಾಮಾನ್ಯ ಪದಾರ್ಥಗಳಿಗಿಂತ ಅತಿಶಯವಾಗಿರುತ್ತವೆ ಎಂಬುದನ್ನು ತಿಳಿಸುವುದು ಇನ್ನೊಂದು ರೀತಿಯ ನಿರೂಪಣೆ: "ಶೃಂಗಾರವಾಗಿದೆ ಸಿರಿರಂಗನ ಮಂಚ, ಬಡಿಗ ಮುಟ್ಟದ ಮಂಚ, ಮಡುವಿನೊಳಗಿಹ ಮಂಚ" (1-14). ದೇವರನ್ನು ಕಾವಲುಗಾರನಂತೆ ಚಿತ್ರಿಸಿದ್ದಾರೆ : "ಬಿಲ್ಲೆಗಾರನು ಆದನು ರಂಗ ರಂಗಯ್ಯ ರಂಗ, ಬಿಲ್ಲೆಗಾರನಾಗಿ ಎನ್ನ ಕಾವಲಾದ, ಬಲ್ಲವರ ಭಾಗ್ಯವೊ ಎಲ್ಲವರಿತ ಸ್ವಾಮಿ" (ಉ. ಪ್ರ., ಭಾಗ 2, ಪು. 90). ಇನ್ನು ಕೆಲವು ಕಡೆ ಯಾವ ವ್ಯಾಖ್ಯಾನವೂ ಇಲ್ಲದೆ ವೃತ್ತಿಯನ್ನು ಉಲ್ಲೇಖಿಸುವುದನ್ನು ನೋಡಬಹುದು : "ಕಂಚುಗಾರನ ಬಿಡಾರದಂದದಿ ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ" (2-46).

ಕೆಲವು ಜಾತಿಗಳು ಶ್ರೇಷ್ಠವೆಂದೂ ಇನ್ನು ಕೆಲವು ಹೀನವೆಂದೂ ರೂಢಿಗೆ ಬಂದಿರುವುದು ಭಾರತೀಯ ಸಮಾಜಕ್ಕೆ ಶಾಪವಾಗಿ ಪರಿಣಮಿಸಿದೆ. ವಚನಕಾರರು

[1] ಬಚ್ಚುಚೇತಿ ಮೊರಗಲ್ಲು ಪರಮಾತ್ಮುಡು (ತಾ, ಅ. ಪಾ., ಪು. 68).

ಮತ್ತು ಹರಿದಾಸರು ಈ ಕಲ್ಪನೆಯನ್ನು ವಿರೋಧಿಸಿದರು. ಅವರ ಜಾತಿವಿರೋಧಿತತ್ತ್ವ ಧಾರ್ಮಿಕ ಏಕತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಬೆಳೆದದ್ದು. ಶೈವ, ವೈಷ್ಣವ ಅಥವಾ ಮಾಧ್ವನಾದವನು ಯಾವ ಜಾತಿಯವನಾದರೂ ಅಡ್ಡಿಯಿಲ್ಲ. ಇಂಥ ಏಕತಾ ದೃಷ್ಟಿಯಿದ್ದರೂ ತಮಗೆ ತಿಳಿದೊ ತಿಳಿಯದೆಯೋ ಕೆಲವು ಜಾತಿಗಳನ್ನು ಹೀನವಾದುವೆಂದು ಇವರು ಹೇಳಿರುವುದೂ ಕಂಡುಬರುತ್ತದೆ. ಈ ಉಲ್ಲೇಖಗಳಲ್ಲಿ ಸಮಾಜದ ಕೆಲವು ವರ್ಗಗಳ ಅಭಿಪ್ರಾಯವನ್ನೇ ಇವರು ಪ್ರತಿನಿಧಿಸುತ್ತಿದ್ದಾರೆನ್ನಬಹುದು. "ಏಡಿ ಕಡಗವಿಟ್ಟು ಫಲವೇನಿಲ್ಲ, ಬೇಡ ತಾ ಮುತ್ತಿನ ಬೆಲೆ ಏನು ಬಲ್ಲ" (ಉ. ಪ್ರ., ಭಾಗ 2, ಪು. 24) ಎಂದಾಗ ಬೇಡರನ್ನು ಹೀನಕುಲದವರೆಂದು ಹೇಳದಿದ್ದರೂ ಅವರು ಅವಿವೇಕಿಗಳೆಂಬುದನ್ನು ಸೂಚಿಸುವಂತಿದೆ. ಇಂಥವೇ ಉದಾಹರಣೆಗಳು ಬೇರೆ ಬೇರೆ ಕುಲದವರನ್ನು ಕುರಿತಂತೆ ಸಿಕ್ಕುತ್ತವೆ.

ಅಚ್ಚ ಹೆಣ್ಣಿನ ಸಂಗ ಷಂಡೇನ ಬಲ್ಲ
ಮುಚ್ಚಿ ಮಾತ್ತೋಳಿದರೆ ನ್ಯಾಯವೇನಿಲ್ಲ
ಸ್ವಚ್ಛ ದೀಪದ ಬೆಳಕು ಕುರುಡೇನು ಬಲ್ಲ
ಮೊಚ್ಚಿಗಾರ ಸಕಲಾತ್ಮೇನು ಬಲ್ಲ (ಪು. ಸಾ. ದ., ಭಾಗ 1, ಪು. 139)

ಬೇರೆ ಕೆಲವು ಉದಾಹರಣೆಗಳಲ್ಲಿ ಒಂದು ಕುಲವನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಹೀನವಾದುದೆಂದು ಹೇಳುವುದನ್ನು ನೋಡುತ್ತೇವೆ : "ಏನು ಮರುಳಾದೆಯೋ ಎಲೆ ರುಕ್ಮಿಣಿ, ಹೀನಕುಲ ಗೊಲ್ಲ ಶ್ರೀ ಗೋಪಾಲಗೆ" (3-92). ಸಂದರ್ಭ ಎಂಥದೇ ಆದರೂ ತನ್ನ ಆರಾಧ್ಯದೈವವಾದ ಕೃಷ್ಣ ಹೀನಕುಲದವನೆಂದು ದಾಸರು ಹೇಳಿರುವುದು ಗಮನಾರ್ಹ. ಇನ್ನೊಂದೆಡೆ ಪುರಂದರದಾಸರು ಹೀಗೆನ್ನುತ್ತಾರೆ:

ಆದರಿಲ್ಲದ ಊಟ ಅಮೃತಾನ್ನವಿದ್ದೇನು
ವಾದಿಸುವ ಸತಿಸುತರು ಇದ್ದು ಫಲವೇನು
ಕ್ರೋಧವನು ಮಾಡುವ ಸಹೋದರರು ಇದ್ದರೇನು
ಮಾದಿಗರ ಮನೆಯಲ್ಲಿ ಮದುವ್ಯಾದರೇನು (ಉ. ಪ್ರ., ಭಾಗ 1, ಪು.59)

ಮೇಲಿನ ಉದಾಹರಣೆಗಳು ಒಂದು ಮುಖವನ್ನು ಪ್ರದರ್ಶಿಸುತ್ತವೆ. ಇನ್ನು ಕೆಲವೆಡೆ ದಾಸರ ಪ್ರಜ್ಞಾಪೂರ್ವಕ ಜಾತ್ಯತೀತ ಭಾವನೆ ವ್ಯಕ್ತವಾಗುತ್ತದೆ. ಈ ಬಗೆಯ ಕೀರ್ತನೆಗಳಲ್ಲಿ ಜ್ಞಾನಮಾರ್ಗ ಪ್ರಕಾಶಿತವಾಗುತ್ತದೆ. ಆಗ "ಆವ ಕುಲವಾದರೇನು ಭಾವದ ವಿಜ್ಞಾನ ತಿಳಿದವನಿಗೆ" (5-86) ಎಂಬ ಮಾತುಬರುತ್ತದೆ. ಹೊಲತಿ ಹೊಲೆಯ ಮುಂತಾದವು ಜಾತಿಯಿಂದ ಬಂದುಥವಲ್ಲ; ನಡವಳಿಕೆಯಿಂದ ಎಂದು ಹೇಳುತ್ತಾರೆ. "ಹೊಲೆಯ ಹೊರಗಿಹನೆ ಊರೊಳಗಿಲ್ಲವೆ" (5-88) ಎಂದೂ "ಹೊಲಗೇರಿಯೊಳು ಹೊಲೆಯ ಹೊಲತಿಯಿಲ್ಲ, ಸತಿಯಳ ವಶನಾಗಿ ಜನನಿ ಜನಕರಿಗೆ ಅತಿ ನಿಷ್ಠುರ ನುಡಿವವ ಹೊಲೆಯ" (5-87) ಎಂದೂ ದಾಸರು ಹೇಳುತ್ತಾರೆ.

ಇನ್ನೊಂದು ಕಡೆ ಹೊಲೆಯರನ್ನು ದೂರ ಇಡುವ ಮೇಲುವರ್ಗದವರ ಪ್ರವೃತ್ತಿಯನ್ನು ವ್ಯಂಗ್ಯವಾಗಿ ಟೀಕಿಸಿದ್ದಾರೆ.

ಹೊಲೆಯ ಬಂದಾನೆಂದು ಒಳಗೆ ದೇವರಮಾಡಿ
ಗಣಗಣ ಗಂಟೆಯ ಬಾರಿಸುವುದೇತಕಯ್ಯ
ತನುವಿನ ಕೋಪ ಹೊಲೆಯಲ್ಲವೆ ?
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟುಕೊಂಡು
ಇದಕೇನು ಮದ್ದು ಶ್ರೀಪುರಂದರವಿಠಲ (3-163)

ಬೇರೆ ಬೇರೆ ಕುಲಗಳನ್ನು ಉಲ್ಲೇಖಿಸುವಾಗ ಅನ್ನಮಾಚಾರ್ಯರು ಕೂಡ ಮೇಲಿನಂತೆ ಎರಡು ರೀತಿಯ ಅಭಿಪ್ರಾಯಗಳನ್ನೂ ಹೇಳುತ್ತಾರೆ. ಅಪ್ರಜ್ಞಾಪೂರ್ವಕವಾಗಿ ಸಮಾಜದ ಸಾಮಾನ್ಯ ಅಭಿಪ್ರಾಯವನ್ನು ಪ್ರತಿಬಿಂಬಿಸುವಾಗ ಜಾತಿಪದ್ಧತಿಯನ್ನು ಉಲ್ಲೇಖಿಸುವುದು, ಪ್ರಜ್ಞಾಪೂರ್ವಕವಾಗಿ ಏಕತೆಯನ್ನು ಬಯಸಿದಾಗ ಜಾತ್ಯತೀತ ಭಾವನೆ ತಳೆಯುವುದು ಕಂಡುಬರುತ್ತದೆ.

ವಿವಿಧವೃತ್ತಿಗಳಲ್ಲಿ ತೊಡಗುವ ಮನುಜರ ಕೆಲಸವನ್ನೇ ಹೋಲಿಕೆಯಾಗಿ ಸ್ವೀಕರಿಸಿ ಸೃಷ್ಟಿಕಾರ್ಯವನ್ನು ವಿವರಿಸುವುದನ್ನು ಇಂದಿಗೂ ನೋಡುತ್ತೇವೆ. ಸೃಷ್ಟಿಸ್ಥಿತಿಲಯಗಳಿಗೆ ಪರಮಾತ್ಮನೇ ಕಾರಣ ಎಂಬ ಅಭಿಪ್ರಾಯವನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಲು ದಾರ್ಶನಿಕರು ವೇದಕಾಲದಿಂದಲೂ ಪ್ರಯತ್ನಿಸುತ್ತಿದ್ದಾರೆ. "ಕುಂಬಾರ ನಿಲ್ಲದೆ ಮಡಕೆ ಹುಟ್ಟುತ್ತದೆಯೇ, ಸ್ನೇಹದಿಂದ ನೀನು ಹುಟ್ಟಿಸದೆ ನಾನು ಹುಟ್ಟುವುದು ಸಾಧ್ಯವೇ" [1] ಮುಂತಾದ ಕಡೆ ಈ ತರಹದ ದೃಷ್ಟಾಂತ ಕಲ್ಪನೆ ಕಂಡುಬರುತ್ತದೆ. ಕೆಲವು ಕಡೆ ವೃತ್ತಿ ಅಥವಾ ಜಾತಿಗಳನ್ನು ಸುಮ್ಮನೆ ಹೆಸರಿಸಿರುವುದು ಕಂಡುಬಂದರೂ ಸಾಮಾನ್ಯವಾಗಿ ಈ ಉಲ್ಲೇಖಗಳನ್ನು ಯಾವುದೋ ಒಂದು ರೀತಿಯ ಆಧ್ಯಾತ್ಮಿಕ ಸಾಧನೆಗೆ ಸೂಚಕವಾಗಿಯೇ ಬಳಸಿಕೊಂಡಿರುವುದು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ವೃತ್ತಿಗಳ ಪೈಕಿ ಅತ್ಯಂತ ಪ್ರಧಾನವಾದ ಬೇಸಾಯವನ್ನು ಮಾರ್ಮಿಕ ರೀತಿಯಲ್ಲಿ ವರ್ಣಿಸಿರುವ ಸಂದರ್ಭವಿದು: "ಒಂಟಿ ಕಾಲಲಿ ಕುಂಟಿ ಕುಂಟಿ ಊರಿನ ದೊಡ್ಡಿಗೆ ಸಿಕ್ಕಿ ಪೈರಾಗುವವರೆಗೆ ಉತ್ತಿತೊಂದು ಪಶು" [2] ಇನ್ನೊಂದು ಕಡೆ ವೇಂಕಟೇಶ್ವರನನ್ನು ಸೀರೆ ವ್ಯಾಪಾರಿಗೆ ಹೋಲಿಸಿದ್ದಾರೆ ಅನ್ನಮಯ್ಯ: "ಬೀದಿ ಬೀದಿಯಲ್ಲಿ ಅವನೇ ನೆರಳಲ್ಲಿ ಸೀರೆ ಮಾರುವ ನೆಯ್ಗೆಕಾರ ವ್ಯಾಪಾರಿ, ಪಂಚಭೂತಗಳೆಂಬ

---

[1] కుమ్మరవాడు లేకేకుండదాబుట్టునా
నెమ్మి నీవు పుట్టించక నేనే పుట్టితినా (ಅಧ್ಯಾ. ಸಂ., ಭಾಗ 2, ಪು. 88).

[2] మొంటికాల కుంటి కుంటి వూరి బందెలకు జిక్కి
పంటదాకా దున్నె నొక్క పసరము (ಅಧ್ಯಾ. ಸಂ., ಭಾಗ 2, ಪು. 88).

ಬಣ್ಣಬಣ್ಣದ ನೂಲು, ಚಾಂಚಲ್ಯ ಗಂಜಿಯಿಂದ ನೆನಸಿ, ಗುಣದಿಂದ ನೆಯ್ದು, ಒಳ್ಳೊಳ್ಳೆಯ ಸೀರೆ ಮಾರುವ ವ್ಯಾಪಾರಿ.''[1]

ಕೀಳುಜಾತಿ ಎಂದು ಕೆಲವರನ್ನು ಹೀನವಾಗಿ ನೋಡುವ ಧೋರಣೆ ನೂರಾರು ವರ್ಷಗಳಿಂದ ನಡೆದುಬಂದಿದೆ. ಧರ್ಮದ ಹೆಸರಿನಲ್ಲಿ ಜಾತಿಯನ್ನು ಮರೆಯಬೇಕೆಂದು ಪ್ರಯತ್ನಿಸಿದ ಭಕ್ತಕವಿಗಳಲ್ಲಿ ಕೂಡ ಅಪ್ರಜ್ಞಾಪೂರ್ವಕವಾಗಿ ಹೀನಕುಲವೆಂದು ಕೆಲವು ಉದಾಹರಣೆಗಳನ್ನು ಈಗಾಗಲೇ ನೋಡಲಾಗಿದೆ. ''ವಿಜ್ಞಾನ ಗತಿತಪ್ಪಲು ಪಟ್ಟಣ ಬಲುಕೆಟ್ಟು ಹೊಲಗೇರಿ ಘನವಾಯಿತು''[2] ಎಂದು ಅನ್ನಮಾಚಾರ್ಯರು ಹೇಳಿದುದು ಈ ಹಿನ್ನೆಲೆಯಲ್ಲೇ. ಆದರೆ ವೈಷ್ಣವವೆಂಬ ಪರಿಧಿಯೊಳಗೆ ಬಂದಾಗ ಎಲ್ಲ ಕುಲಗಳೂ ಒಂದೇ ಆಗಿ ಬಿಡುತ್ತವೆ. ಇದನ್ನು ಹೇಳುವಾಗ ಕೆಲವು ಸಲ ''ಯಾವ ಕುಲವಾದರೇನು, ಯಾರಾದರೇನು, ಆ ಕಡೆ ಆತನೇ ಹರಿಯನ್ನು ಬಲ್ಲವನು''[3] ಎಂದು ನಿರಲಂಕಾರವಾಗಿ ಹೇಳಿಬಿಡುವುದುಂಟು. ಇನ್ನು ಕೆಲವು ಸಲ ಕಾವ್ಯಾತ್ಮಕವಾಗಿ ಹೇಳುವುದುಂಟು: ''ದುಂಬಿಯ ಕೈಗೆ ಬಿದ್ದ ಕೀಟಗಳು ದುಂಬಿಗಳಾಗುತ್ತವಂತೆ, ಶ್ರೀಕಾಂತನ ಪಾದಸೇವಕ ರಾಗುವವರು ಯಾವ ಕುಲಜರಾದರೂ ಹೆಚ್ಚಾಗುವುದು ಅಚ್ಚರಿಯೇ.''[4] ಲೌಕಿಕ ವೈದಿಕ ಲಂಪಟರಿಗೆ ಮಾತ್ರ ಈ ರೀತಿಯ ಜಾತಿಭೇದಗಳನ್ನು ನೋಡುವುದು ಕರ್ತವ್ಯವೆಂದೂ ಇವೆಲ್ಲವನ್ನು ಮೀರಿದವನಿಗೆ ನಾವುವೇ ಸುಜಾತಿ ಎಂದೂ ಅನ್ನಮಾಚಾರ್ಯರ ಅಭಿಪ್ರಾಯ (ಅಧ್ಯಾ. ಸಂ., ಭಾಗ-2, ಪು. 28). ಒಟ್ಟಿನಲ್ಲಿ ಪುರಂದರದಾಸರಂತೆಯೇ ಅನ್ನಮಾಚಾರ್ಯರೂ ಜಾತಿಭೇದವನ್ನು ತಿರಸ್ಕರಿಸಿದವರೇ. ಇದನ್ನು ಪರಿಣಾಮಕಾರಿ ಯಾಗಿ ಹೇಳಿರುವುದನ್ನು ನೋಡಬಹುದು:

[1] ವಾಡ ವಾಡಲ ವೆಂಟ ವಾಡೆವ್ವೋ
ನೀಡನುಂಡಿ ಚೀರಲಮ್ಮೇ ನೇತ ಬೇಹಾರಿ
ಪಂಚಭೂತಮುಲನೆಡಿ ಪಲುವನ್ನೆ ನೂಲು
ಚಂಚಲಪು ಗಂಜಿತೋಡ ಚರಿ ಸೇಸಿ
ಕೊಂಚೆಪು ಕಂಡೆಲ ನೂಲಿ ಗುಣಮುಲ ನೇಸಿ
ಮಂಚಿ ಮಂಚಿ ಚೀರಲಮ್ಮೇ ಮಾರು ಬೇಹಾರಿ (ಅನ್ನ. ಸಂ., ಭಾಗ 2, ಪು. 34).

[2] ವಿಜ್ಞಾನಮು ಗತಿ ದಪ್ಪಗ ಬಲುಪಗು ಪಟ್ನಮು ಕಡುಚೆಡುಗಾ
ಮಾಲವಾಡ ಘನಮೈನಟ್ಲಾಯ (ಅಧ್ಯಾ. ಸಂ., ಭಾಗ 1, ಪು. 49).

[3] ಏ ಕುಲಜುಡೇಮಿ ಯೆವ್ವಡೈನನೇಮಿ
ಆಕಡ ನಾತಡೆ ಹರಿನೆರಿಗಿನವಾಡು (ಅಧ್ಯಾ. ಸಂ., ಭಾಗ 2, ಪು. 29).

[4] ಚೇಕೊನ್ನ ತುಮ್ಮಿದ ಚೇಪಡ್ಡ ಕೀಟಮು
ಲಾಕಡ ತುಮ್ಮಿದಲಯ್ಯಿ ನಟ
ಶ್ರೀಕಾಂತುನಿ ಪಾದಸೇವಕುಲಗುವಾರ
ಲೇಕುಲಜುಲಯಿನಾ ನೆಕ್ಕುಡೌಟರುದಾ (ಅಧ್ಯಾ. ಸಂ., ಭಾಗ 1, ಪು. 28).

ವಿಜಾತಿಗಳೆಲ್ಲ ವೃಥಾ ವೃಥಾ
ಅಜಾಮಿಲಾದಿಗಳಿಗೆ ಯಾವ ಜಾತಿ ಇದೆ
ಜಾತಿಭೇದಗಳು ಶರೀರಗುಣಗಳು
ಜಾತಿ ಶರೀರದೊಡನೆ ಕೆಡುವುದು
ಆತ್ಮ ಪರಿಶುದ್ಧ ಎಂದೆಂದಿಗೂ ಅದು ನಿರ್ದೋಷಿ ಅನಾದಿ
ಈ ಕಡೆ ಹರಿವಿಜ್ಞಾನದ ದಾಸ್ಯವೊಂದೇ ಸುಜಾತಿ.[1]

## ಆರ್ಥಿಕ ವ್ಯವಸ್ಥೆ

ಮಾನವನ ಜೀವನದಲ್ಲಿ ಹಣಕ್ಕಿರುವ ಪ್ರಾಧಾನ್ಯ ಬೇರೆ ಯಾವ ಲೌಕಿಕ ವಸ್ತುವಿಗೂ ಇಲ್ಲ. ಶ್ರೀಮಂತರು ಬಡವರು ಎಂಬ ಭೇದಭಾವವೇ ಪ್ರಪಂಚದ ಮಾನವ ಕುಲವನ್ನು ಎರಡಾಗಿ ಸೀಳುತ್ತದೆ. ಆಧ್ಯಾತ್ಮಿಕ ಜೀವನವೊಂದೇ ಹಣದ ಪ್ರಭಾವವನ್ನು ಕಡಿಮೆಗೊಳಿಸಬಲ್ಲುಂಥದು. ಆಧ್ಯಾತ್ಮಿಕ ಚಿಂತನೆಯು ನಡುವೆಯೂ ಹಣದ ಬಲವನ್ನು ಗುರುತಿಸಿ ಕವಿಗಳು ವರ್ಣನೆಮಾಡಿದ್ದಾರೆ. ಹಣದಿಂದಾಗುವ ವಿವಿಧರೀತಿಯ ವ್ಯವಹಾರಗಳನ್ನು ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ.

ಸಾಂಸ್ಕೃತಿಕ ಅಧ್ಯಯನ ಮಾಡುವಾಗ ಆರ್ಥಿಕ ವ್ಯವಸ್ಥೆಯನ್ನು ತಿಳಿದು ಅದರ ಪ್ರಭಾವ ಸಮಾಜದ ಮೇಲೆ ಎಷ್ಟಿದೆ ಎಂಬುದನ್ನೂ ಪರಿಶೀಲಿಸುವುದು ಅಗತ್ಯ. ಹಣಗಳಿಸುವುದು ಮಾನವನ ಸಂಸ್ಕೃತಿಯ ಕಲಿಕೆಗಳಲ್ಲಿ ಒಂದು. ಆದಿವಾಸಿ ಸಮಾಜಗಳಲ್ಲೂ ವಿವಾಹ ಪದ್ಧತಿ ಮೊದಲುಗೊಂಡು ಅನೇಕ ವ್ಯವಸ್ಥೆಗಳಲ್ಲಿ ಹಣದ ವ್ಯವಹಾರವೂ ಅಡಗಿರುತ್ತದೆ. ಕನ್ಯಾಶುಲ್ಕ, ವರದಕ್ಷಿಣೆ ಮುಂತಾದವು ಆರ್ಥಿಕವ್ಯವಸ್ಥೆಯ ಭಾಗವೇ ಆಗಿರುತ್ತವೆ.

ಆಸ್ತಿಯ ಕಲ್ಪನೆ ಕಾಲಕಾಲಕ್ಕೆ ಬದಲಾಗುತ್ತಿರುತ್ತದೆ. ಪಶುಪಾಲನೆ ಮುಖ್ಯವೃತ್ತಿಯಾಗಿದ್ದ ಆದಿವಾಸಿ ಜನರಲ್ಲಿ ದನಕುರಿಗಳೇ ಆಸ್ತಿ. ಬೇಸಾಯ ಮುಖ್ಯವೃತ್ತಿಯಾದ ಮೇಲೆ ಭೂಮಿಯೇ ಆಸ್ತಿ ; ಭೂಮಾಲಿಕರೇ ಆಸ್ತಿವಂತರು. ಈಗಿನ ಕಾಲದಲ್ಲಿ ವ್ಯಾಪಾರಿಗಳೇ ಎಲ್ಲರಿಗಿಂತ ಸಿರಿವಂತರು. ಮನುಷ್ಯನ ಲೌಕಿಕ ಜೀವನವನ್ನು ನಿರ್ಧರಿಸುವ ಹಣ, ಆಸ್ತಿಗಳು ಯಾವುದೇ ಕಾಲದಲ್ಲಾದರೂ ಕವಿಗಳ ಗಮನಕ್ಕೆ ಬರದಿರುವುದಿಲ್ಲ.

---

[1] ವಿಜಾತುಲನ್ನಿಯು ವೃಥಾ ವೃಥಾ
ಅಜಾಮಿಳಾದುಲ ಕದಿಯೇ ಜಾತಿ
ಜಾತಿಭೇದಮುಲು ಶರೀರಗುಣಮುಲು
ಜಾತಿ ಶರೀರಮು ತೋಡನೆ ಚೆಡು
ಆತುಮ ಪರಿಶುದ್ಧಂ ಚೆಪ್ಪುಡುನು ಅದಿ ನಿರ್ದೋಷಮುಬನಾದಿ
ಯಾತಲ ಹರಿ ವಿಜ್ಞಾನಪು ದಾಸ್ಯಂಬಿದಿಯೊಕ್ಕಟೇಪೋ ಸುಜಾತಿ
(ಅಧ್ಯಾ. ಸಂ., ಭಾಗ 2, ಪು. 28).

ಸಮಾಜಕ್ಕೆ ದೂರವಾಗಿ ಊಹೆಗಳಲ್ಲಿ ಕವಿ ಪರಿಭ್ರಮಿಸುತ್ತಿದ್ದರೂ ಸುತ್ತಮುತ್ತಲಿನ ವ್ಯವಹಾರಗಳನ್ನು ಎಲ್ಲಾದರೂ ಒಂದುಕಡೆ ಪ್ರತಿಬಿಂಬಿಸಲೇ ಬೇಕಾಗುತ್ತದೆ. ಪುರಂದರ ದಾಸರು ಮತ್ತು ಅನ್ನಮಾಚಾರ್ಯರು ಆರ್ಥಿಕವ್ಯವಸ್ಥೆಯ ಬಗೆಗೆ ಹೆಚ್ಚಿನ ಆಸಕ್ತಿ ವಹಿಸದಿದ್ದರೂ ಕೆಲವು ಕಡೆ ಸಂದರ್ಭವಶದಿಂದ ಸಿರಿತನ-ಬಡತನ, ಆಸ್ತಿ-ಪಾಸ್ತಿ, ಸಾಲ-ಸೋಲ, ವಾಪಾರ-ವ್ಯವಹಾರ ಮುಂತಾದವನ್ನು ಉಲ್ಲೇಖಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯದಲ್ಲಿ ವ್ಯಾಪಾರ ಹೇಗೆ ನಡೆಯುತ್ತಿತ್ತು ಎಂಬುದನ್ನು ಪುರಂದರದಾಸರು ಮತ್ತಿತರ ಕವಿಗಳಲ್ಲದೆ ವಿದೇಶೀಯಾತ್ರಿಕರು ತಮ್ಮ ಬರೆಹಗಳಲ್ಲಿ ವರ್ಣಿಸಿದ್ದಾರೆ. ವಿಜಯನಗರದ ಅಂಗಡಿಗಳಲ್ಲಿ ಮಾರಾಟವಾಗುತ್ತಿದ್ದ ವಸ್ತುಗಳನ್ನು ನೋಡಿ ವಿಸ್ಮಯಗೊಂಡ ಪಾಯೇಸನು ಆ ವೈಭವವನ್ನು ವರ್ಣಿಸುವುದು ಅಸಾಧ್ಯ ವೆಂದಿದ್ದಾನೆ (ಪ್ರ. ಕಂ. ಇಂ., ಭಾಗ 2, 369-70).

ಪುರಂದರದಾಸರ ಕೀರ್ತನೆಗಳಲ್ಲಿ ಹಣಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ನೋಡಬಹುದು. ಬಡವರು ಮತ್ತು ಶ್ರೀಮಂತರನ್ನು ಉಲ್ಲೇಖಿಸುವಾಗ ಆಧುನಿಕ ಭಾವಗಳ ಒರೆಗಲ್ಲಿಗೆ ಹಚ್ಚಿ ಅವರ ಅಭಿಪ್ರಾಯಗಳನ್ನು ವಿಮರ್ಶಿಸುವುದು ಸಾಧ್ಯವಿಲ್ಲ. "ಬಡವನಾಗಿ ಕೇಡುಬುದ್ಧಿಯ ಬಿಟ್ಟು ನಡೆಯ ಕಂಡು ಪಡಕೊಳ್ಳಣ್ಣ" (3-17) ಎಂಬುದರಲ್ಲಿ ಬಡವರಿಗೆ ಬುದ್ಧಿವಾದ ಹೇಳಿದರೂ "ಬಲ್ಲಿದ ನೀನೆಂದು ಬಡವರ ಬಾಯನು ಬಡಿಯದಿರೆಚ್ಚರಿಕೆ" (5-125) ಎಂಬುದರಲ್ಲಿ ಶ್ರೀಮಂತರಿಗೆ ಸ್ವಲ್ಪ ಕಟು ವಾಗಿಯೇ ಬುದ್ಧಿವಾದ ಹೇಳಿದ್ದಾರೆ.

ವ್ಯಾಪಾರ ವರ್ಣನೆಗಳಲ್ಲೆಲ್ಲ ಪ್ರಖ್ಯಾತವಾದುದು "ವ್ಯಾಪಾರವೆನಗಾಯಿತು" ಎಂಬ ಕೀರ್ತನೆ. ಇದು ಪುರಂದರದಾಸರ ವೈಯಕ್ತಿಕ ಜೀವನದ ಮೇಲೆ ಬೆಳಕು ಚೆಲ್ಲಲಿ ಚೆಲ್ಲದಿರಲಿ, ವ್ಯಾಪಾರದ ಲೆಕ್ಕಗಳಿಗೆ ಬೇಕಾದ ಕಾಗದ. ಲೆಕ್ಕಣಿಕೆ ಮುಂತಾದವನ್ನು ತಿಳಿಸುತ್ತದೆ. ಈ ಕೀರ್ತನೆಯಲ್ಲಿ ಲೌಕಿಕ ವ್ಯಾಪಾರಕ್ಕಿಂತ ಶ್ರೀಪತಿಪಾದಾರವಿಂದ ಸೇವೆ ಎಂಬ ವ್ಯಾಪಾರವೇ ಮುಖ್ಯ ಎನ್ನುವುದು ಸ್ಪಷ್ಟ. "ಬಿಳಿಯ ಕಾಗದ ಹೃದಯ, ಬಾಯಿ ಕಮಲದಾನಿ, ನಾಲಿಗೆ ಎಂಬ ಲೆಕ್ಕಣಿಕೆ" (2-133). ಆಧ್ಯಾತ್ಮಿಕ ಹಿನ್ನೆಲೆ ಇಂಥ ಅನೇಕ ಕೀರ್ತನೆಗಳಲ್ಲಿ ಎದ್ದು ಕಾಣುತ್ತದೆ. "ರಾಮನಾಮಾಮೃತವ ಕೊಂಬವರೆಲ್ಲ ಪ್ರೇಮದಿಂದ ಚ್ಯುತ ಪೇಟೆಗೆ ಬನ್ನಿರೆ" (6-67) ಎಂದು ಹೇಳಿದಾಗಲೂ ಇದು ಸ್ಪಷ್ಟವಾಗಿದೆ. 'ಅಚ್ಯುತ' ಪದ ಸಾರ್ಥಕವಾಗಿದೆ. ಚ್ಯುತಿಯಿಲ್ಲದ ಪೇಟೆಯಲ್ಲಿ ರಾಮನಾಮಾಮೃತ ನಿರಂತರ ವಾಗಿ ಸಿಕ್ಕುವುದರಲ್ಲಿ ಆಶ್ಚರ್ಯವಿಲ್ಲ. ಪುರಂದರದಾಸರು ಹೇಳುವ ವ್ಯಾಪಾರ ಪೇಟೆಯಲ್ಲಿ ಮಾತ್ರ ಸಾಗುವಂಥದಲ್ಲ.

ತನುವೆಂಬ ದೊಡ್ಡ ದೋಣಿಯಲಿ
ಹರಿನಾಮವೆಂಬ ಬಂಡವ ತುಂಬಿ
ವ್ಯವಹಾರನು ಮಾಡುವೆನಯ್ಯ
ಇಂದ್ರಿಯಗಳೆಂಬ ಸುಂಕಿಗರು ಅಡ್ಡಾದರೆ.....(6-75)

ಇದರಲ್ಲಿ ದೋಣಿಗಳಲ್ಲಿ ಸಾಗುತ್ತಿದ್ದ ವ್ಯಾಪಾರದ ಸೂಚನೆ ಮಾತ್ರವಲ್ಲದೆ ಸುಂಕಿಗರನ್ನು ಕುರಿತ ಸೂಚನೆಕೂಡ ಕಂಡುಬರುತ್ತದೆ. ಲೌಕಿಕ ವಸ್ತುಗಳನ್ನು, ವ್ಯಕ್ತಿಗಳನ್ನು ಆಧ್ಯಾತ್ಮಿಕ ಸಾಧನೆಯ ಹೋಲಿಕೆಗಾಗಿ ಬಳಸಿಕೊಳ್ಳುವುದರಲ್ಲಿ ಕೀರ್ತನಕಾರರು ತೋರಿದ ಜಾಣ್ಮೆ ಗಮನಿಸತಕ್ಕದ್ದು. ಸುಂಕದ ಪ್ರಸ್ತಾವನೆ ಇನ್ನೂ ಅನೇಕ ಕೀರ್ತನೆಗಳಲ್ಲಿ ಬರುತ್ತದೆ. 'ಹಾಲ ಸುಂಕವ ಬೇಡುವ' ಕೃಷ್ಣನನ್ನು ವರ್ಣಿಸಲಾಗಿದೆ (ಉ. ಪ್ರ., ಭಾಗ 1, ಪು. 38). ಸುಂಕವಿಲ್ಲದ ಭಕ್ತಿತತ್ತ್ವವಿದೆ. ಅದನ್ನು ಹೇಳಲೂ ವ್ಯಾಪಾರವನ್ನೇ ಹೋಲಿಕೆಯಾಗಿ ತೆಗೆದುಕೊಂಡು ದಾಸರು ಹೀಗೆನ್ನುತ್ತಾರೆ :

ಕಲ್ಲುಸಕ್ಕರೆಕೊಳ್ಳಿರೊ ನೀವೆಲ್ಲರು
ಕಲ್ಲುಸಕ್ಕರೆ ಕೊಳ್ಳಿರೊ

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೊಳ್ ತುಂಬುವುದಲ್ಲ
ಎತ್ತಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿಲಾಭ ಬರುವಂಥ.... (ಉ. ಪ್ರ. ಭಾಗ 1, ಪು. 54).

ಪ್ರಸ್ತಾವವಶದಿಂದ ಬೇರೆ ಬೇರೆ ವ್ಯಾಪಾರಗಳನ್ನು ದಾಸರು ಸೂಚಿಸಿದ್ದಾರೆ. ಒಂದೆಡೆ ಹರಿನಾಮವನ್ನು ಹಣ್ಣಿಗೆ ಹೋಲಿಸಿ ತಾವು ಅದರ ಮಾರಾಟಗಾರರಾಗಿ 'ಹಣ್ಣ ಕೊಳ್ಳಿರೊ' ಎಂದು ಕೂಗಿ ಕರೆದಿದ್ದಾರೆ (3-65).

ವೈರಾಗ್ಯಭಾವ ಬೆಳೆದ ಮೇಲೆ ರೊಕ್ಕದಿಂದಾಗುವ ಅನಾಹುತಗಳು ಮನಸ್ಸಿಗೆ ಬರುತ್ತವೆ. ಪುರಂದರದಾಸರ ಜೀವನದಲ್ಲಿ ಹಣದಾಸೆ ನಡೆಸಿದ ಆಟ, ಅನಂತರ ಅದರ ಅರಿವಾಗಿ ವೈರಾಗ್ಯ ಹುಟ್ಟಿದ ಬಗೆಯನ್ನು ಕುರಿತಂತೆ ಹಲವು ಐತಿಹ್ಯಗಳು ಪ್ರಚಾರದಲ್ಲಿವೆ. "ಏಕೆ ಮೂರ್ಖನಾದ್ಯೋ ರೊಕ್ಕವಾದರೂ ಗಳಿಸಿಕೊಂಡು" (ಉ. ಪ್ರ., ಭಾಗ 1, ಪು. 22) ಮುಂತಾದ ಮಾತುಗಳು ದಾಸರ ಪ್ರಾರಂಭ ಜೀವನದ ಪುಟಗಳನ್ನು ಸ್ವಲ್ಪಮಟ್ಟಿಗಾದರೂ ತೆರೆಯುತ್ತವೆ. ಹಣ ಯಾರ್ಯಾರನ್ನು ಹೇಗೆ ಹೇಗೆ ಆಡಿಸುತ್ತವೆ ಎಂಬುದನ್ನು ಕೆಲವು ಕೀರ್ತನೆಗಳಲ್ಲಿ ದಾಸರು ವರ್ಣಿಸಿದ್ದಾರೆ. ರೊಕ್ಕ ಎಲ್ಲವನ್ನೂ ಕಲಿಸುತ್ತದೆ. ನೆಂಟರನ್ನು ಮರೆಸುತ್ತದೆ, ಇಲ್ಲದ ಗುಣಗಳನ್ನು ಕಲಿಸುತ್ತದೆ. ಬೆಲ್ಲಕ್ಕಿಂತ ಸವಿಯಾಗಿದ್ದು ಸಲ್ಲದ ನಾಣ್ಯವನ್ನು ಕೂಡ ನಡೆಸುತ್ತದೆ. "ರೊಕ್ಕ ಎರಡಕ್ಕು ದುಃಖ ಕಾಣಕ್ಕ" (ಹ. ಕೀ. ತ., ಪು. 136) ಎಂಬ ಕೀರ್ತನೆಯಲ್ಲಿ ಹಣದ ಪ್ರಭಾವವನ್ನು ದಾಸರು ಚಿತ್ರಿಸಿದ್ದಾರೆ.

ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ ಕಟ್ಟಳೆ-ಕಂದಾಯ (3-135) ಮುಂತಾದವನ್ನು ಕೂಡ ದಾಸರು ತಮ್ಮ ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. ಸಾಲಕೊಡುವುದು, ತೆಗೆದುಕೊಳ್ಳುವುದು ಈ ವ್ಯವಸ್ಥೆಯಲ್ಲಿ ಒಂದು ಭಾಗ. ಇದನ್ನು ದಾಸರು ಶ್ರೀಕೃಷ್ಣನನ್ನು ನಿಂದಾಸ್ತುತಿ ಮಾಡುತ್ತ ಹೀಗೆನ್ನುತ್ತಾರೆ :

ಕೊಟ್ಟು ಹೋಗೆನ್ನ ಸಾಲವ ಕಣ್ಣ
ಬಿಟ್ಟರಂಜುವನಲ್ಲ ಪೊರುಕಲ್ಲ ಕೃಷ್ಣ
ಏಳುವರ್ಷದ ಬಡ್ಡಿ ಮೂಲ ಸಹಿತವಾಗಿ
ತಾಳುವನಲ್ಲೇಕೊ ತಿರುಕ ಮುಂಡಾಳಿ (ಉ. ಪ್ರ., ಭಾಗ 1, ಪು. 46)

ಸಾಲವನ್ನು ಕೊಡುವ ಹಣವಂತರಿಗೆ 'ಆಧಾರವಿಲ್ಲದೆ ಸಾಲ ಕೊಡುವುದು ಕಷ್ಟ' ಎಂದು ಹೇಳಿದ್ದಾರೆ (5-148). ಸಾಲಕೊಟ್ಟರೆ ಬಡ್ಡಿಕೊಡಬೇಕೆನ್ನುವ ವ್ಯವಹಾರ ಅಂದಿಗೂ ಇಂದಿಗೂ ಇದ್ದೇ ಇದೆ. ಸಾಲವನ್ನು ತೆಗೆದುಕೊಂಡು ಅದನ್ನು ಹಿಂತಿರುಗಿಸದೆ ಭಂಡಾಟ ಮಾಡಿಕೊಂಡು ತಿರುಗುವವರನ್ನು "ಕೊಟ್ಟ ಸಾಲವ ಕೊಡದೆ ಭಂಡಾಟ ಮಾಡುತಿಹನೆ, ಎಷ್ಟು ಕೇಳಿದರೆನಗೆ ಓಯೆನ್ನದಿಹನೆ" (4-104) ಎಂದು ಮೂದಲಿಸುತ್ತಾರೆ. ಉದ್ಯೋಗಿಗಳು ಸಂಬಳ ತೆಗೆದುಕೊಳ್ಳುವಂಥದನ್ನೂ ಧಾರ್ಮಿಕ ಹಿನ್ನೆಲೆಯಿಂದಲೇ ವರ್ಣಿಸಿರುವುದನ್ನು ಕಾಣುತ್ತೇವೆ. 'ಧರ್ಮವೆಂಬ ಸಂಬಳವ ಗಳಿಸಿ ಕೊಳ್ಳಿರೋ' (5-32) ಎಂದು ಬೋಧಿಸುತ್ತಾರೆ.

ಅನ್ನಮಾಚಾರ್ಯರಲ್ಲೂ ಸಮಕಾಲೀನ ಆರ್ಥಿಕ ವ್ಯವಸ್ಥೆಯನ್ನು ಕುರಿತ ವಿವಿಧ ಉಲ್ಲೇಖಗಳನ್ನು ಕಾಣಬಹುದು. ಮಹಾಲಕ್ಷ್ಮಿಯ ಶಕ್ತಿ ಎಂಥದೆಂಬುದನ್ನು ಒಂದು ಕೀರ್ತನೆಯಲ್ಲಿ ವಿವರಿಸಿದ್ದಾರೆ : "ರೂಕ, ಮಾಡ, ರುವ್ವ[1]ಗಳಾಗಿ ತಿರುಗುವಳು. ಬಚ್ಚಿಟ್ಟ ಕಡೆ ಅವಳು ಇರುವವಳಲ್ಲ. ಒಬ್ಬನನ್ನು ಅರಸನನ್ನಾಗಿ ಇನ್ನೊಬ್ಬನನ್ನು ಸೇವಕನನ್ನಾಗಿ ಸುವಳು. ಒಬ್ಬರು ಕಂಡ ಕನಸು ಬೇರೊಬ್ಬರು ನಂಬುವಂತೆ ಮಾಡುವಳು. ಒಂದು ಕಡೆ ಇರುವ ಧಾನ್ಯ ಇನ್ನೊಂದು ಕಡೆಗೆ ಹೋಗುವಂತೆ ಮಾಡುವಳು."[2] ಯಾವುದೇ ವ್ಯಾಪಾರ ಮುಂತಾದ ನೀರಸ ವಿಷಯಗಳನ್ನೂ ಶೃಂಗಾರಾದಿ ರಸಗಳು ಅದರಲ್ಲಿ ಒಸರುವಂತೆ ಮಾಡಬಲ್ಲ ಜಾಣ್ಮೆ ಆಚಾರ್ಯರದು. "ಈ ಕಾಮಿನಿಯ ಲಾವಣ್ಯ ಜಲಧಿಯಲ್ಲಿ ಹಡಗುಗಳ ಮೇಲೆ ಕೋರಿಕೆಗಳು ಬಂದಿವೆ. ಶಂಕೆಬಿಟ್ಟು ತವಕದ ಸರಕುಗಳನ್ನು ತಂದಿದ್ದಾಳೆ. ಸುಂಕದ ಆದಾಯವನ್ನು ಎಣಿಸಿಕೊ"[3] ವಿಜಯನಗರ ಕಾಲದಲ್ಲಿ ಹಡಗುಗಳ

---

[1] ಆ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳು.

[2] ರೂಕಲೈ ಮಾಡಲೈ ರುವ್ವಲೈ ತಿರಿಗೀನಿ
ದಾ ಕೊನಿ ಉನ್ನಚೋಟ ತಾನುಂಡದದಿವೋ
ಒಕರಿ ರಾಜುಜೇಸು ನೊಕರಿ ಬಂಟುಗಜೇಸು
ಒಕರು ಕನ್ನಕಲ ವೇರೊಕರಿ ನಮ್ಮಿಂಚು
ಒಕ ಚೋಟ ನುನ್ನ ಧಾನ್ಯಮೊಕಚೋಟ ವೇಯಿಂಚು
ಪ್ರಕಟಿಂಚಿ ಕನಕಮೇ ಭ್ರಮಿಯಿಂಚೀ ಜಗಮು (ಅಧ್ಯಾ. ಸಂ., ಭಾಗ 2, ಪು. 25).

[3] ಲಂಕೆಲ್ಯ ಯಾ ಕಾಮಿನಿ ಲಾವಣ್ಯ ಜಲಧಿಲೋನ
ವುಂಕುವ ಕೋರಿಕಲು ವೋಡಲ ವಚ್ಚೆನು
ಸಂಕೆಲೇಕ ತಮಕಪು ಸರಕುಲುಪಚಾರಿಂಚಿ
ಸುಂಕಪುಟಾದಾಯಮು ಲೆಂಚುಕೋನಗದಯ್ಯ (ಶೃಂ. ಸಂ., 29, ಪು. 356).

ಮೇಲೆ ಸರಕುಗಳನ್ನು ತರುತ್ತಿದ್ದರೆಂದೂ ಆ ಸರಕುಗಳ ಮೇಲೆ ಸುಂಕ ವಿಧಿಸುತ್ತಿದ್ದರೆಂದೂ ಇದರಿಂದ ತಿಳಿದುಬರುತ್ತದೆ.

ಸರಕುಗಳ ಮೇಲೆ ಸುಂಕ ವಿಧಿಸುವುದು, ಅದಕ್ಕಾಗಿಯೇ ಉದ್ಯೋಗಿಗಳನ್ನು ನಿಯಮಿಸುವುದು ಆ ಕಾಲದಲ್ಲೂ ಇತ್ತೆಂದು ಇವರಿಬ್ಬರು ಕವಿಗಳ ಕೀರ್ತನೆಗಳಿಂದ ಸ್ಪಷ್ಟವಾಗುತ್ತದೆ. ಆದರೆ ಸುಂಕ ವಿಧಿಸುವುದು ಎಲ್ಲರಿಗೂ ಒಂದೇ ರೀತಿ ಇರುತ್ತಿರಲಿಲ್ಲ. ಹಣವಂತರಿಗೆ ಮತ್ತು ಅಧಿಕಾರಿಗಳಿಗೆ ಒಂದು ನೀತಿ, ಸಾಮಾನ್ಯರಿಗೆ ಇನ್ನೊಂದು ನೀತಿ ಇದ್ದುದನ್ನು ಅನ್ನಮಾಚಾರ್ಯರು ಗಮನಿಸಿದ್ದರು. "ಶ್ರೀಮಂತನಾದ ರಾಜ ಏನು ಮಾಡಿದರೂ ಅಪರಾಧವಲ್ಲ. ಪರಮಾಧಿಕಾರಿಯಾದರೆ ಪಾಪವಲ್ಲ. ಯಾವನಾದರೂ ತನಗೆ ತಾನೇ ಅನುಮಾನಿಸಿಕೊಂಡನೆಂದರೆ ಬೀದಿಯಲ್ಲಿ ಹೋಗುವ ಸುಂಕಿಗರಿಗೆ ತಿಳಿಸಿದಂತಾಗುತ್ತದೆ"[1] ಎಂದಿದ್ದಾರೆ. ಹೆದರುವ ಸಾಮಾನ್ಯನನ್ನು ಬೀದಿಯಲ್ಲಿ ಹೋಗುವ ಸುಂಕದವನೂ ಬಂದು ಪೀಡಿಸುತ್ತಾನೆ ಎಂಬ ಸಂಗತಿ ಇಂದಿಗೂ ಬದಲಾಗಿಲ್ಲ. ಅಧಿಕಾರ ವ್ಯವಸ್ಥೆ ಹೇಗಿತ್ತು ಎಂಬುದು ಇದರಿಂದ ಗೊತ್ತಾಗುತ್ತದೆ.

ಸಾಲಮಾಡುವುದು, ಅದರ ಪರಿಣಾಮಗಳನ್ನು ಅನುಭವಿಸುವುದು ಯಾವ ಸಂಸಾರಿಗೂ ತಪ್ಪಿದ್ದಲ್ಲ. ಸಾಲಮಾಡದೆ ಇರುವುದಾದರೆ ದುಡ್ಡು ಹೆಚ್ಚಿಲ್ಲದಿದ್ದರೂ ಪರವಾಯಿಲ್ಲ. ತಪ್ಪದೆ ಬರುವ ಸಂಬಳವಾದರೆ ಕಡಿಮೆಯಾದರೂ ಚಿಂತೆಯಿಲ್ಲ. ಸಂಸಾರಿಯ ಈ ಅಭಿಪ್ರಾಯವನ್ನು ಒಂದೆಡೆ ಅನ್ನಮಾಚಾರ್ಯರು ಅಭಿವ್ಯಕ್ತಿಸಿದ್ದಾರೆ.[2]

ಲಂಚಕೋರರ ಕಾಟ ಆಚಾರ್ಯರ ಕಾಲದಲ್ಲೂ ಸಾಕಷ್ಟಿತ್ತು. ವಿಜಯನಗರ ಕಾಲದ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರಿಗಳ ಪಾತ್ರ ಗಣನೀಯವಾಗಿತ್ತು. ಆದರೆ ಲಂಚ ಪಡೆಯುವ ಅಧಿಕಾರಿಗಳಿಗೆ ಸುಖವಿತ್ತೇ ಎಂದು ಕೇಳಿದರೆ ಇಲ್ಲವೆಂದೆನ್ನುತ್ತಾರೆ ಆಚಾರ್ಯರು. ಈ ದೇಹದ ಸುಖಕ್ಕಾಗಿ ಲಂಚವನ್ನು ಪಡೆಯುವ ಸುಖ, ಕೆಳಗೆ ಬಿದ್ದು ಪರರ ಬಾಗಿಲು ಕಾಯುವ ಸುಖ, ಹಂದಿಯಂತೆ ತನ್ನಷ್ಟಕ್ಕೆ ತಾನೇ ಬದುಕುವ ಸುಖ ಇವೆಲ್ಲ ಒಂದೇ ಎಂದು ಅನ್ನಮಯ್ಯ ಹೇಳುತ್ತಾರೆ.[3]

---

1 ಸಿರುಲ ರಾಜೈತೇ ಸೇಮಿ ಸೇಸಿನ ನೇರಮಿಲೇದು
ಪರಮಾಧಿಕಾರಿಯೈತೇ ಪಾಪಮು ಲೇದು
ಅರಸಿ ತನಕು ತಾನೇ ಅನುಮಾನಿಂಚುಕೊನೆನಾ
ತೆರುವೇ ಪೋಯೇ ಸುಂಕರಿದಲಿಪಿನಟ್ಲವುನು (ಅಧ್ಯಾ. ಸಂ., 2, ಪು. 20).

2 ಅಪ್ಪುಲೇನಿ ಸಂಸಾರಮ್ಮೈನ ಪಾಟೇಚಾಲು
ತಪ್ಪುಲೇನಿ ಜೀತಮೊಕ್ಕ ತಾರಮ್ಮೈನ ಜಾಲು (ಅಧ್ಯಾ. ಸಂ.. 1, ಪು. 78).

3 ಬೊಂದಿಕಿನಿ ಲಂಚಂಬು ಪುಣಿಕೇಟಿ ಸುಖಮು
ಕಿಂದುಪಡಿ ಪರುಲ ಮುಂಗಿಲಿಗಾಚು ಸುಖಮು
ಪಂದಿವಲೆ ತನುದಾನೆ ಬ್ರದಿಕೇಟಿ ಸುಖಮು (ಅನ್ನ. ಸಂ., 1, ಪು. 93).

ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಬರೆದಿರುವ ಮೇಲಿನ ಕೆಲವು ಕೀರ್ತನೆಗಳನ್ನು ಪರಿಶೀಲಿಸಿದಾಗ ಇಬ್ಬರಿಗೂ ಸಮಾನ ಅಭಿಪ್ರಾಯವಿತ್ತು ಎಂಬುದು ತಿಳಿದುಬರುತ್ತದೆ. ಹಣದ ವ್ಯವಹಾರದ ಬಗೆಗೆ ಸಾಮಾನ್ಯ ಜನರಿಗಿದ್ದ ಅಭಿಪ್ರಾಯವನ್ನೇ ಇವರಿಬ್ಬರೂ ವ್ಯಕ್ತಪಡಿಸಿದ್ದಾರೆ. ಆರ್ಥಿಕ ವ್ಯವಸ್ಥೆಯ ಭಾಗವಾಗಿರುವ ಹಣದ ವ್ಯವಹಾರ, ಸುಂಕ, ಸಾಲ ಇತ್ಯಾದಿಗಳ ಸಂದರ್ಭ ಬಂದಾಗ ಸಾಮಾನ್ಯ ಸಂಸಾರಿಯೊಬ್ಬನ ದೃಷ್ಟಿಯಿಂದಲೇ ನಿರೂಪಿಸಿರುವುದನ್ನು ನೋಡಬಹುದು.

## ರಾಜಕೀಯ ವ್ಯವಸ್ಥೆ

ಸಾಮಾಜಿಕ ವ್ಯವಸ್ಥೆಯಲ್ಲಿ ರಾಜಕೀಯ ವ್ಯವಹಾರ ಮತ್ತು ಆಡಳಿತ ವ್ಯವಸ್ಥೆಗಳನ್ನು ಪರಿಶೀಲಿಸಬಹುದು. ಯಾವುದೇ ಸಮಾಜದಲ್ಲಾದರೂ ಜನಸಮುದಾಯ ನಿಯಮ ಪಾಲನೆ ಮಾಡಲು ಆಡಳಿತ ವ್ಯವಸ್ಥೆಯೊಂದನ್ನು ಏರ್ಪಡಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ನಾಗರಿಕ ಸಮಾಜದಲ್ಲಿ ಸಂಕೀರ್ಣವಾದ, ಬದಲಾದ, ವೈವಿಧ್ಯಪೂರ್ಣವಾದ ರಾಜಕೀಯ ವ್ಯವಸ್ಥೆಗಳನ್ನು ಗಮನಿಸಬಹುದು. ವಿಜಯನಗರ ಸಾಮ್ರಾಜ್ಯದ ರಾಜಕೀಯ ವ್ಯವಸ್ಥೆ ವಿಸ್ತಾರವಾದುದು ಮತ್ತು ಪ್ರತ್ಯೇಕವಾಗಿ ಪರಿಶೀಲಿಸಲು ಅರ್ಹವಾದುದು. ಎರಡು ಶತಮಾನಗಳಿಗಿಂತ ಹೆಚ್ಚು ಕಾಲ ಅಸ್ತಿತ್ವದಲ್ಲಿದ್ದು ಇಡೀ ದಕ್ಷಿಣ ಭಾರತದ ಮೇಲೆ ತನ್ನ ಪ್ರಭಾವ ಬೀರಿದ ವಿಜಯನಗರ ಸಾಮ್ರಾಜ್ಯದ ಕೆಲವು ಮುಖಗಳನ್ನು ಮಾತ್ರ ಕೀರ್ತನೆಗಳಲ್ಲಿ ಕಾಣಬಹುದು. ವಿಜಯನಗರ ಸಾಮ್ರಾಜ್ಯವನ್ನು ಕುರಿತಂತೆ ಅನೇಕ ಪುಸ್ತಕಗಳೂ ಲೇಖನಗಳೂ ಪ್ರಕಟವಾಗಿರುವುದರಿಂದ ಅವನ್ನೇ ಮತ್ತೆ ಹೇಳದೆ, ದಾಸರು ಮತ್ತು ಆಚಾರ್ಯರು ಹೇಳಿರುವ ಸಾಮಾನ್ಯ ರಾಜಕೀಯ ವ್ಯವಸ್ಥೆ ಮತ್ತು ಆಡಳಿತ ವಿಚಾರಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗಿದೆ.

ಪುರಂದರದಾಸರು ಶ್ರೀಕೃಷ್ಣದೇವರಾಯನ ಕಾಲದಲ್ಲಿ ಬಾಳಿದವರು. ಅದು ವಿಜಯನಗರ ಸಾಮ್ರಾಜ್ಯದ ವೈಭವೋಪೇತ ಕಾಲ. ಪರಂಪರಾಗತ ಸಾಂಸ್ಕೃತಿಕ ವ್ಯವಸ್ಥೆಯನ್ನು ಕಾಪಾಡಲು ಬದ್ಧಕಂಕಣರಾಗಿದ್ದ ವಿಜಯನಗರ ರಾಜರ ಬಗೆಗಿನ ಕೆಲವು ವಿಷಯಗಳನ್ನು ದಾಸರ ಕೀರ್ತನೆಗಳಲ್ಲಿ ಕಾಣುತ್ತೇವೆ. ಶ್ರೀಕೃಷ್ಣದೇವರಾಯನ ಕಾಲದಲ್ಲಿ ವ್ಯಾಸರಾಯರು ಪ್ರಭಾವ ಬೀರಿದ ಅನೇಕ ಸಂದರ್ಭಗಳಿವೆ. ''ದೇಶಾಧಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂಹಾಸನವೇರಿ ಮೆರೆದೆ ಜಗವರಿಯೆ''(1-6) ಎಂಬುದು ವ್ಯಾಸರಾಯರ ಪಾತ್ರವನ್ನು ಚೆನ್ನಾಗಿ ತಿಳಿಸುತ್ತದೆ. ಹೀಗೆ ನಿರ್ದಿಷ್ಟವಾಗಿ ತಮ್ಮ ಕಾಲದ ವಿಷಯಗಳನ್ನು ಹೇಳುವುದರ ಜೊತೆಗೆ ರಾಜಕೀಯ ವ್ಯವಸ್ಥೆಯ ಸಾಮಾನ್ಯ ವಿಷಯಗಳನ್ನೂ ದಾಸರು ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ''ತಪ್ಪುಕಾಣಿಕೆ ಕಪ್ಪವನು ಸಮಸ್ತ ದ್ವೀಪಗಳಿಂದ ತರಿಸುವ'' (ಉ. ಪ್ರ., ಭಾಗ 1, ಪು. 51) ಪದ್ಧತಿ ಯಾವ ರಾಜನಿಗಾದರೂ ಒಪ್ಪುವಂಥದೇ.

ರಾಜ್ಯ ವಿಸ್ತಾರಾಕಾಂಕ್ಷೆ, ಮಾತ್ಸರ್ಯ, ಗರ್ವಗಳು ರಾಜನಲ್ಲಿರುವ ಗುಣವೆಂದು ದಾಸರು ಹೇಳುತ್ತಾರೆ. "ಆಳುವ ಅರಸರಿಗೆಲ್ಲ ಕಾಂಚನದಾಸೆ ಮೇಲು ಮೇಲಾಯಿತಯ್ಯ" (5-136) ಎಂಬುದನ್ನು ಈ ಹಿನ್ನೆಲೆಯಲ್ಲೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. ವಸ್ತುನಿಷ್ಠವಾಗಿ ಹೇಳಿದ ಇಂಥ ಮಾತುಗಳು ಕೆಲವೆಡೆ ಇದ್ದರೆ ಇನ್ನು ಕೆಲವು ಕಡೆ ನೇರವಾಗಿ ತಿಳಿವಳಿಕೆ ನೀಡುವ ಮಾತುಗಳೂ ಇವೆ. "ಭಾಗ್ಯ ಎಂಬುದು ಸ್ಥಿರವಲ್ಲ. ಅದನ್ನು ನೆಚ್ಚದಿರಿ" ಎಂದು ಬುದ್ಧಿವಾದ ಹೇಳುತ್ತಾ "ಪೊಡವಿಪರೊಲುಮೆ ಸುಸ್ಥಿರವೆಂದು ಗರ್ವದಿ ನಡೆಯದಿರೆಚ್ಚರಿಕೆ" (5-97) ಎಂದಿದ್ದಾರೆ. "ಅಡಿತಪ್ಪುವ ನೃಪನ ಆಶೆ ಮಾಡಲುಬೇಡ" (5-147) ಎಂಬುದೂ ಈ ತರಹದ್ದೇ. "ಈ ಪರಿಯ ಅಧಿಕಾರ ಒಲ್ಲೆನಾನು" ಎಂಬ ಕೀರ್ತನೆಯಲ್ಲಿ ವಿಜಯನಗರದ ಅವನತಿಯನ್ನು ಕುರಿತಂತೆ ದಾಸರು ವಿವರಣೆ ನೀಡಿದಂತಿದೆ.

ದಾರಿಯಲಿ ಹೋಗಿ ಬರುವವರ ಉಪಟಳ ಘನ
ಚೋರರಟ್ಟುಳಿಗಂತೂ ನೆಲೆಯೆ ಇಲ್ಲ
ವೈರಿ ವರ್ಗದ ಜನರು ಒಳಗೆ ಬಲು ತುಂಬಿಹರು
ಮೀರಿ ನಿನ್ನಲಿ ಮನವನೂರಿ ನಿಲಗೊಡರು....

ಕಾಲಕ್ಕೆ ಕರೆಯಬಂದವರಿಗೆ ಒಳಗಾಗಿ
ಪಾಳೆಯವನೊಪ್ಪಿಸಿ ಕೊಡುವೆವೆಂದು
ಆಲೋಚಿಸಿಹರಯ್ಯ ಈಗಲೆನಗೆ ನಿನ್ನ
ಆಳುಗಳ ಬಲಮಾಡಿ ಎನ್ನ ರಕ್ಷಿಸು ದೊರೆಯೆ

ಕ್ಷಣಕೆ ನೂರುಪಟಳ ಈ ಕೋಟೆಗೆಲೊ ರಾಯ
ಅನುವಾದ ದಿವಸವೊಂದಾದರಿಲ್ಲ
ಮೊನೆಗಾರ ಜನವಿಲ್ಲ ಇದ್ದವರು ವಶವಿಲ್ಲ
ಕೊನೆಗೊಂದು ಗ್ರಾಮ ಕಾಪಾಡುವ ತೆರನೆಂತೊ

ಎನಗೆ ಬಹುನಾಯಕರ ಕೂಂಪೆಯೊಳು ವಾಸ
ವನು ಬಿಡಿಸಿ ನಿನ್ನ ನಿಜಪಟ್ಟಣದೊಳು
ಮನೆ ಮಾಡಿಕೊಡಲು ನಾ ನಿನ್ನ ನೋಡಿಕೊಳುತ
ಅನುಗಾಲ ಬದುಕುವೆನೊ ಪುರಂದರ ವಿಠಲ (2-97).

ರಾಜಕೀಯ ವ್ಯವಸ್ಥೆಯಿಂದಾದ ಕೆಲವು ಅನುಭವಗಳನ್ನು "ಯಾಕೆನ್ನ ನೀ ರಾಜ್ಯ ಕೆಳತಂದೆ ಹರಿಯೆ....ಮನ್ನಿಸುವ ದೊರೆಯಿಲ್ಲ ಮನಕೆ ಜಯವಿಲ್ಲ" (ಹ. ಕೀ. ತ., ಪು. 163) ಎಂಬ ಕೀರ್ತನೆಯಲ್ಲಿ ಹೇಳಿದ್ದಾರೆ.

ಅನ್ನಮಾಚಾರ್ಯರು ಕೂಡ ರಾಜಕೀಯ ವ್ಯವಸ್ಥೆಯನ್ನು ಕುರಿತಂತೆ ಅಲ್ಲಲ್ಲಿ ಕೆಲವು ಮಾತುಗಳನ್ನು ಹೇಳಿದ್ದಾರೆ. ಕೆಲವು ರಾಜರು ದೊಡ್ಡ ಪದವಿಗಳಲ್ಲಿ ಹೀನರನ್ನೂ

ನಿಯಮಿಸುತ್ತಿದ್ದರು. ಇದನ್ನು ಕಂಡ ಆಚಾರ್ಯರು ದೇವರನ್ನು ಸಂಬೋಧಿಸಿ ರಾಜರಿಗೂ ಅನ್ವಯಿಸುವಂತೆ ಹೀಗೆಂದರು: "ಹೀನರಾದವರು ನಿನ್ನನ್ನು ಸೇವಿಸಿದರೆ ಘನವಾದ ಪದವಿಗಳಲ್ಲಿ ಅವರನ್ನಿಡುವಂತೆ."[1] ಅನ್ನಮಾಚಾರ್ಯರ ಕಾಲಕ್ಕೆ ಮುಂಚೆಯೂ ಅನಂತರವೂ ಗ್ರಾಮಾಧಿಕಾರಿ ವ್ಯವಸ್ಥೆ ಇತ್ತು. ಗ್ರಾಮಾಧಿಕಾರಿಗಳಿಗೆ ರಟ್ಟಡಿ ಎಂಬ ಹೆಸರಿತ್ತು. ರಟ್ಟಡಿ ಎನ್ನುವುದೂ ರಟ್ಟಗುಂಡಿ ಎಂದೂ ರೆಡ್ಡಿ ಎಂದೂ ಹೆಸರು ಪಡೆದಿತ್ತು ತಿರುಮಲೆಯಲ್ಲಿ ನೆಲಸಿರುವ ವೇಂಕಟೇಶ್ವರನನ್ನು ಆ ಊರಿನ ಮುಖಂಡನೆಂದು ಹೇಳುತ್ತಾ "ರಟ್ಟಡಿ ಶ್ರೀ ವೇಂಕಟರಾಯನಿಕಿ" ಎಂದಿದ್ದಾರೆ. ಒಬ್ಬ ವ್ಯಕ್ತಿಯನ್ನು ಉಲ್ಲೇಖಿಸದೆ ಒಟ್ಟು ರಾಜಕೀಯದ ಸ್ವರೂಪ, ಜನರ ಮೇಲೆ ಅದರ ಪ್ರಭಾವ ಹೇಗಿತ್ತು ಎಂಬುದನ್ನು ಅನ್ನಮಾಚಾರ್ಯರು ನಿರೂಪಿಸಿದ್ದಾರೆ. ಊರಿನ ಮುಖಂಡ ಎಚ್ಚರದಿಂದಿದ್ದರೆ ಆಡಳಿತ ಸುಗಮವಾಗಿ ನಡೆಯುವುದು. ಅವನ ಕಾರ್ಯನಿರ್ವಹಣೆಯಲ್ಲಿ ಲೋಪವಿದ್ದರೆ ಆಡಳಿತ ಕುಂಠಿತವಾಗುವುದು. "ಊರನ್ನಾಳುವವನು ಆಲಸ್ಯದಿಂದ ಸುಮ್ಮನಿದ್ದರೆ ಮಧ್ಯದವರು ತಾವೇ ನಿಜವಾದ ಕರ್ತೃಗಳೆಂಶಿದ್ದ ರೀತಿ, ಧೀರತೆ ಕೆಟ್ಟು ಜೀವಿ ತನ್ನನ್ನು ತಾನು ತಿಳಿಯದಿದ್ದರೆ ಧಾರುಣಿಯಲ್ಲಿ ಅದು ಕಳ್ಳರ ಧರ್ಮಾಸನದಂತೆ ಇರುತ್ತದೆ."[2]

ಅನ್ನಮಾಚಾರ್ಯರು ವೇಂಕಟೇಶ್ವರನನ್ನು ಬಿಟ್ಟು ಬೇರೆ ಯಾವ ದೊರೆಯನ್ನೂ ಸೇವಿಸುವವರಲ್ಲ. ಆದರೂ ಅವರ ಕೀರ್ತನೆಗಳಲ್ಲಿ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸಮಕಾಲೀನ ರಾಜಕೀಯ ವಿಷಯಗಳು ಇಣುಕಿವೆ. ಅವರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಸಂಗಮ ವಂಶದಿಂದ ಸಾಳುವ ವಂಶಜರ ಆಳ್ವಿಕೆಗೆ ಒಳಪಟ್ಟಿತು. ಆದುದರಿಂದ ರಾಜಕೀಯದಲ್ಲಿ ನಡೆಯುವ ಕೆಲವು ದುರಂತಗಳನ್ನು ಅನ್ನಮಯ್ಯ ಉಲ್ಲೇಖಿಸಿದ್ದಾರೆ. "ದೇಹಕೊಟ್ಟವನನ್ನು ಸಾಯಿಸುವವನು ದ್ರೋಹಿಯಾಗದೆ ದೊರೆಯಾದನಂತೆ....ಒಡಹುಟ್ಟಿದವನನ್ನು ಸಾಯಿಸುವವನು ದುಷ್ಟನಾಗದೆ ಶಿಷ್ಟನಾದನಂತೆ.... ಉನ್ನತಮತಿಯಾದ ಮಗನನ್ನು ಕೋರಿ ಸಾಯಿಸುವವನು ಪಾತಕನಾಗದೆ ಘನನಾದಂತೆ

---

[1] ಹೀನುಲೈನವಾರು ನಿಮ್ಮನೇಚಿಕೊಲಿಚಿನ ಘನ
ಮೈನ ಪದವುಲ ಬೆಟ್ಟೇಯೆಟುವಲೆನೇ (ಅಧ್ಯಾ. ಸಂ., ಭಾಗ 1, ಪು. 241).

[2] ಊರೇಲೆಡಿಯತಡಲಸತ ನೂರಕಯುಂಡಗ ನಡುಮಲ
ವಾರಲು ನಿಕ್ಕಪು ಗರ್ತಲವಲೆ ನುಂಡಿನ ಗತಿನಿ
ಧೀರತ ಚೆಡಿ ತನು ಜೀವುಡು ದೆಲಿಯಗನೇರಕ ಯುಂಡಿನ
ಧಾರುಣಿ ಲೋಪಲ ದೊಂಗಲ ಧರ್ಮಾಸನಮಾಯ

(ಅಧ್ಯಾ. ಸಂ., ಭಾಗ 1, ಪು. 49).

....ತಾಯಿಯನ್ನು ಸಾಯಿಸುವವನು ದುಷ್ಟನಾಗದೆ ಎಲ್ಲರಿಗಿಂತ ಹೆಚ್ಚಾದನಂತೆ.''[1] ಸಂಗಮ ವಂಶದ ಕೊನೆಯ ಪಾಲಕರಲ್ಲಿ ವಿಷಯಾಸಕ್ತನಾಗಿದ್ದ ವಿರೂಪಾಕ್ಷರಾಯನನ್ನು ಆತನ ದೊಡ್ಡಮಗ ರಾಜಶೇಖರಾಯ ಕೊಲ್ಲಿಸಿದ. ಈತನನ್ನು ಈತನ ತಮ್ಮ ವಿರೂಪಾಕ್ಷರಾಯ ಕೊಲ್ಲಿಸಿದ. ಬಹುಶಃ ಈ ವಿಷಯಗಳನ್ನೇ ಅನ್ನಮಯ್ಯ ಪ್ರಸ್ತಾವಿಸಿದ್ದಾರೆ.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ನಿರೂಪಿಸಿದ್ದ ಸಾಮಾಜಿಕ ವ್ಯವಸ್ಥೆಯ ಹಲವು ಮುಖಗಳನ್ನು ಪರಿಶೀಲಿಸಿದಾಗ ಆಧ್ಯಾತ್ಮಿಕ ಪರಿಧಿಯೊಳಗೆ ಬರಲು ಸಾಧ್ಯವಾದಷ್ಟು ವಿಷಯಗಳನ್ನು ಅವರು ಉಲ್ಲೇಖಿಸಿದಂತೆ ಕಾಣುತ್ತದೆ. ಮದುವೆ, ಕುಟುಂಬ, ಬಾಂಧವ್ಯ ಮುಂತಾದವು ಅವರು ನೇರವಾಗಿ ಪ್ರಸ್ತಾವಿಸಬೇಕಾದ ವಿಷಯಗಳಲ್ಲ. ಇವುಗಳ ಉಲ್ಲೇಖಕ್ಕೆ ಆತ್ಮನಿಷ್ಠ ಕಾವ್ಯದಲ್ಲಿ ಹೆಚ್ಚಿನ ಅವಕಾಶವಿಲ್ಲ. ಆದರೂ ಸಮಾಜದಲ್ಲೇ ಬಾಳಿ, ಬದುಕಿ ಸಮಾಜದ ಏಳಿಗೆಯ ಕನಸುಕಂಡ ವ್ಯಕ್ತಿಗಳಾಗಿ ಈ ಇಬ್ಬರು ಕೀರ್ತನಕಾರರು ಕೆಲವು ವಿಷಯಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿರುವುದನ್ನು ನೋಡಬಹುದು.

---

[1] ದೇಹಮಿಚ್ಚಿನವಾನಿ ದಿವಿರಿ ಚಂಪೆಡುವಾಡು
ದ್ರೋಹಿಗಾಕ ನೇಡು ದೊರಯಟ....
ತೋಡಬುಟ್ಟಿನವಾನಿ ತೊಡರಿ ಚಂಪೆಡುವಾಟು
ಚೊಡ ದುಷ್ಪುಡುಗಾಕ ಸುಕೃತಿಯಟ....
ಕೊಡುಕುನುನ್ನತಮತಿ ಗೋರಿ ಚಂಪೆಡುವಾಡು
ಕಡು ಬಾತಕುಡುಗಾಕ ಘನುಡಟ....
ತಲ್ಲಿ ಜಂಪೆಡುವಾಡು ತಲಪದುಷ್ಟುಡುಗಾಕ
ಯೆಲ್ಲವಾರಲಕೆಲ್ಲ ನೆಕ್ಕುಡಟ (ಅಧ್ಯಾ., ಸಂ., ಭಾಗ 1, ಪು. 147).

# ವಸ್ತು ಸಂಸ್ಕೃತಿ

ವಸ್ತುಗಳ ರೂಪದಲ್ಲಿ ಅಭಿವ್ಯಕ್ತವಾಗುವುದು ವಸ್ತು ಸಂಸ್ಕೃತಿ. ಪ್ರಕೃತಿಯ ವಾಸ್ತವ ಸಂಪತ್ತನ್ನು ತನ್ನ ಜೀವನಕ್ಕೆ ಬೇಕಾಗುವಂತೆ ಮನುಷ್ಯ ರೂಪಿಸಿಕೊಂಡ. ತನ್ನ ಅಸ್ತಿತ್ವಕ್ಕೆ ಬೇಕಾದ ಆಹಾರ ಪಾನೀಯಗಳು, ಮನೋಲ್ಲಾಸಕ್ಕೆ ಬೇಕಾದ ಅಲಂಕಾರಾದಿಗಳು, ಗೃಹಕೃತ್ಯಗಳಿಗೆ ಬೇಕಾದ ಅನೇಕ ಗೃಹೋಪಕರಣಗಳು, ವಿವಿಧ ವೃತ್ತಿಗಳಿಗೆ ಬಳಸುವ ಸಾಧನಗಳು, ಯುದ್ಧಾದಿಗಳಲ್ಲಿ ಉಪಯೋಗಿಸುವ ಆಯುಧಗಳು ಮುಂತಾದವನ್ನು ಮನುಷ್ಯ ತಯಾರುಮಾಡಿಕೊಂಡ. ಇವುಗಳಲ್ಲಿ ಕೆಲವು ಪ್ರಕೃತಿ ಸಹಜ ವಸ್ತುಗಳು ; ಇನ್ನು ಕೆಲವು ಮನುಷ್ಯ ತನ್ನ ಬುದ್ಧಿಶಕ್ತಿಯಿಂದ ನಿರ್ಮಿಸಿಕೊಂಡಂಥವು.

ಈವರೆಗೆ ಪರಿಶೀಲಿಸಿದ ಸಾಮಾಜಿಕ ಸಂಸ್ಥೆಗಳಲ್ಲಿ ಮಾನಸಿಕ ಸಂಬಂಧವೇ ಮುಖ್ಯವಾಗಿತ್ತು. ಮದುವೆ, ಕುಟುಂಬ, ಬಾಂಧವ್ಯ ಮುಂತಾದವು ಮಾನಸಿಕ ವಿಚಾರಗಳಾದುದರಿಂದ ಅವನ್ನು ಅಮೂರ್ತರೂಪಗಳೆನ್ನಬಹುದು. ಅವುಗಳನ್ನೇನಾದರೂ ಮೂರ್ತೀಕರಿಸಿದರೆ ಅವು ಕೇವಲ ಭಾಷೆಯ ರೂಪದಲ್ಲಿರುತ್ತವೆ ಅಷ್ಟೆ. ಸಾಮಾಜಿಕ ಸಂಸ್ಥೆಗಳು ವಸ್ತು ಸಂಸ್ಕೃತಿಯ ನೆರವನ್ನು ಪಡೆಯಬಹುದು. ವಸ್ತುಗಳಿಗೆ ಮೂರ್ತರೂಪ ಇರುವುದರಿಂದ ಅವು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಸಂಕ್ರಮಿಸುತ್ತವೆ. ಇವು ಬೇಗ ನಶಿಸಿಹೋಗದೆ ಇರುವುದರಿಂದ ಸಂಸ್ಕೃತಿಯ ಅಧ್ಯಯನದಲ್ಲಿ ಇವುಗಳಿಗೆ ಮಹತ್ತ್ವದ ಪಾತ್ರವಿರುತ್ತದೆ.

## ವೇಷಭೂಷಣಗಳು

ಯಾವುದೇ ಜನಸಮೂಹದ ಅಥವಾ ಯಾವುದೇ ಪ್ರದೇಶದ ಸಂಸ್ಕೃತಿಯನ್ನು ಗುರುತಿಸುವುದರಲ್ಲಿ ವೇಷಭೂಷಣಗಳು ಪ್ರಮುಖ ಪಾತ್ರವಹಿಸುತ್ತವೆ. ಧರ್ಮ, ಪ್ರಾದೇಶಿಕತೆ, ಆಚಾರ, ವಯಸ್ಸು ಮುಂತಾದವನ್ನು ಪತ್ತೆಹಚ್ಚಲು ಉಡುಪುಗಳನ್ನು ಧರಿಸುವ ವಿಧಾನವೂ ನೆರವಾಗುತ್ತದೆ. ಉತ್ಸವ, ಮದುವೆ ಮೊದಲಾದ ಸಂದರ್ಭಗಳಲ್ಲಿ ಧರಿಸುವ ವೇಷ ಅವರವರ ಅಂತಸ್ತನ್ನೂ ಸಂಸ್ಕೃತಿಯನ್ನೂ ಪ್ರತಿಬಿಂಬಿಸುವಂತಿರುತ್ತದೆ. ಕಾವ್ಯ, ಶಾಸನ, ಶಿಲ್ಪ, ಚಿತ್ರಕಲೆ ಮುಂತಾದವುಗಳಲ್ಲಿ ಕಂಡುಬರುವ ವೇಷಭೂಷಣಗಳ ವರ್ಣನೆ ಅಥವಾ ರೂಪಕಲ್ಪನೆ ಆಯಾ ಕಾಲದ ಸಂಸ್ಕೃತಿಗೆ ಕನ್ನಡಿ ಹಿಡಿಯುತ್ತದೆ.

ವಸ್ತ್ರಧಾರಣೆ ಯಾವುದಾದರೊಂದು ಸಂಸ್ಕೃತಿಯ ಪ್ರತ್ಯೇಕತೆಯನ್ನು ವ್ಯಕ್ತೀಕರಿಸುವ ಸಾಧನವೆನ್ನಬಹುದು. ಪಂಚೆ, ಅಂಗಿ, ಪೇಟ, ಸೀರೆ ಮುಂತಾದವು ಈ ಸಾಧನಗಳಲ್ಲಿ ಕೆಲವು. ವೇಷಭೂಷಣಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಗಮನಿಸಿದಾಗ

ಅವುಗಳನ್ನು ನಿಯಂತ್ರಿಸುವಲ್ಲಿ ಪ್ರಾದೇಶಿಕತೆ, ಜಾತಿ, ಸ್ತ್ರೀಪುರುಷಭೇದ, ಸಾಮಾಜಿಕ ಅಂತಸ್ತು, ವಯಸ್ಸು, ವೃತ್ತಿ, ಕೆಲಸದವೇಳೆ–ವಿಶ್ರಾಂತಿ ಸಮಯ, ವಿಶೇಷ ಸಂದರ್ಭಗಳು ಮುಂತಾದ ವಿಷಯಗಳು ಪಾತ್ರವಹಿಸುತ್ತವೆ.

ಶಾತವಾಹನರ ಕಾಲದಿಂದಲೂ ಕನ್ನಡಿಗರು, ತೆಲುಗರು ಎಂತಹ ಆಭರಣಗಳನ್ನು ಧರಿಸುತ್ತಿದ್ದರೆಂಬುದಕ್ಕೆ ಕಾವ್ಯ, ಶಿಲ್ಪ, ಚಿತ್ರ ಮುಂತಾದವುಗಳಲ್ಲಿ ಅನೇಕ ಮಾಹಿತಿಗಳು ದೊರೆಯುತ್ತವೆ. ಗಾಥಾಸಪ್ತಶತಿ ಕ್ರಿಸ್ತಶಕಾರಂಭದ ಆಂಧ್ರಕರ್ನಾಟಕಗಳ ಜೀವನ ವಿಧಾನವನ್ನು ಕುರಿತು ಹಲವು ವಿಷಯಗಳನ್ನು ಹೇಳುತ್ತದೆ. ಸೀರೆ, ಕುಪ್ಪಸ, ಬಳೆ, ಅಲಂಕರಿಸಿಕೊಳ್ಳಲು ಬೇಕಾಗುವ ಕನ್ನಡಿ, ವಿವಿಧ ಕೇಶವಿನ್ಯಾಸ, ಆಭರಣ ಮುಂತಾದ ವನ್ನು ಬೇಲೂರು, ಹಳೇಬೀಡು, ಅಮರಾವತಿ ಶಿಲ್ಪಗಳಲ್ಲಿ ಕೆತ್ತಲಾಗಿದೆ. ಅಮರಾವತಿ ಶಿಲ್ಪಗಳಲ್ಲಿ ಮೂಗುತಿ ಕಾಣುವುದಿಲ್ಲ. ಕಾಕತೀಯರ ಕಾಲದಲ್ಲಿ ಮೂಗುತಿ, ಮಂಕಿ ಕಾಲುಂಗುರ ಮುಂತಾದವು ಇದ್ದವು. ಓರುಗಲ್ಲಿನ ಹೆಂಗಸರು ತಾಟಂಕ, ಮುತ್ತಿನ ಕರ್ಣಾ ಭರಣ, ಕಡಗ, ತ್ರಿಸರ, ನೂಪುರ ಮೊದಲಾದವನ್ನು ಧರಿಸುತ್ತಿದ್ದರು.

ವಿಜಯನಗರಕಾಲದ ವೇಷಭೂಷಣಗಳನ್ನು ಅನೇಕರು ವರ್ಣಿಸಿದ್ದಾರೆ. ಆ ಕಾಲದ ಶಾಸನ, ಕಾವ್ಯ, ವಿದೇಶೀಬರೆಹ, ಶಿಲ್ಪ ಇತ್ಯಾದಿಗಳು ರಾಜರ ರಸಿಕತೆಯನ್ನು ತಿಳಿಸುತ್ತವೆ. ಉಡುಪುಗಳಿಗೆ ಅವರು ದೇಸಿಬಣ್ಣ ಹಾಕುತ್ತಿದ್ದರು. ಪುರುಷರು ಸಣ್ಣನೂಲಿನ ಅಂಗಿಗಳನ್ನು ಧರಿಸುತ್ತಿದ್ದರು. ಶ್ರೀಮಂತರು, ಮೇಲ್ವರ್ಗದವರು ಧೋತಿ ಉಡುತ್ತಿದ್ದರು. ಸಾಮಾನ್ಯರು ಮೊಣಕಾಲ್ಮೇಲೆ 'ಚಲ್ಲಾಡ' ಉಟ್ಟು, ನಾಲ್ಕು ಬೆರಳಗಲ ಇದ್ದ ದಟ್ಟಿ ಬಿಗಿಯುತ್ತಿದ್ದರು. 'ಕಿರ್‌ಕಿರ್' ಎನ್ನುವ ಪಾದರಕ್ಷೆ ಮೆಟ್ಟುತ್ತಿದ್ದರು. ವಿಭೂತಿ, ನಾಮ, ಜನಿವಾರ, ತಿಲಕ, ಪಿಳ್ಳೆಜುಟ್ಟು ಮುಂತಾದವು ಕುಲವನ್ನು ಸೂಚಿಸುವ ಚಿಹ್ನೆಗಳು. ಹೆಂಗಸರು ಸಣ್ಣನೂಲಿನ ಸೀರೆ ಉಡುತ್ತಿದ್ದರು. ಅವುಗಳಿಗೆ ಬಣ್ಣ ಬಣ್ಣದ ಅಂಚುಗಳಿರು ತ್ತಿದ್ದುವು.

ಪುರಂದರದಾಸರ ಕೀರ್ತನೆಗಳಲ್ಲಿ ವೇಷಭೂಷಣಗಳನ್ನು ಉಲ್ಲೇಖಿಸುವ ಮತ್ತು ಸಂಕ್ಷಿಪ್ತವಾಗಿ ವರ್ಣಿಸುವ ಹಲವು ಸಂದರ್ಭಗಳನ್ನು ಕಾಣಬಹುದು. ಇಂಥ ಅನೇಕ ವರ್ಣನೆ ಶ್ರೀಕೃಷ್ಣ ಮತ್ತು ಗೋಪಿಕೆಯರಿಗೆ ಸಂಬಂಧಿಸಿದಂಥವು. ಆದರೂ ಸಮಕಾಲೀನ ಸಂಸ್ಕೃತಿಯ ಕುರುಹುಗಳನ್ನು ಅಲ್ಲಲ್ಲಿ ಗುರುತಿಸಬಹುದು. "ಹರಿ ಕರುಣವೆಂಬಂಗಿ ಗುರು ಕರುಣ ಮುಂಡಾಸು ಹರಿದಾಸರ ದಯವೆಂಬ ವಲ್ಲಿ"[1] (2-133). ಅಂಗಿಯ ಮೇಲೆ ವಲ್ಲಿ ಹೊದ್ದು ತಲೆಗೆ ಮುಂಡಾಸು ಧರಿಸುವ ಚಿತ್ರವನ್ನು ಇಲ್ಲಿ ಕೊಡಲಾಗಿದೆ. ಮುಂಡಾಸನ್ನೇ ಪಗಡಿ ಎಂದೂ ಕರೆಯುತ್ತಾರೆ. "ಹರಿದಾಡುವವನಿಗೇಕೆ ಆಡುಪಗಡಿ"

---

[1] ವಲ್ಲಿಯನ್ನೇ ಉತ್ತರೀಯ ಎಂದು ಕರೆಯುವರು. ಬಣ್ಣದ ವಲ್ಲಿಯನ್ನು ಹಾಕಿಕೊಳ್ಳುವ ವಾಡಿಕೆ ಇತ್ತು (ಉ. ಪ್ರ., ಭಾಗ 5, ಪು. 52). ಇಂದಿಗೂ ಉತ್ತರೀಯವನ್ನು ಕೆಲವರು ಹಾಕಿಕೊಳ್ಳುತ್ತಾರೆ.

(ಉ. ಪ್ರ., ಭಾಗ 1, ಪು. 43) ಎನ್ನುತ್ತಾರೆ. ತಲೆಗೆ ಟೋಪಿ ಧರಿಸುವ ವಾಡಿಕೆಯೂ ಇತ್ತು : "ಬಂಗಾರದ ಟೊಪ್ಪಿಗೆ ತಲೆಯ ಮೇಲಿಟ್ಟು" (ಉ. ಪ್ರ., ಭಾಗ 5, ಪು. 40). ಅಂಗಿಯ ಮೇಲೆ ಅಥವಾ ಬರಿಮೈ ಮೇಲೆ ಕಂಬಳಿ ಅಥವಾ ಶಾಲುಹೊದೆಯುವುದೂ ರೂಢಿಯಲ್ಲಿತ್ತು : "ಜೋಲುಕಂಬಳಿ ಹೆಗಲಮೇಲೆ, ಕಲ್ಲಿಯ ಚೀಲ ಕಂಕಳಲಿ" (4-103). "ಹೊಂಬಣ್ಣದಂಬರವನುಟ್ಟು ಕಂಬಳಿ ಹೊದ್ದಿ"ರುವ ರೂಪಗಳೂ ಇದ್ದವು (4-78). "ಶಾಲು ಹೊದಿಸುವೆನು ದಾಸಯ್ಯ ತಂತ್ತು ಹಾಲುಬೋನವುಣಿಸುವೆ ದಾಸಯ್ಯ" (4-54) ಎಂದು ಕೃಷ್ಣನನ್ನು ಕರೆಯುತ್ತಿದ್ದರು. ಚೆಲ್ಲಣವನ್ನು ಧರಿಸುತ್ತಿದ್ದರು (ಪೊಂಬಣ್ಣ ಚೆಲ್ಲಣ....4-56). ದಟ್ಟಿಯನ್ನು ಸೊಂಟಕ್ಕೆ ಕಟ್ಟುತ್ತಿದ್ದರು. ಹೆಂಗಸರ ಕುಪ್ಪಸದ ಉಲ್ಲೇಖಗಳು ಕೆಲವು ಕಡೆ ಕಂಡುಬರುತ್ತದೆ. ಕುಪ್ಪಸತೊಟ್ಟು ಗಂಟು ಹಾಕುವ ಪದ್ಧತಿ ಕಂಡುಬರುತ್ತದೆ : "ತೊಟ್ಟು ಹಿಡಿದು ಎನ್ನ ತೊಟ್ಟ ಕುಪ್ಪಸಗಂಟು ಬಿಟ್ಟು...." (ಉ. ಪ್ರ. ಭಾಗ 1, ಪು. 31). ಕಚ್ಚೆಕಟ್ಟುವ ಸಂಪ್ರದಾಯ ಕರ್ನಾಟಕಾಂಧ್ರಗಳಲ್ಲಿ ಇಂದಿಗೂ ರೂಢಿಯಲ್ಲಿದೆ. ಅಡ್ಡಪಂಚೆ ಅಥವಾ ಲುಂಗಿ ಅನಾರ್ಯ ಸಂಪ್ರದಾಯ. ಗಂಡಸರು ಕಚ್ಚೆ ಪಂಚೆಯನ್ನೂ ಹೆಂಗಸರು ಕಚ್ಚೆ ಸೀರೆಯನ್ನೂ ಉಡುವ ಸಂಪ್ರದಾಯ ಇತ್ತು. ಇವನ್ನು ಮಹಾರಾಷ್ಟ್ರ, ಉತ್ತರಕರ್ನಾಟಕ ಮತ್ತು ದಕ್ಷಿಣ ಕರ್ನಾಟಕಗಳಲ್ಲಿ ಮಾತ್ರವಲ್ಲದೆ ಮಾಧ್ವರನ್ನು ಗುರುತಿಸುವ ವಸ್ತ್ರಾಲಂಕಾರವಾಗಿ ಇಂದಿಗೂ ಅಲ್ಲಲ್ಲಿ ಕಾಣುತ್ತೇವೆ. ಪುರಂದರದಾಸರೂ ಇದನ್ನು ಉಲ್ಲೇಖಿಸಿದ್ದಾರೆ.

ಮಿತ್ರೆ ಕೇಳೆ ನಮ್ಮ ಮನೆ ಮದುವೆ ಮುಂಜಿ ಕಾಲದಲ್ಲಿ
ಅರ್ತಿಯಿಂದ ಒಮ್ಮೆ ಕಚ್ಚೆಕಟ್ಟುತಿದ್ದೆವು
ನಿತ್ಯ ಕಚ್ಚೆಯನು ಹಾಕಿ ಸೀರೆಯನ್ನು ಉಡಲಾಗಿ....

(ಉ. ಪ್ರ., ಭಾಗ 3, ಪು, 71)

"ಚಂದ್ರಗಾವಿಯ ಸೀರೆಯ ನಿರಿವಿಟ್ಟು ಮುಕುಂದನ ಪಾಡುತ ಚದುರೆಯರೆಲ್ಲ" (4-25) ಎಂದು ಹೇಳುತ್ತಾ ನಿರಿಗೆವಿಡಿದು ಸೀರೆ ಉಡುವುದನ್ನು ಹೇಳಿದ್ದಾರೆ.

ಭಾರತೀಯರು ಲಂಗೋಟಿಯನ್ನು ಧರಿಸುವ ಬಗೆಗೆ ವಿದೇಶೀಯರೂ ಹಲವೆಡೆ ಬರೆದಿದ್ದಾರೆ. ಪುರಂದರದಾಸರ "ಲಂಗೋಟಿ ಬಲು ಒಳ್ಳೆಯದಣ್ಣ" ಎಂಬ ಕೀರ್ತನೆ (5-101) ಸಾಂಸ್ಕೃತಿಕವಾಗಿ ತುಂಬ ಬೆಲೆಯುಳ್ಳದ್ದೆನ್ನಬಹುದು. "ಲಂಗೋಟಿ ಬಲು ಒಳ್ಳೆಯದಣ್ಣ, ಒಬ್ಬರ ಹಂಗಿಲ್ಲದೆ ಆಚಾರಕೆ ಒದಗುವುದಣ್ಣ, ಬಡವರಿಗಾಧಾರವಣ್ಣ ...." ಮುಂತಾದ ವಿವರಗಳನ್ನು ಈ ಕೀರ್ತನೆ ನೀಡುತ್ತದೆ. "ಕಾವಿಯನುಟ್ಟು ತಿರುಗು ವಿರಲ್ಲ ಕಾಮವ ಬಿಡಲಿಲ್ಲ" (ಪು. ಸಾ. ದ., ಭಾಗ 3, 75) ಎಂಬಲ್ಲಿ ಬಹಿರಂಗ ವೇಷಧಾರಿಗಳು ಜನರಿಗೆ ಮೋಸಮಾಡುವುದನ್ನು ಕುರಿತು ಹೇಳಿ ಜನರನ್ನು ಎಚ್ಚರಿಸಿದ್ದಾರೆ.

ವೇಷಭೂಷಣಗಳನ್ನು ಎಲ್ಲೆಲ್ಲಿಗೆ ಹಾಕಬೇಕೊ ಅಲ್ಲಲ್ಲಿಗೆ ಹಾಕಿದರೆ ಅಂದ. ಅಲ್ಲದಿದ್ದರೆ ಅದು ಹೇಗೆ ವಿಚಿತ್ರವಾಗಿರುತ್ತದೆ ಎಂಬುದನ್ನು ದಾಸರ ಕೀರ್ತನೆಯೊಂದರಲ್ಲಿ ನೋಡಬಹುದು :

ಮಿನುಗುವ ಸೀರೆಯು ತಲೆಗೆ ಸುತ್ತಿಕೊಂಡು
ವನಕೆ ಹೋಗಲೆಂದು ಹೊರಟಳು
ಅಟ್ಟವೆಂದು ಹತ್ತಿ ಅಗಳಿಯು ಮೇಲೆ
ಇಟ್ಟಳು ಸಾದೆಂದು ಸಗಣಿಯನು
ಕಟ್ಟಬಾಯಿಗೆ ಕಾಡಿಗೆ ಹಚ್ಚಿ
ಕೃಷ್ಣನ ಸ್ಮರಿಸುತ ಹೊರಗೆ ಹೊರಟಳು
ಅಂಗನೆ ಚೌರಿಯು ಕಾಲಿಗೆ ತಗುಲಿಸಿ
ಮುಂಗೈಯಲಿ ತಾಳಿಯ ಬಿಗಿದು
ಸಿಂಗರ ಸರವನು ನಡುವಿಗೆ ಕಟ್ಟಿ
ರಂಗನ ಸ್ಮರಿಸುತ ಹೊರಟಳೊಬ್ಬಳು
ಕಟ್ಟಿ ಮುತ್ತಿನೋಲೆ ಮೊಣಕಾಲ್ಗಳಿಗೆ
ಗಟ್ಟಿ ಕಂಕಣವ ಕಿವಿಗಿಟ್ಟು....(4-93).

ನಾರಿಯರು ಕೃಷ್ಣನನ್ನು ನೋಡಲು ಹೋಗುವ ಸಂಭ್ರಮದ ಸಂದರ್ಭವಿದೆಂದು ನಾವು ಅರ್ಥಮಾಡಿಕೊಳ್ಳಬಹುದು. ಈ ವೇಷ ಹೇಗಾದರಿರಲಿ, ಇದರಿಂದ ವೇಷ ಭೂಷಣಗಳ ಕಿರುಪರಿಚಯವಾಗುತ್ತದೆ.

ಒಬ್ಬೊಬ್ಬರಿಗೆ ಒಂದೊಂದು ರೀತಿಯ ಚಿಂತೆ ಇರುತ್ತದೆ ಎಂಬುದನ್ನು ಹೇಳುವಾಗ "ಕಾಮಿನಿಯರಿಗೆ ಒಡವೆ ವಸ್ತ್ರದ ಚಿಂತೆ" (ಉ. ಪ್ರ., ಭಾಗ 1, ಪು. 75) ಎನ್ನುತ್ತಾರೆ ಪುರಂದರದಾಸರು, ಆಭರಣ ಜೀವನದ ಮಟ್ಟ, ಮೌಲ್ಯಗಳನ್ನು ತೋರಿಸಿಕೊಡುವಂಥವು. ಮಂಗಳ ಕಾರ್ಯಗಳಲ್ಲಿ, ಹಬ್ಬ ಹರಿದಿನಗಳಲ್ಲಿ ಒಡವೆಗಳಿಗೆ ಹೆಚ್ಚು ಬೇಡಿಕೆ ಇರುತ್ತದೆ. ದೇಹದ ಒಂದೊಂದು ಅಂಗಕ್ಕೂ ಸರಿಹೊಂದುವಂತೆ ಒಡವೆಗಳನ್ನು ರೂಪಿಸಿಕೊಳ್ಳ ಲಾಗಿದೆ. ಸಾಹಿತ್ಯದಲ್ಲಿ ಅಂಗಾಂಗ ವರ್ಣನೆಯ ಜೊತೆಗೆ ಪ್ರತ್ಯಂಗಾಭರಣಗಳ ವರ್ಣನೆಯೂ ಬರುತ್ತದೆ. ವಿಜಯನಗರ ಕಾಲದಲ್ಲಿ ಧರಿಸುತ್ತಿದ್ದ ಆಭರಣಗಳ ವೈಭವ ವಿದೇಶೀಯರ ಬರೆಹಗಳಿಂದ ತಿಳಿಯುತ್ತದೆ. "ಅವನು ಮೇಲ್ತರಗತಿಯವನಾಗಿರಲಿ ಅಥವಾ ಸಾಮಾನ್ಯನಾಗಿರಲಿ ಕೊನೆಗೆ ಅಂಗಡಿ ಬೀದಿಯಲ್ಲಿ ಕೆಲಸಮಾಡುವವರು ಕೂಡ ಕೊರಳು, ಕೈ, ತೋಳು ಮತ್ತು ಬೆರಳುಗಳಲ್ಲಿ ಮುತ್ತುಗಳನ್ನೋ ರತ್ನಖಚಿತವಾದ ಬೆಲೆಯುಳ್ಳ ಒಡವೆಗಳನ್ನೋ ಧರಿಸುತ್ತಾರೆ"[1] ಎಂದು ಅಬ್ದುಲ್ ರಜಾಕ್ ಬರೆದಿದ್ದಾನೆ. ಗಂಡಸರ ವಿಷಯವೇ ಹೀಗಿರುವಾಗ ಹೆಂಗಸರ ವಿಷಯ ಬೇರೆ ಹೇಳಬೇಕಾಗಿಲ್ಲ.

ಕೇಶಾಲಂಕಾರ ರಸಿಕತೆಯ ಚಿಹ್ನೆಯಾಗಿತ್ತು. ಮುಡಿಗೆ ಧರಿಸುತ್ತಿದ್ದ ಆಭರಣ ಗಳಲ್ಲಿ ಜಡೆ ಬಂಗಾರ, ಬಂಗಾರದ ಹೆರಳಿನ ರಾಗಟೆ ಮುಂತಾದವು ಪುರಂದರದಾಸರ

---

[1] ರಾಳ್ಳಪಲ್ಲಿ ಅನಂತಕೃಷ್ಣಶರ್ಮ, "ರಾಯರ ಕಾಲದ ರಸಿಕತೆ", ಸಾಹಿತ್ಯ ಮತ್ತು ಜೀವನ ಕಲೆ, ಪು. 45.

ಕೀರ್ತನೆಗಳಲ್ಲಿ ಕಂಡುಬರುತ್ತವೆ : "ಶೃಂಗಾರವಾದ ಜಡೆ ಬಂಗಾರ, ಹೊಂಗ್ಯಾದಿಗೆ ಮುಡಿದ ಬಂಗಾರದ ಹೆರಳಿನ ರಾಕಟೆ" (ಉ. ಪ್ರ., ಭಾಗ 1, ಪು. 84). ಕೃಷ್ಣನನ್ನು ವರ್ಣಿಸುವಾಗ "ಮಸ್ತಕದಲಿ ಮಾಣಿಕದ ಕಿರೀಟ"ವನ್ನು (1-67) ವರ್ಣಿಸುತ್ತಾರೆ. ಅದು ಆ ಕಾಲದ ರಾಜರಿಗೂ ಚೆನ್ನಾಗಿ ಒಪ್ಪುತ್ತದೆ.

ತಲೆಗೆ ಹೂ ಮುಡಿಯುವುದು ಸೌಂದರ್ಯಕ್ಕೆ ಪೋಷಕ. "ತುರುಬಿನ ಮೇಲೆ ನಲಿಯುತಲಿರುವ, ಮರುಗ ಮಲ್ಲಿಗೆ ಜಾಜಿ ತುಲಸಿಯ ದಂಡೆ, ಕರದಲಿ ಪಿಡಿದಿಹೆ ಮುತ್ತಿನ ಚೆಂಡು, ಸರಸದಿಂದಲಿ ನೀ ನಲಿದಾಡುತ ಬಾರೋ" ಎಂದು ಕೃಷ್ಣನನ್ನು ಕರೆದಿದ್ದಾರೆ (ಉ. ಪ್ರ., ಭಾಗ 1, ಪು. 35). "ಸಣ್ಣಮಲ್ಲಿಗೆ ಮುಡಿಸಿ" (4-66) ನೋಡಲು ಚಂದ. "ಓರೆ ತುರುಬು ಓರೆ ಜಡೆಯ ಗೊಂಡೆ ಕಟ್ಟಿದ" ಕೃಷ್ಣನ ವರ್ಣನೆ (ಉ. ಪ್ರ., ಭಾಗ 4, ಪು. 33) ಬಾಲಕರ ಅಲಂಕರಣವನ್ನು ಪ್ರತಿನಿಧಿಸುತ್ತದೆ. ತುರುಬುಕಟ್ಟಿ ಹೂ ಮುಡಿಯುವ ಅಲಂಕರಣ ಗಂಡಸರಿಗೂ ಅನ್ವಯಿಸುತ್ತದೆ. "ಮುಂಗುರುಳ ಮುಂಜಡೆ"ಯನ್ನೂ (4-5) ದಾಸರು ವರ್ಣಿಸಿದ್ದಾರೆ.

ಅಲಂಕಾರವಿಲ್ಲದಿರುವ ಮುಖವನ್ನು ನೋಡಲಾಗುವುದಿಲ್ಲ. "ಕಸ್ತೂರಿ ತಿಲಕವು ಹೊಳೆವ ಲಲಾಟ" (1-67), "ಕುಂಕುಮ ಕಸ್ತೂರಿ ಕಿರು ತಿರುನಾಮ" ಕೃಷ್ಣನ ವರ್ಣನೆಗಳಲ್ಲಿ ಕಂಡುಬರುತ್ತವೆ. "ಕಾಡಿಗೆಗಣ್ಣು" (4-5) ನೋಡಲು ಅಂದ. ಮತೀಯ ಚಿಹ್ನೆಗಳನ್ನು ಸೌಂದರ್ಯ ಪ್ರಜ್ಞೆಯ ಭಾಗವಾಗಿಯೂ ಧಾರ್ಮಿಕತೆಯ ಅಂಗವಾಗಿಯೂ ಬಳಸುವುದುಂಟು. "ಊರ್ಧ್ವಪುಂಢ್ರವಿಲ್ಲದ ಮುಖವ ತಿದ್ದಿ ನೋಡಲೇಕೊ" (2-100) ಎಂದು ಪುರಂದರದಾಸರು ಕೇಳುತ್ತಾರೆ. "ನೊಸಲ ತಿದ್ದಿದ ಬೊಟ್ಟಿನೆಸೆವ ಕಸ್ತುರಿಯು, ಎಸಳು ಕಂಗಳಢಾಳ ಹೊಸಪರಿಯ ನೋಟ" (1-71) ವರ್ಣಿತವಾಗಿದೆ. ಮುಖಾಲಂಕಾರದ ಭಾಗವಾಗಿ ಕರ್ಣಾಭರಣ, ಮೂಗುತಿ ವರ್ಣನೆ ಬರುತ್ತವೆ. ದೊಡ್ಡ ಮೂಗುತಿ ಹಾಕುವವರನ್ನು "ಮೂಗು ಸಣ್ಣದು ಮೂಗುತಿ ದೊಡ್ಡದು" (ಉ. ಪ್ರ., ಭಾಗ3 ಪು.88) ಎಂದು ಗೇಲಿಮಾಡುತ್ತಾರೆ. ಮುತ್ತೈದೆಯ ಅಲಂಕಾರವನ್ನು ತಾತ್ತ್ವಿಕವಾಗಿ ಹೇಳುವಾಗ "ವೈರಾಗ್ಯವೆಂಬ ಒಪ್ಪುವ ಮೂಗುತಿ"(ಉ.ಪ್ರ., ಭಾಗ-1, ಪು.13), ಧರಿಸಬೇಕು ಎಂದಿದ್ದಾರೆ ದಾಸರು. ಮಾಣಿಕದೋಲೆ (ಹ. ಕೀ ತ., ಪು. 231), ಮುತ್ತಿನೋಲೆ (4-93, ಉ. ಪ್ರ., ಭಾಗ 1, ಪು. 13), ವಜ್ರದೋಲೆ, ಹರಳೋಲೆ ಮುಂತಾದ ಓಲೆಗಳ ಉಲ್ಲೇಖಗಳು ಕಂಡುಬರುತ್ತವೆ. ಇನ್ನು ಕೊರಳ ಹಾರಗಳು, ಪದಕಗಳು ಮತ್ತಿತರ ಆಭರಣಗಳ ಉಲ್ಲೇಖ ಲೆಕ್ಕವೇ ಇಲ್ಲದಷ್ಟಿವೆ. ಕೊರಳಪದಕ (4-4), ಪದಕಸರ (ಉ. ಪ್ರ., ಭಾಗ 2, ಪು. 85), ಕೊರಳಲಿ ಹುಲಿಯುಗುರು (4-26), ಮುತ್ತುಹವಳಸರ (4-65), ವರನೀಲರತುನದ ಮಾಣಿಕ ಹಾರ (3-83) ಮುಂತಾದವನ್ನು ದಾಸರ ಕೀರ್ತನೆಗಳಲ್ಲಿ ನೋಡಬಹುದು. ಇವಲ್ಲದೆ ಕಂಕಣ, ತೋಳ್ಬಂದಿ, ಉಡುದಾರ, ವಡ್ಯಾಣ, ಉಡಿಗೆಜ್ಜೆ, ಕಾಲಕಡಗ, ಕಾಲುಂದುಗೆ, ಕಿರುಗೆಜ್ಜೆ ಮುಂತಾದವನ್ನು ಪುರಂದರದಾಸರು ಬೇರೆಬೇರೆ ಸಂದರ್ಭಗಳಲ್ಲಿ ವರ್ಣಿಸಿದ್ದಾರೆ. ಇವೆಲ್ಲವನ್ನೂ ಬಿಡಿಬಿಡಿ

ಯಾಗಿ ನೋಡುವುದೂ ಸರಿಯಲ್ಲ. ಇವೆಲ್ಲ ಸೇರಿದಾಗಲೇ ಸೌಂದರ್ಯದ ಅಖಂಡತೆಯು ಅರಿವಾಗುವುದು. ದಾಸರಲ್ಲಿ ಅಲಂಕಾರ ವಸ್ತುಗಳ ಒಟ್ಟು ವಿವರಗಳಿರುವ ಅನೇಕ ಕೀರ್ತನೆಗಳು ಕಂಡುಬರುತ್ತವೆ. ಉದಾಹರಣೆಗೆ ಒಂದು ಕೀರ್ತನೆಯನ್ನು ನೋಡಬಹುದು :

ಕರದಲಿ ಕಂಕಣ ಬೆರಳಲಿ ಉಂಗುರ
ಕೊರಳಲಿ ಹಾಕಿದ ಹುಲಿಯುಗುರಮ್ಮ
ಅರಳಲೆ ಕನಕಕುಂಡಲ ಕಾಲಲಂದುಗೆ....
ಕುಂಕುಮ ಕಸ್ತುರಿ ಕರಿನಾಮತಿದ್ದಿ
ಶಂಖ ಚಕ್ರಂಗಳ ಧರಿಸಿಹನಮ್ಮ....
ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ....
ಮದನ ಮೋಹನರೂಪ ಎದೆಯಲ್ಲಿ ಕೌಸ್ತುಭ.... (ಉ.ಪ್ರ., ಭಾಗ 1, ಪು. 60).

ಮೇಲಿನ ಹಲವು ಉಲ್ಲೇಖಗಳಲ್ಲಿರುವ ದಾಸರ ಆಭರಣ ಪರಿಜ್ಞಾನ ಮೆಚ್ಚತಕ್ಕದ್ದು. ದೇವತಾವರ್ಣನೆಗಳ ಸಂದರ್ಭದಲ್ಲೂ ಚಿರಪರಿಚಿತ ಆಭರಣಗಳ ಮಾಲೆಯನ್ನೇ ಕೊಡುತ್ತಾರೆ. ನಾವು ಕಾಣಲಾಗದ ಕೌಸ್ತುಭದಂಥ ಆಭರಣಗಳು ಕೆಲವಿರಬಹುದಷ್ಟೆ. ಆಭರಣಗಳು ಇರುವ ಮತ್ತು ಇಲ್ಲದಿರುವ ಜನರನ್ನು ಕಂಡ ತಮ್ಮ ಅನುಭವವನ್ನೂ ದಾಸರು ಸೂಚಿಸುತ್ತಾರೆ : "ಹುಟ್ಟಿದ್ದು ಮೊದಲು ನಾನು ಮೆಟ್ಟಿ ತುಳಿವೆ ದೇಶವೆಲ್ಲ, ಇಟ್ಟೇನೆಂದರೆ ಸೊಟ್ಟ ಕಿವಿಗೆ ಘಟ್ಟಿಮುರುವು ಕಾಣೆನೊ" (ಉ.ಪ್ರ., ಭಾಗ 4, ಪು.72). ಇಷ್ಟರ ನಡುವೆ "ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು" (ಉ. ಪ್ರ., ಭಾಗ 2, ಪು. 14) ಎಂಬುದನ್ನೂ ಹೇಳಿದ್ದಾರೆ.

ವೇಷಭೂಷಣಗಳ ವರ್ಣನೆಯನ್ನು ಆಧ್ಯಾತ್ಮಿಕತೆಗೆ ಸಂಕೇತವಾಗಿ ಬಳಸಿಕೊಂಡ ಸಂದರ್ಭಗಳೂ ಇಲ್ಲದಿಲ್ಲ.

ಗುರುಮಧ್ವ ಶಾಸ್ತ್ರವನು ಓದುವುದೆ ಮಾಂಗಲ್ಯ
ವರವೈರಾಗ್ಯವೆಂಬ ಒಪ್ಪುವ ಮೂಗುತಿ
ತಾರತಮ್ಯದರಿಮೆ ತಾಯಿತಿ ಮುತ್ತುಸರ
ಕರುಣರಸಗಳೆವುಳ್ಳ ಕಟ್ಟಾಣಿಕಟ್ಟಿಕೊಂಡು.... (3-4).
ಪರಮಪಾಪಿ ಕವಿಯೆಂಬೊ ಪಾಪಾಸು ಮೆಟ್ಟಿ....(2-103).

ಹಾಗೆಯೇ "ಗುರುಭಕ್ತಿಯೆಂತೆಂಬ ಗಮಕದೋಲೆಯನಿಟ್ಟು, ಹರಿಧ್ಯಾನವೆಂಬ ಆಭರಣವಿಟ್ಟು, ಪರತತ್ವವೆಂತೆಂಬ ಪಾರಿಜಾತವ ಮುಡಿದು, ಪರಮಾತ್ಮ ಹರಿಗೆ ಆರತಿಯೆತ್ತಿರೆ" (ಹ.ಕೀ.ತ., ಪು. 151) ಎಂದು ದಾಸರು ಬೋಧಿಸಿದ್ದಾರೆ.

ಅನ್ನಮಾಚಾರ್ಯರು ಮಾಡಿದ ವರ್ಣನೆಗಳಲ್ಲಿ ವೇಂಕಟೇಶ್ವರನ ವೈಭವ ಕಂಡು ಬರುತ್ತದೆ. ವೇಷಭೂಷಣಗಳಿಗೆ ಹೆಸರುವಾಸಿಯಾದ ವೇಂಕಟೇಶ್ವರನ ಆಭರಣಗಳಲ್ಲಿ ಚಿನ್ನ, ವಜ್ರ, ಮುತ್ತು, ವೈಡೂರ್ಯ ಮುಂತಾದವನ್ನು ಬಳಸಲಾಗಿದೆ. ಸ್ವಾಮಿಯ ಪ್ರೇಯಸಿಯರನ್ನು ವರ್ಣಿಸುವಾಗಲೂ ಹೆಂಗಸರ ಅನೇಕ ಆಭರಣಗಳನ್ನು ಆಚಾರ್ಯರು

ಉಲ್ಲೇಖಿಸಿದ್ದಾರೆ. ತೆಲಂಗರ ಮತ್ತು ಕನ್ನಡಿಗರ ವೇಷಭೂಷಣಗಳಲ್ಲಿ ವ್ಯತ್ಯಾಸವಿಲ್ಲ. ಚೀರ (ಸೀರೆ), ಪಂಚೆ (ಪಂಚೆ), ಕಾಸೆ (ಕಾಸೆ, ಕಚ್ಚೆ), ರವಿಕ (ರವಿಕೆ) ಮುಂತಾದ ಹೆಸರುಗಳೂ ಒಂದೇ ಮೂಲದವು. ಆಭರಣಗಳ ಆಕಾರದಲ್ಲೂ, ಹೆಸರಿನಲ್ಲೂ ಬಹಳಷ್ಟು ಸಾಮ್ಯ ಕಂಡು ಬರುತ್ತದೆ : ಅಂದೆ (ಅಂದುಗೆ), ಉಂಗರಮು (ಉಂಗುರ), ಒಡ್ಡಾಣಮು (ಒಡ್ಯಾಣ), ಕಂಟಮಾಲ (ಕಂಠಮಾಲೆ), ಕುಂಡಲಮು (ಕುಂಡಲ), ಕುಂದನಪು ಮುತ್ಯಾಲ ಕುಚ್ಚು (ಕುಂದಣದ ಮುತ್ತಿನ ಕುಚ್ಚು), ಕಡಿಯಮು (ಕಡಗ), ಗಜ್ಜಲು (ಗೆಜ್ಜೆ), ನೂಪುರಮು (ನೂಪುರ), ಪಟ್ಟುಚೀರ (ರೇಶ್ಮೆಸೀರೆ), ಪುವ್ವುದಂಡ (ಹೂದಂಡೆ).

ಅನ್ನಮಾಚಾರ್ಯರು ವೇಂಕಟೇಶ್ವರನ ಮತ್ತು ಶ್ರೀಕೃಷ್ಣನ ಮೋಹಕ ರೂಪವನ್ನೂ ವೇಷವನ್ನೂ ಅಲ್ಲಲ್ಲಿ ವರ್ಣಿಸಿದ್ದಾರೆ : ''ನವಿಲಿನ ಪಿಂಛದವನು ನೀಲಮೇಘದ ಕಾಂತಿಯುವನು ಬಂಗಾರದ ದಟ್ಟಿಯುವನು, ಪಕ್ಷಿವಾಹನನು ನನಗೆ ಉಂಗುರ ಕೊಟ್ಟನು ನೋಡಮ್ಮ.''[1] ಅನ್ನಮಾಚಾರ್ಯರು ಬೇರೆ ಬೇರೆ ಕುಲಗಳಿಗೆ ಸಂಬಂಧಿಸಿದ ವೇಷಗಳನ್ನು ಕೂಡ ವರ್ಣಿಸಿದ್ದಾರೆ. ಅಂಚಿನ ಸೀರೆ, ಕಂಚಿನ ಕಾಲುಂಗುರ, ಮಾಸಿದ ಮುಂಡಿ, ಬೆವರು ವಾಸನೆ–ಇವುಗಳಿಂದ ಕೂಡಿದ ಚೆಂಚು[2] ಸ್ತ್ರೀಯರನ್ನು ವರ್ಣಿಸಿದ್ದಾರೆ. ಇವರಿಗೆ ನಾರುಸೀರೆಯೇ ರೇಶ್ಮೆಸೀರೆ, ನವಿಲುಗರಿಯೇ ಕೇದಗಿ, ಗುಲಗಂಜಿಗಳೇ ಮುತ್ತು, ಬಿಳಿ ಮಣ್ಣೇ ಕರ್ಪೂರ, ಅಂಟಿನಪುಡಿಯೇ (ಮಣ್ಣುಪುಡಿ) ಕುಂಕುಮ ಎಂದೂ ಹೇಳಿದ್ದಾರೆ (12-103). ತೆಲುಗರಲ್ಲೂ ತಲೆಗೆ ಕುಲಾಯಿ ಧರಿಸುವ ಪದ್ಧತಿ ಇತ್ತು. ತಿರುಮಲೆಯಲ್ಲಿರುವ ಶ್ರೀಕೃಷ್ಣದೇವರಾಯನ ತಾಮ್ರ ವಿಗ್ರಹಕ್ಕೆ ಕುಲಾಯಿ ಇದೆ. ತಾಳ್ಳಪಾಕ ಅನ್ನಮಾಚಾರ್ಯರ ಮೂರ್ತಿಗಳಲ್ಲೂ ಇದನ್ನು ಕಾಣಬಹುದು.

ನೇಕಾರರು ವಿಧವಿಧವಾದ ಸೀರೆಗಳನ್ನು ತಯಾರು ಮಾಡಿ ಮಾರುತ್ತಿದ್ದುದನ್ನು ಆಚಾರ್ಯರು ವರ್ಣಿಸಿದ್ದಾರೆ. ಹಲವು ಬಣ್ಣದ ನೂಲು ಬಳಸಿ, ಗಂಜಿ ಹಾಕಿ ನೆಯ್ದು ಒಳ್ಳೆಯ ಸೀರೆಗಳನ್ನು ತಯಾರಿಸುವುದನ್ನು ಹೇಳಿದ್ದಾರೆ (5-177). ಚಿನ್ನದ ನೀರನ್ನು ಚೆಲ್ಲಿ, ಕುಚ್ಚುಗಳನ್ನು ಕಟ್ಟಿ 'ಪಟ್ಟಾವಳಿ ಸೀರೆ' ನೇಯುತ್ತಿದ್ದರು (5-177).

ಹಳೆಯ ಬಟ್ಟೆ ಬಿಟ್ಟು ಹೊಸಬಟ್ಟೆ ಧರಿಸುವಂತೆ ಪುನರ್ಜನ್ಮ ಬರುತ್ತದೆಂಬ ಭಗವದ್ಗೀತಾ ಶ್ಲೋಕದ ಭಾವವನ್ನು ಹೇಳಿದ್ದಾರೆ : ''ಹಳೆಯ ಸೀರೆ ಬಿಟ್ಟು ಹೊಸ ಸೀರೆ ಉಟ್ಟಂತೆ ಮುಪ್ಪಿನ ದೇಹವನ್ನು ಬಿಟ್ಟು ದೇಹಿ ಹೊಸ ದೇಹವನ್ನು ಪಡೆಯುವನು''[3]

---

[1] ನೆಮಲಿ ಪಿಂಛೆಮುವಾಡು ನೀಲಮೇಘ ಕಾಂತಿವಾಡು....
ಪಚ್ಚಪೈಡಿದಟ್ಟಿವಾಡು ಗಕ್ಷಿವಾಹನಪುವಾಡು
ಯಿಚ್ಚಿನಾಡು ನಾ ಕುಂಗರ ಮಿದಿಪೋಯಮ್ಮ (ಶೃ. ಸಂ., 24, ಪು. 10).

[2] ಆಂಧ್ರದ ಗಿರಿಜನ.

[3] ....ಪಾತಚೀರಮಾನಿ ಕೊತ್ತಚೀರ ಗಟ್ಟಿನಟ್ಲು
ಮುದಿ ಮೇನು ಮಾನಿ ದೇಹಿ ಮೊಗಿ ಗೊತ್ತಮೇನು ಮೋಚು (7-135).

ಎಂದಿದ್ದಾರೆ. ಸೀರೆ ಉಟ್ಟು ಅಂದಕ್ಕಾಗಿ ಮುಸುಕು ಹಾಕಿಕೊಳ್ಳುವ ವಾಡಿಕೆ ಇತ್ತು. ಅಂಥ ಸಂದರ್ಭವನ್ನು ವರ್ಣಿಸುವಾಗ "ಸಿಂಗಾರದ ಒಡವೆಗಳಿಂದ ಚೆಂಗಾವಿಯ ಮುಸುಕಿನಿಂದ"[1] ಹೋಗುವ ಹೆಣ್ಣನ್ನು ಚಿತ್ರಿಸಿದ್ದಾರೆ. ಗಂಡಸರ ಕಚ್ಚೆ ಪಂಚೆ, ಹೆಂಗಸರ ಕಚ್ಚೆ ಸೀರೆ ಅನ್ನಮಯ್ಯನನ್ನೂ ಆಕರ್ಷಿಸಿವೆ.[2]

ಒಡವೆಗಳ ಸೊಬಗನ್ನು ಕುರಿತಂತೆ ವಿಧವಿಧವಾದ ಉಲ್ಲೇಖಗಳು ಆಚಾರ್ಯರಲ್ಲಿ ಸಿಗುತ್ತವೆ. ಶ್ರೀಮಂತರಲ್ಲಿ ವಾರದ ಏಳು ದಿನಗಳೂ ಧರಿಸುವಷ್ಟು ಬೇರೆ ಬೇರೆ ಆಭರಣ ಗಳಿರುತ್ತವೆ. ಇವನ್ನು 'ಏಡು ವಾರಾಲ ಸೊಮ್ಮುಲು' ಎಂದು ಕರೆಯುತ್ತಾರೆ. ಎಲ್ಲ ಒಡವೆಗಳನ್ನು ಧರಿಸಿದವರಿಗೆ ಅದು ಹೇಗಿದ್ದರೂ ಅದರಿಂದ ಬೇರೆಯವರಿಗೆ ತೊಂದರೆ ಎಂಬುದನ್ನು ಒಂದು ಶೃಂಗಾರ ಸಂಕೀರ್ತನೆಯಲ್ಲಿ ಅನ್ನಮಯ್ಯ ಹೇಳಿದ್ದಾರೆ: "ನನ್ನ ಬಳಿಯೇ ಇದ್ದು ಇಷ್ಟು ಕಾಲ ಸಂಸಾರ ಮಾಡುತ್ತಿದ್ದರೆ ಬೇಡ ಎಂದಿದ್ದೇನೆ ? ಏಳು ವಾರದ ಒಡವೆ ಮೈಯಲ್ಲಿಟ್ಟುಕೊಂಡು ಜೊತೆಗೂಡುತ್ತಿದ್ದರೆ ಅದನ್ನು ಸಹಿಸಲಾಗು ವುದಿಲ್ಲವೆಂದೆ, ಅಷ್ಟೆ."[3]

ಕರ್ನಾಟಕದಲ್ಲಿರುವಂತೆಯೇ ತೆಲುಗುನಾಡಿನಲ್ಲೂ ಕೇಶಾಲಂಕಾರ, ಮುಖಾಲಂಕಾರ ಗಳನ್ನು ಕಾಣಬಹುದು. "ಮುಡಿ ಚೆನ್ನಾಗಿಟ್ಟುಕೊಳ್ಳುತ್ತೇನೆ"[4] ಎಂದು ಹೆಂಗಸರು ಹೇಳುವುದನ್ನು ಆಚಾರ್ಯರು ಉಲ್ಲೇಖಿಸಿದ್ದಾರೆ. "ಹೂವು ಮುಡಿದ ಶಿರಸಿನಲ್ಲಿ ಸುಡುವ ಸೌದೆ ಹೊರುವುದು ಸಾಧ್ಯವೇ"[5] ಮುಂತಾದ ಮಾತುಗಳು ಗಾದೆಗಳಾಗಿಬಿಟ್ಟಿವೆ. ಕೇಶಾಲಂಕಾರಕ್ಕೆ ಚೌರಿಯನ್ನು ಬಳಸುವ ಪದ್ಧತಿಯೂ ಇತ್ತು (14-231). ಕಂಠಮಾಲೆ (ಶೃ. ಸಂ., 24, ಪು. 77), ಚುಕ್ಕಿಬೊಟ್ಟು (14-22), ಗೆಜ್ಜೆ (16-45) ಮುಂತಾದ ವನ್ನು ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ಹೇರಳವಾಗಿ ಕಾಣಬಹುದು. ಆಭರಣ ಗಳನ್ನು ಸಂದರ್ಭಕ್ಕೆ ತಕ್ಕಂತೆ ಗಾದೆಯಂತೆಯೋ ನಾಣ್ಣುಡಿಯಂತೆಯೋ, ಕಾವ್ಯಾಭಿವ್ಯಕ್ತಿ ಯಾಗಿಯೋ, ಆಧ್ಯಾತ್ಮಿಕ ಉಪಮೆಗಳಾಗಿಯೋ ಆಚಾರ್ಯರು ಬಳಸಿಕೊಂಡಿದ್ದಾರೆ. ಉದಾಹರಣೆಗೆ ಗೆಜ್ಜೆಯನ್ನು ಕುರಿತು ಹೇಳುವ ಸಂದರ್ಭವನ್ನು ನೋಡಬಹುದು :

---

[1] ಸಿಂಗಾರಪು ಸೊಮ್ಮುಲತೋ ಚೆಂಗಾವಿ ಮುಸುಗುತೋಡ (13-58).

[2] ಕಟ್ಟುಕವುನ್ನಾಡದೆ ಕಾಸೆಗಾ (13-48).
ಪೋರುಚು ನಾ ಚೀರ ಕಾಸೆ ಪೋಯುಮಂಟಿವಿ (13-126).

[3] ಯೇಪುನ ನಾ ವದ್ದನುಂಡಿ ಇಂತ ಕಲಸಿ ಮೆಲಸಿ
ಕಾಪುರಮು ಸೇಯಗಾನು ಕಾದಂಟಿನಾ
ಚೂಪಿಮೋಪಿ ಯಾಡೋವಾರ ಸೊಮ್ಮುಲು ಮೇನಬೆಟ್ಟುಕ
ರಾಪುಲು ಸೇಯಗಾ ನಂದು ಕೋಪನಂಟಿಗಾಕ (ಶೃ. ಸಂ., 29, ಪು. 99).

[4] ಕೊಪ್ಪು ಚಕ್ಕ ಬೆಟ್ಟುಕೊಂಟಾ (ಶೃ. ಸಂ., 24, ಪು. 21).

[5] ಪುವ್ವುಲು ಮುಡಿಚಿನ ಸಿರಸುನ
ಕನಲು ಕಟ್ಟೆಲು ಮೋಚಿ (9-167).

"ಕದ್ದು ಗೆಜ್ಜೆಗಳನ್ನು ತೆಗೆದಿಡಬೇಕೆಂದುಕೊಂಡರೆ ಅದು ಮೂರ್ಖತನವೇ ಹೊರತು ಕೇಳದೆ ಇರುತ್ತಾರೆಯೋ." [1] ಇದರಿಂದ ಆಭರಣಗಳ ಚಿತ್ರದ ಜೊತೆಗೆ ಒಂದು ಸಂಚಲನ ದೃಶ್ಯ ಕಣ್ಣಿಗೆ ಕಟ್ಟಿದಂತಾಗುತ್ತದೆ. "ಉಟ್ಟಸೀರೆ ಬಿಚ್ಚಿ ಹೋಗಿ ಸೀರೆ ಗಂಟು ಕಾಣು ತ್ತಿದೆ. ಒಡ್ಯಾಣ ಬಿಗಿದುಕೋ" [2] ಎಂದು ಹೇಳುವ ದೃಶ್ಯ ಇಂಥವುಗಳಲ್ಲಿ ಒಂದು.

ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ವೇಂಕಟೇಶ್ವರನ ರೂಪಸೌಂದರ್ಯ ಮತ್ತು ಅಲಂಕಾರ ವರ್ಣನೆಗಳು ಕಂಡುಬರುತ್ತವೆ. ವೇಂಕಟೇಶ್ವರನ ಪ್ರೀತಿಗೆ ಪಾತ್ರರಾದ ಸ್ತ್ರೀಯರ ವರ್ಣನೆಯಲ್ಲಿ ಸ್ತ್ರೀ ಅಲಂಕಾರಗಳ ವೈವಿಧ್ಯ ಕಂಡುಬರುತ್ತದೆ. ಇಂದಿಗೂ ತಿರುಪತಿ ತಿಮ್ಮಪ್ಪನ ವೈಭವ ಜಗದ್ವಿದಿತವೇ ಆಗಿದೆ. ಸಂಸ್ಕೃತ ಕೀರ್ತನೆಯೊಂದರಲ್ಲಿ ಅವನನ್ನು ಹೀಗೆ ವರ್ಣಿಸಿದ್ದಾರೆ:

> ಚಂದನಾಂಕಿತ ಲಸಚ್ಚಾರು ದೇಹಮ್
> ಮಂದಾರ ಮಾಲಿಕಾ ಮಕುಟ ಸಂಶೋಭಿತಂ
> ಧಗಧಗಿತ ಕೌಸ್ತುಭಾಭರಣ ವಕ್ಷಸ್‌ಸ್ಥಲಂ
> ಖಗರಾಜವಾಹನಂ ಕಮಲ ನಯನಂ (ಅ. ಸಂ., 2, ಪು. 3).

'ಮುಂಬಾಗಿಲ ನಿಧಾನ' (ನಿಧಿ) ಎಂಬುದು ತೆಲುಗಿನ ನುಡಿಗಟ್ಟು. ತನ್ನ ಅಮೂಲ್ಯ ಆಭರಣಗಳಿಂದಲ್ಲದೆ, ಕಾಪಾಡುವ ಶಕ್ತಿಯಿಂದಲೂ ವೇಂಕಟೇಶ್ವರ ಮುಂಬಾಗಿಲ ನಿಧಿ ಆಗಿದ್ದಾನೆ ಎಂದು ಭಕ್ತರು ನಂಬಿದ್ದಾರೆ. ಭುಜಕೀರ್ತಿಗಳು, ಸೊಂಟದ ಕಠಾರಿ, ಚಿನ್ನದ ಕಾಂತಿಯು ಹಳದಿ ಬಟ್ಟೆ ಮುಂತಾದವುಗಳಿಂದ ಕಣ್ಣಿಗೆ ನಿಧಿಯಂತೆ ಕಾಣುವ ವೇಂಕಟೇಶ್ವರ ನನ್ನು ಅನ್ನಮಯ್ಯ ವರ್ಣಿಸಿದ್ದಾರೆ.[3]

ವೇಷಭೂಷಣಗಳನ್ನು ಸುಂದರ ಕಾವ್ಯಾಭಿವ್ಯಕ್ತಿಗೆ ವಸ್ತುವಾಗಿಸಿಕೊಂಡ ಸಂದರ್ಭ ಗಳನ್ನೂ ಆಚಾರ್ಯರ ಕೀರ್ತನೆಗಳಲ್ಲಿ ಕಾಣಬಹುದು:

> ತರುಣಿಯ ಕೆನ್ನೆಗಳಲ್ಲಿ ಸುರಿಯಿತು ಪನ್ನೀರ ಮಳೆ
> ಬೇಗ ಅಂದುಗೆಯಿಂದ ಮಿಂಚಿನ ಮಳೆಯಾಯ್ತು

---

[1] ದೊಂಗಿಲಿ ಗಜ್ಜಲ ಪೇರು ತೊಲಗ ಬೆಟ್ಟಬೋತೇ
ವೆಂಗಲಿತನ ಮೇಕಾಕ ವಿನಕ ಮಾನೇರಾ (16-45).

[2] ಕಟ್ಟಿನ ಚೀರ ವದಲಿ ಕಾನವಚ್ಚೀ ಬೋಕಮುಡಿ
ವೊಟ್ಟಿ ಬಿಗಿಂಚುಕೊನವೇ ವೊಡ್ಡಾಣಮು (ಶೃ. ಸಂ., 29, ಪು. 32).

[3] ಮುಂಗ್ಗೆ ಮುರಾಲುನವೆ ಮೊಲ ಕಠಾರುನುನದೆ
ಬಂಗಾರು ನಿಗ್ಗುಲವನ್ನೆ ಪಚ್ಚಬಟ್ಟದೆ
ಯಿಂಗಿತ ಮೆರಿಗಿ ವೇಂಕಟೇಶುಡಿದೆ ಕನ್ನುಲಕು
ಮುಂಗಿಟಿ ನಿಧಾನಮ್ಮೈನ ಮೂಲಭೂತಮದೇ (ಅಧ್ಯಾ. ಸಂ., 1, ಪು. 91).

ಬಿಚ್ಚಿದ ಮುಡಿಯಿಂದ ಹೂವಿನ ಮಳೆ ಸುರಿಯಿತು
ಸಂಭ್ರಮದ ಯೌವನ ಚಿಗುರಿಸಿತಯ್ಯಾ [1]

ಹೀಗೆ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಇಷ್ಟದೈವ ವರ್ಣನೆಯ ಸಂದರ್ಭದಲ್ಲಿ ಹಾಗೂ ಭಕ್ತಭಕ್ತೆಯರ ರೂಪಚಿತ್ರಣದ ಸಂದರ್ಭದಲ್ಲಿ ಉಲ್ಲೇಖಿಸಿರುವ ವೇಷಭೂಷಣಗಳು ಭಾರತೀಯ ಸೌಂದರ್ಯಪ್ರಜ್ಞೆಗೆ ದರ್ಪಣದಂತಿವೆ. ಆ ಕಾಲದ ಜನರ ಸಿರಿವಂತಿಕೆ, ರಸಿಕತೆ, ವೈವಿಧ್ಯಪೂರ್ಣ ಆಭರಣಗಳ ಬಳಕೆ ಮುಂತಾದವು ಈ ಉಲ್ಲೇಖಗಳಿಂದ ತಿಳಿದು ಬರುತ್ತದೆ.

## ಆಹಾರ ಪಾನೀಯಗಳು

ಆಹಾರ ಪಾನೀಯ ವಸ್ತು ಸಂಸ್ಕೃತಿಗೆ ಸೇರಿದ ಮುಖ್ಯ ಭಾಗಗಳು. ಪ್ರಕೃತಿಯಲ್ಲಿರುವ ವಸ್ತುಗಳನ್ನು ಹಾಗೆಯೇ ಆಹಾರ ಪಾನೀಯಗಳಾಗಿ ತೆಗೆದುಕೊಳ್ಳಬಹುದು. ಆದರೆ ಅವನ್ನು ರುಚಿಭೇದಕ್ಕೆ ಮತ್ತು ಪ್ರಾದೇಶಿಕ ಆಚಾರಗಳಿಗೆ ಅನುಗುಣವಾಗಿ ವೈವಿಧ್ಯಮಯ ಪದಾರ್ಥಗಳನ್ನಾಗಿ ಮಾರ್ಪಡಿಸುವುದು ಸಂಸ್ಕೃತಿಯ ಭಾಗವೆನ್ನಬಹುದು. ಪ್ರಾದೇಶಿಕ ವ್ಯತ್ಯಾಸಗಳೊಂದಿಗೆ ಸಾಂಪ್ರದಾಯಿಕವಾಗಿ ಹರಿದು ಬರುತ್ತಿರುವ ಸೂಪಶಾಸ್ತ್ರ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಾಯಕವಾಗುತ್ತದೆ. ಆಹಾರ ಪದಾರ್ಥಗಳು, ಅವುಗಳ ಸ್ವರೂಪ, ಅವನ್ನು ತಯಾರು ಮಾಡಿ ದೀರ್ಘಕಾಲ ಇಡುವ ವಿಧಾನ, ಸಾಮಾಜಿಕವಾಗಿ ಅವುಗಳಿಗಿರುವ ಮೌಲ್ಯ ಮುಂತಾದವು ಪರಿಶೀಲನಯೋಗ್ಯವಾಗಿವೆ.

ಪ್ರಾದೇಶಿಕವಾಗಿ ಆಹಾರ ಪಾನೀಯಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಅಕ್ಕಿ, ಗೋಧಿ, ರಾಗಿ, ಜೋಳ ಮುಂತಾದವನ್ನು ಬೆಳೆಯುವ ಪ್ರದೇಶಗಳು, ತೀರಪ್ರಾಂತ್ಯಗಳು, ನದಿಗಳು, ಮಳೆ ಇತ್ಯಾದಿಗಳು ಕೂಡ ಆಹಾರದ ವ್ಯತ್ಯಾಸಗಳಿಗೆ ಕಾರಣವಾಗುತ್ತವೆ. ಕರ್ನಾಟಕದ ಉತ್ತರ, ದಕ್ಷಿಣ ಮತ್ತು ಕರಾವಳಿ ಪ್ರದೇಶ, ಆಂಧ್ರದ ತೆಲಂಗಾಣ, ರಾಯಲಸೀಮ ಮತ್ತು ತೀರಪ್ರಾಂತ್ಯಗಳಲ್ಲಿ ಆಹಾರದ ವ್ಯತ್ಯಾಸಗಳಿರುವುದನ್ನು ಗಮನಿಸಬಹುದು.

ಆಹಾರ ಪದಾರ್ಥಗಳನ್ನು ಹಿಂದೆ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ ಎಂಬುದಾಗಿ ಕೆಲವು ವಿಭಾಗಗಳಲ್ಲಿ ಪರಿಶೀಲಿಸುತ್ತಿದ್ದರು. ಮುಖ್ಯವಾಗಿ ಘನಪದಾರ್ಥ, ದ್ರವ ಪದಾರ್ಥ ಎಂಬ ಎರಡು ಪಂಗಡಗಳು ಇವುಗಳಲ್ಲಿ ಕಂಡುಬರುತ್ತವೆ ಎಂದು ಹೇಳಬಹುದು. ವೃಕ್ಷ ಸಂಬಂಧ, ಪ್ರಾಣಿ ಸಂಬಂಧ, ಪಕ್ಷಿ ಸಂಬಂಧ, ಜಲಚರ ಸಂಬಂಧ,

---

[1] ಪಡತಿ ಚೆಕ್ಕುಲ ವೆಂಟ ಬನ್ನೀಟಿ ವಾನಗುರಿಸೆ
ವಡಿನಂದೆ ಮೆರುಗುಲ ವಾನಗುರಿಸೆ
ವಿಡಿವಡಿ ತುರುಮುನ ವಿರುಲವಾನಗುರಿಸೆ
ಚಿಡುಮುಡಿ ಜವ್ವನಮು ಚಿಗಿರಿಂಚೆನಯ್ಯಾ (ಶೃ. ಸಂ., 29, ಪು. 45).

ವಿಂಶ್ರಾಹಾರ (ಘನ-ದ್ರವ ಸೇರಿದ್ದು), ಬೇರೆ ಬೇರೆ ವೇಳೆಗಳಲ್ಲಿ ತೆಗೆದುಕೊಳ್ಳುವ ಆಹಾರ ಮೊದಲಾದ ಹಲವು ಬಗೆಯ ಆಹಾರಗಳನ್ನು ಕುರಿತು ವಿವೇಚನೆ ನಡೆಸಬಹುದು. ಹಾಗೆಯೇ ಪಾನೀಯಗಳಲ್ಲಿ ನೀರುಮಜ್ಜಿಗೆ, ಹಣ್ಣಿನ ರಸ, ಪಾನಕ, ಪಾಯಸ, ಅವುಗಳ ತಯಾರಿಕೆ ಕುರಿತು ಪರಿಶೀಲಿಸಬಹುದು.

ಭಾರತ ದೇಶದ ಆಹಾರ ಪದ್ಧತಿಗಳನ್ನು ಹಲವರು ಅಧ್ಯಯನ ಮಾಡಿದ್ದಾರೆ. 'ವಾತಾಂಬು ಪರ್ಣಾಶನಾಃ' ಎಂದಿರುವುದರಲ್ಲಿ ಏನೂ ಇಲ್ಲದವರಿಗೆ ಗಾಳಿಯೇ ಆಹಾರ ಎಂದು ಹೇಳಲಾಗಿದೆ. ನೀರು ಕೆಲವು ವೇಳೆ ಅನಿವಾರ್ಯ ಆಹಾರವಾಗುತ್ತದೆ. ಎಲೆ, ಕಾಯಿ, ಹಣ್ಣುಗಳನ್ನೂ ತಿನ್ನಬೇಕು. ಇನ್ನು ಅಶನಕ್ಕೆ ಬಂದಾಗಲೇ ಸಂಸ್ಕೃತಿಯ ವೈವಿಧ್ಯ ಎಂಥದೆಂಬುದು ಗೊತ್ತಾಗುವುದು.

ಪಾಕಶಾಸ್ತ್ರ ಒಂದು ಕಲೆಯಾಗಿ ಬೆಳೆದು ಬಂದಿದೆ. ಸಂಸ್ಕೃತ, ಕನ್ನಡ ಮತ್ತು ತೆಲುಗು ಕಾವ್ಯಗಳಲ್ಲಿ ಭಕ್ಷ್ಯಭೋಜ್ಯಾದಿ ವರ್ಣನೆಗಳು ವಿವರವಾಗಿ, ವಿಸ್ತಾರವಾಗಿ ಕಂಡುಬರುತ್ತವೆ. ಸೂಪಶಾಸ್ತ್ರವನ್ನೇ ಕುರಿತು ಕೃತಿಗಳೂ ಬಂದಿವೆ.[1] ಕಾವ್ಯಗಳಲ್ಲಿ ಬರುವ ವರ್ಣನೆಗಳು ಪಟ್ಟಿಯಂತಿರುತ್ತವೆ ಅಥವಾ ಅನುಭವದ ವರ್ಣನೆಗಳಾಗಿರುತ್ತವೆ. ಆದರೆ 'ಸೂಪಶಾಸ್ತ್ರ'ದಂಥ ಕೃತಿಗಳು ಆಹಾರ ತಯಾರಿಸುವ ವಿಧಾನವನ್ನೂ ಹೇಳುತ್ತವೆ.

ವಿಜಯನಗರ ಕಾಲದ ಅನೇಕ ಶಾಸನಗಳಲ್ಲಿ ಆಹಾರ ಪದಾರ್ಥಗಳ ದೊಡ್ಡ ಪಟ್ಟಿಯೇ ಸಿಕ್ಕುತ್ತದೆ. ಒಂದೊಂದು ಋತುವಿನಲ್ಲಿ ಸಸ್ಯಾಹಾರಿಗಳು ಮತ್ತು ಮಾಂಸಾಹಾರಿಗಳು ಯಾವ ರೀತಿಯ ಆಹಾರ ಪದಾರ್ಥಗಳನ್ನು ಬಳಸುತ್ತಿದ್ದರೆಂಬುದನ್ನು ಶ್ರೀಕೃಷ್ಣದೇವರಾಯ 'ಆಮುಕ್ತಮಾಲ್ಯದ'ದಲ್ಲಿ (ಎರಡನೆಯ ಆಶ್ವಾಸ) ತುಂಬ ಚೆನ್ನಾಗಿ ವರ್ಣಿಸಿದ್ದಾನೆ.

ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಸಾಮಾನ್ಯ ಭೋಜನಕ್ಕೆ ಬಳಸುವ ಪದಾರ್ಥಗಳನ್ನೂ ವಿಶೇಷ ಸಂದರ್ಭಗಳಲ್ಲಿ ಬಳಸುವ ಪದಾರ್ಥಗಳನ್ನೂ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಶ್ರೀಹರಿಗೆ ಅರವತ್ತು ಜನಸಿನ ವಿಧವಿಧವಾದ ಶಾಕಗಳನ್ನು ಅರ್ಪಿಸುತ್ತಿದ್ದುದನ್ನು ಪುರಂದರದಾಸರು ಹೇಳುತ್ತಾರೆ (ಉ. ಪ್ರ., ಭಾಗ 5, ಪು. 30). ಆಹಾರವನ್ನು ಕೇವಲ ಭೌತಿಕ ಕಾಯದ ಅಸ್ತಿತ್ವಕ್ಕಾಗಿ ಬಳಸದೆ, ಆಧ್ಯಾತ್ಮಿಕ ಚಿಂತನೆಯ ಹಿನ್ನೆಲೆಗೂ ಬಳಸಿದ್ದಾರೆ. ಆಗ ಭಗವಂತ ಭವರೋಗವನ್ನು ಗುಣಪಡಿಸುವ ವೈದ್ಯನಾಗುತ್ತಾನೆ. "ಗುಣವಾಯಿತೆನ್ನ ಭವರೋಗ, ಕೃಷ್ಣನೆಂಬ ವೈದ್ಯನು ದೊರಕಿದನು.... ಸಂಚಿಯೊಳಗೆ ತುಂಬ ಮಾತ್ರೆಗಳುಂಟು, ಚೆನ್ನಾಗಿ ಗುಣಮಾಡುವನೀತ, ಗುರುಸ್ಮರಣೆಯು ಶುಂಠಿ ಮೆಣಸು, ಹರಿದಿವ್ಯ ನಾಮವು ಸಾರನ್ನ...." ಎನ್ನುತ್ತಾರೆ ದಾಸರು (ಉ. ಪ್ರ., ಭಾಗ 2, ಪು. 67).

---

[1] ಮೂರನೆಯ ಮುಗರಸನ 'ಸೂಪಶಾಸ್ತ್ರ'

ದಾಸರ ಅನೇಕ ಕೀರ್ತನೆಗಳಲ್ಲಿ ಅಡುಗೆ ಮತ್ತು ಇತರ ಆಹಾರ ಪದಾರ್ಥಗಳು ಸಾಂಕೇತಿಕ ಅರ್ಥವನ್ನು ಪಡೆದುಕೊಳ್ಳುತ್ತವೆ. ಅನುಭವದಡುಗೆಯನು ಮಾಡಬೇಕೆಂದು ಹೇಳುತ್ತಾ ಪುರಂದರದಾಸರು ಹೀಗೆನ್ನುತ್ತಾರೆ : ತನುವೆಂಬ ಭಾಂಡವ ತೊಳೆದು ಕಟ್ಟಿ ಮನದ ಚಂಚಲವೆಂಬ ಮುಸುರೆಯ ಕಳೆದು.... ಪೂರ್ಣ ಹರಿಭಕ್ತಿಯೆಂಬ ನೀರನ್ನೆಸರಿಟ್ಟು ಅರಿವೆಂಬೊ ಬೆಂಕಿಯ ಕೊಟ್ಟು ... ಶರಣೆಂಬೊ ಸಾಮಗ್ರಿ ಹೂಡಿ ಮೋಕ್ಷ ಪರಿಪಾಕ ವಾದಂಥ ಪಾಕವ ಮಾಡಿ...." (ಹ. ಕೀ. ತ., ಪು. 114). ಗೋವಿಂದನ ನಾಮವೇ ಮಿಠಾಯಿ. ಅದಕ್ಕೆ ಸಾಟಿ ಈ ಲೋಕದಲ್ಲಿ ಯಾವುದೂ ಇಲ್ಲ. ಅದು ಬಂಧಗಳನ್ನು, ಭವ ರೋಗಗಳನ್ನು ನಿಂದಿಪುದೆಂದೂ ದಧಿಘೃತ ಕ್ಷೀರಕ್ಕಿಂತ ಅಧಿಕವಾದುದೆಂದೂ ಕದಳಿ ದ್ರಾಕ್ಷ ಖರ್ಜೂರಗಳನು ಮೀರುವುದೆಂದೂ ಪಂಚಭಕ್ಷ್ಯಗಳ ಷಡ್ರಸಾನ್ನಗಳ ಮಿಂಚಿದಂಥ ದೆಂದೂ ಪುರಂದರದಾಸರು ಹೇಳಿದ್ದಾರೆ (ಹ. ಕೀ. ತ., ಪು. 26).

ವಿಷ್ಣುಭಕ್ತಿ ಪಾರವಶ್ಯದಿಂದ ಮೈಮರೆತು ಗಾನ ಮಾಡಿದ ದಾಸರಿಗೆ ಒಂದೊಂದು ವಿಷ್ಣುನಾಮವೂ ದಿವ್ಯ ರಸಗಳನ್ನು ನೆನಪಿಗೆ ತರುವುದರಲ್ಲಿ ಆಶ್ಚರ್ಯವಿಲ್ಲ.

ಓಂಕಾರವೆಂಬ ನಾಮ ಉಪ್ಪು ಉಪ್ಪಿನಕಾಯಿ
ಶಂಖಪಾಣಿಯ ನಾಮ ಪಾಕಾದಿ ಸೂಪ
ಸಂಕರ್ಷಣನ ನಾಮ ದಿವ್ಯ ಶಾಲ್ಯಾನ್ನವು
ಪಂಕಜಾಕ್ಷನ ನಾಮ ಪಳಿದ ಬಗೆ ಬಗೆ ಸಾರು
ಕೇಶವನೆಂಬ ನಾಮ ಕರಿದ ಹೂರಣಗಡಬು.... (3-57)

ಹೀಗೆ ಈ ಕೀರ್ತನೆಯಲ್ಲಿ ನಾರಾಯಣನ ವಿವಿಧ ನಾಮಗಳನ್ನು ವಡೆ, ಸೇವಗೆ, ಪರಿ ಪರಿಯ ಪರಮಾನ್ನ, ದೋಸೆ ಸೂಸಲಗಡಬು, ಸರವಳಿ ಸಜ್ಜಿಗೆ, ಕರಿದ ಹಪ್ಪಳ ಸಂಡಿಗೆ, ಎಣ್ಣೊರಿಗೆ, ಮಂಡಿಗೆ, ಬೀಸೂರಿಗೆ, ದಧ್ಯನ್ನ, ಗುಳ್ಳೋರಿಗೆ, ಕಲಸು ಮೇಲೋಗರ, ಇಡ್ಡಲಿಗೆ-ಸುಖಿಯುಂಡೆ ಮೊದಲಾದವಕ್ಕೆ ಹೋಲಿಸಲಾಗಿದೆ.

ದೇವರಿಗೆ ನೈವೇದ್ಯ ನೀಡುವಾಗ "ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ" (1-128) ಎಂದು ಹೇಳುತ್ತಾ ಘಮಘಮಿಸುವ ಶಾಲ್ಯಾನ್ನ, ಪಂಚಭಕ್ಷ್ಯ, ಅಮೃತ ಕೂಡಿದ ದಿವ್ಯ ಪರಮಾನ್ನ, ಅರವತ್ತು ಶಾಕ, ಲವಣಶಾಕ, ಉಪ್ಪಿನಕಾಯಿ, ಮೊಸರು, ಚಿತ್ರಾನ್ನ, ಅಪ್ಪಾವು, ಅತಿರಸ, ಒಡೆಯಾಂಬೊಡೆ, ದಧಿವಡೆ ಇತ್ಯಾದಿಗಳನ್ನು ಪಟ್ಟಿ ಮಾಡಿದ್ದಾರೆ.

ಅತಿ ಸಾಮಾನ್ಯವಾದ ಆಹಾರದಿಂದ ಪಂಚಭಕ್ಷ್ಯ ಪರಮಾನ್ನಗಳಿಂದ ಕೂಡಿದ ಔತಣದವರೆಗೆ ಎಲ್ಲ ತರಹದ ಉಲ್ಲೇಖಗಳನ್ನೂ ಪುರಂದರದಾಸರಲ್ಲಿ ಕಾಣುತ್ತೇವೆ.

ಹಸಿವೆಯಾಗುತಿದೆ ಅಮ್ಮ ಕೇಳೆ
ಹಸನಾದ ಅವಲಕ್ಕಿ ಬೆಲ್ಲ ಕಲಸಿಕೊಡೆ
ಬಿಸಿಬಿಸಿ ಅನ್ನ ಕೈಸುಡುತಿದೆ ಬದಿಯಲ್ಲಿ ಕೂಡೆ
ಖಾರಾ ಸಾರು ಮಾಡಬೇಡ ಉಣ್ಣಬಾರೆನೆ ಎನಗೆ ಸೀ

ಸಾರು ಮಾಡಿದರೆ ಬೇಗನುಂಬುವೆ
ತೋಡ ತುಪ್ಪ ಹಾಕಿದರೆ ನೆಲಕೆ ಒತ್ತುವೆ ಎನಗೆ ಗಟ್ಟಿ
ತುಪ್ಪ ಹಾಕಿದರೆ ಬೇಗ ನುಂಗುವೆ
ನೀರು ಮೊಸರು ಹಾಕಿದರೆ ನೆಲಕೆ ಒತ್ತುವೆ ಎನಗೆ
ಗಟ್ಟಿ ಮೊಸರು ಹಾಕಿದರೆ ತಟ್ಟನುಂಗುವೆ
ಕಂದರೆಲ್ಲ ಕರೆಯಬಂದರಮ್ಮ ಕೇಳೆ ಬಾಳೆ
ಹಣ್ಣು ಬೆಲ್ಲಚೂರು ಕೈಯಲ್ಲಿ ಕೊಡೆ
ಕಂದರೆಲ್ಲ ಕರೆಯ ಬಂದರು ತಾಯಿ ಕೇಳೆ ಸಕ್ಕರೆ
ಕೊಬ್ಬರಿ ಕುಟ್ಟಿ ಸೆರಗಲಿ ಹಾಕೆ.... (ಉ. ಪ್ರ., ಭಾಗ 4, ಪು.2)

ಎಂದು ಕೇಳುವ ಮಗುವಿನ ಚಿತ್ರ ಸುಂದರವಾಗಿದೆ. "ಹಾಲುಬೋನವುಣಿಸುವೆ ದಾಸಯ್ಯ" (4-54) ಎಂದು ಕೃಷ್ಣನನ್ನು ಕರೆಯುವುದನ್ನು ನೋಡುತ್ತೇವೆ. "ಸಣ್ಣಕ್ಕಿ ಯೋಗರ ಸೊಗಸಾದ ಕೆನೆಮೊಸರು" (ಉ.ಪ್ರ., ಭಾಗ 1, ಪು.37) ಇದ್ದರೆ ಇನ್ನೇನೂ ಬೇಕಾಗಿಲ್ಲ. ಸಕ್ಕರೆ ಚಿಲಿಪಾಲು ಘೃತಗಳು ರಾಜಾನ್ನಕೆ ಸವಿಯೀಯುವ(2-96) ವಿಷಯ ವನ್ನೂ ದಾಸರು ಹೇಳಿದ್ದಾರೆ. ಆಹಾರ ಪಾನೀಯಗಳನ್ನು ಹೇಳುತ್ತಲೇ ಸಮಕಾಲೀನ ಸಮಾಜದ ಕೆಲವು ವಿಷಯಗಳನ್ನು ಕೂಡ ಹೇಳಿದ್ದಾರೆ. ವೇಂಕಟೇಶ್ವರನನ್ನು ಸ್ತುತಿಸು ವಾಗ "ದೋಸೆ ಅನ್ನವ ಮಾರಿಸುವನ" (1-77) ಎಂದಿದ್ದಾರೆ. ಇದರಿಂದ ಆ ಕಾಲ ದಲ್ಲೂ ತಿರುಪತಿಯಲ್ಲಿ ದೋಸೆ ಅನ್ನ ಮುಂತಾದವನ್ನು ಮಾರುತ್ತಿದ್ದ ವಿಷಯ ತಿಳಿದಂತಾಯಿತು. "ಮುಗ್ಗು ರಾಗಿಯ ಹಿಟ್ಟು"(2-96), "ಕಣಕದ ರೊಟ್ಟಿ" (5-66) ಮುಂತಾದ ಸಾಮಾನ್ಯ ಪದಾರ್ಥಗಳ ಉಲ್ಲೇಖಗಳನ್ನೂ ಪುರಂದರದಾಸರ ಕೀರ್ತನೆಗಳಲ್ಲಿ ಕಾಣಬಹುದು.

ಸಾಮಾನ್ಯ ಆಹಾರ ಪದಾರ್ಥಗಳು ಕೂಡ ಕೆಲವು ವ್ಯಂಜನಗಳ ಜೊತೆಗೂಡಿ ಮಧುರವಾದ ಪದಾರ್ಥಗಳಾಗಿ ಪರಿಣಮಿಸುತ್ತವೆ. "ಬಿಸಿಯ ದೋಸೆಯ ಹೊಯ್ದು, ಮೊಸರು ಗಡ್ಡೆಯ ತೆಗೆದು, ಹೊಸದಾದ ಹಸುವಿನೀ ತುಪ್ಪವನು ಹಸನಾದ ಕಲಸನ್ನ ಹೆಸರುಬೇಳೆಯ ಹುಗ್ಗಿ" (4-29) ಮುಂತಾದವು ರಸಿಕತೆಯ ಸಂಕೇತಗಳಾಗಿವೆ ಎನ್ನ ಬಹುದು.

ಆಹಾರವಾಗಿ ಬಳಸುವ ಕೆಲವು ವಿಶೇಷ ಪದಾರ್ಥಗಳನ್ನು ಅಲ್ಲಲ್ಲಿ ದಾಸರು ಉಲ್ಲೇಖಿಸಿದ್ದಾರೆ. ಈಗಲೂ ನಾವು ಬಳಸುತ್ತಿರುವ ಪದಾರ್ಥಗಳು ಪುರಂದರದಾಸರ ಕಾಲಕ್ಕೇ ಎಷ್ಟು ಜನಪ್ರಿಯವಾಗಿದ್ದುವೆಂಬುದನ್ನು ಈ ಉಲ್ಲೇಖಗಳು ತಿಳಿಸುತ್ತವೆ. "ಚಕ್ಕುಲಿ" (ಉ. ಪ್ರ., ಭಾಗ 3, ಪು. 69), "ಉದ್ದಿನವಡೆ" (4-65), "ಕಜ್ಜಾಯ" (ಉ. ಪ್ರ., ಭಾಗ 2, ಪು. 66) ಮುಂತಾದವು ಸೇರಿದಂತೆ ಹಲವನ್ನು ವಿಶೇಷ ಸಂದರ್ಭ ಗಳಲ್ಲಿ ತಿನ್ನುತ್ತಿದ್ದರು.

ಪಾನೀಯಂಗಳಲ್ಲಿ ಹೆಚ್ಚಿಗೆ ಉಲ್ಲೇಖಗೊಂಡಿರುವುದೆಂದರೆ ಪಾಯಸ. ಬರಗಿನ ಪಾಯಸ, ಸೇವಗೆ ಪಾಯಸ (2-96) ಮುಂತಾದ ಬಗೆಗಳನ್ನು ದಾಸರು ಹೆಸರಿಸಿದ್ದಾರೆ. "ಸಣ್ಣ ಶಾವಿಗೆ ಸೆಳೆದು ಸಕ್ಕರೆ, ಬೆಣ್ಣೆ ಕಾಸಿಯೇ ಕರಿದು ಕಾಸಿದ ಸೊರೆಹಾಲು ಕೂಡಿಸಿ...." ಮಾಡಿದ ಪಾಯಸದ ರುಚಿಕಂಡವರು ದಾಸರು (ಉ. ಪ್ರ., ಭಾಗ 2, ಪು. 99). ಇಂಥವರು "ರಾಮನಾಮ ಪಾಯಸ"ದ (6-68) ಮಹಿಮೆಯನ್ನೂ ಹೊಗಳಿದ್ದಾರೆ. "ಮಥಿಸಿದ ನೀರು ಮಜ್ಜಿಗೆ" (ಉ.ಪ್ರ., ಭಾಗ 1, ಪು.21) ಬಹಳಷ್ಟು ಜನಪ್ರಿಯಂತೆಯನ್ನು ಗಳಿಸಿಕೊಂಡ ಪಾನೀಯ. ಪಾನಾಕಾದಿಗಳನ್ನು ವಿಶೇಷ ಸಂದರ್ಭಗಳಲ್ಲಿ ನೀಡುತ್ತಿದ್ದರೆಂಬುದನ್ನೂ (6-126) ಕೆಲವು ಉಲ್ಲೇಖಗಳಲ್ಲಿ ಕಾಣಬಹುದು. ಫಲಾಹಾರ ಆಹಾರ ಸೇವನೆಯಲ್ಲಿ ಒಂದು ಭಾಗವಾಗಿಬಿಟ್ಟಿದೆ. ಒಮ್ಮೊಮ್ಮೆ ಈ 'ಫಲಹಾರ' ತುಂಬ ಉದ್ದನೆಯದಾಗಿರಬಹುದು. "ಕದಳಿ, ಕೆಂಬಾಳೆ, ಕಿತ್ತಳೆ, ಕಂಚಿಫಲ, ಬದರಿ, ಬೆಳುವಲ ಜಂಬೀರ, ದ್ರಾಕ್ಷೆ, ಮಾದಳ, ಮಾವಿನಹಣ್ಣು ... ಉತ್ತತ್ತಿ, ಜಂಬು, ನಾರಂಗ, ದಾಳಿಂಬ, ಮುತ್ತಾದೌದುಂಬರ ಕಾರಿಯು, ಕವಳಿ, ಕತ್ತರಿಸಿದ ಕಬ್ಬು, ಪಲಸು, ತೆಂಗಿನಕಾಯಿ, ಒತ್ತಿದ ಬೇಳೆ ನೆಲಗಡಲೆ, ಖರ್ಜೂರ.... (1-131) ಎಂಬ ಪಟ್ಟಿ ಫಲಾಹಾರದ ವೈವಿಧ್ಯವನ್ನು ತಿಳಿಸುವಂಥದು.

ಸಾಮಾನ್ಯವಾಗಿ ಕೀರ್ತನೆಗಳಲ್ಲಿ ಆಹಾರ ಪಾನೀಯಗಳ ಉಲ್ಲೇಖವೇ ಹೊರತು ಅವುಗಳ ತಯಾರಿಕೆಯ ವಿಧಾನಗಳು ಕಂಡು ಬರುವುದಿಲ್ಲ. ಒಂದು ವೇಳೆ ಬಂದರೆ ಅದು ಆಧ್ಯಾತ್ಮಿಕ ಸಾಧನೆಗೆ ಸೂಚಕವಾಗಿರುತ್ತದೆ. "ತನುವೆಂಬ ಕಲ್ಲಿನೊಳು ಮನವೆಂಬೊ ಧಾನ್ಯವ ತುಂಬಿ ವನವನದು ಬೇಳೆ ಬೀಸಿದೆನೆ, ಅಷ್ಟ ಕರ್ತೃಗಳೆಂಬೊ ನವಧಾನ್ಯವ ತಂದು ಕುಟ್ಟಿ ಕಂಟ್ಟಿ ಕಜ್ಜಾಯ ಕರಿದೆನೆ" (ಉ. ಪ್ರ., ಭಾಗ 4, ಪು. 25) ಎಂದು ಕಜ್ಜಾಯ ಕರಿಯುವುದನ್ನು ದಾಸರು ಹೇಳಿದ್ದಾರೆ. "ಕಬ್ಬಿನ ರಸದೊಳಗೆ ಗಸಗಸ ರುಬ್ಬಿಯೆ ನೀ ಬೆರಸಿ, ಹಬ್ಬು ಜೇನುತುಪ್ಪ ತಂಪಿಗೆ ಯಾಲಕ್ಕಿ ಪುಡಿ ಹಾಕಿ" ಮಾಡುವ ಪಾನಕವನ್ನೂ ವರ್ಣಿಸಿದ್ದಾರೆ (ಉ. ಪ್ರ., ಭಾಗ 2, ಪು. 99).

ತಾಂಬೂಲ ಸೇವನೆ ವಿಜಯನಗರ ಕಾಲದಲ್ಲಿ ರಸಿಕತೆಯ ಚಿಹ್ನೆಯಾಗಿತ್ತು ಎಂಬುದಕ್ಕೆ ಅನೇಕ ಕೃತಿಗಳು ಉದಾಹರಣೆಗಳನ್ನು ನೀಡುತ್ತವೆ. ಪುರಂದರದಾಸರು ಕೂಡ ಇದನ್ನು ಮರೆತಿಲ್ಲ. "ಚಿಕ್ಕಣಿ ಅಡಿಕೆ ಕೇದಿಗೆ ಕಾಚ್ ಕೂಡಿದ ಏಲಕ್ಕಿ ಜಾಯಿಕಾಯಿ ಲವಂಗ ಜಾಯಿಪತ್ರೆಯು ಮೌಕ್ತಿಕದ ಸುಣ್ಣ ಕರ್ಪೂರ ಬೆರಸಿ" (ಉ. ಪ್ರ., ಭಾಗ 3, ಪು. 36) ಮಾಡಿದ ದಿವ್ಯತಾಂಬೂಲವನ್ನು ವರ್ಣಿಸಿದ್ದಾರೆ.

ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಬರುವ ಆಹಾರ ಪಾನೀಯಗಳ ವರ್ಣನೆ ಕೂಡ ಅಂದಿನ ರಸಿಕತೆಯನ್ನೂ ವೈಭವವನ್ನೂ ತೋರಿಸುವಂತಿವೆ. "ಕಹಿ ತಿನ್ನುವುದೇಕೆ ಸಕ್ಕರೆ ನಂಜಿಕೊಳ್ಳುವುದೇಕೆ"[1] ಮುಂತಾದ ಗಾದೆಗಳ ಮೂಲಕ ತಾತ್ತ್ವಿಕ ದೃಷ್ಟಿಯನ್ನು

[1] ಚೇದು ತಿನನೇಲ ಪಂಚದಾರ ನಂಜನೇಲ (17-253).

ವ್ಯಕ್ತಪಡಿಸುವ ಸಂದರ್ಭಗಳ ಜೊತೆಗೆ ಅಸಂಖ್ಯಾತ ಆಹಾರ-ಪಾನೀಯಂಗಳನ್ನೂ ತೆಲುಗರಿಗೆ ಪ್ರಿಯವಾದ ಕೆಲವು ವಿಶೇಷ ಭಕ್ಷ್ಯಗಳನ್ನೂ ಅನ್ನಮಾಚಾರ್ಯರು ಹೇಳಿದ್ದಾರೆ. "ಹಸಿವಿನಂತೆ ಆಹಾರ" (8-96) ಎಂದರಂ. "ಹಸಿವಾದವನಿಗೆ ಅನ್ನವೆ ಬ್ರಹ್ಮ, ಲೋಲನಾದವನಿಗೆ ಲೋಕವೇ ಬ್ರಹ್ಮ"[1] ಎಂದು ಅನ್ನಮಾಚಾರ್ಯರು ಹೇಳಿದರೆ, "ಕ್ಷುಂದೆಯಿಲ್ಲದವನು ಅಮೃತಾನ್ನವನು ಸವಿಯುವನೆ" (5-140) ಎಂದು ಪುರಂದರದಾಸರು ಹೇಳುತ್ತಾರೆ. ಆಧ್ಯಾತ್ಮಿಕ ಚಿಂತನೆಯಲ್ಲಿ ಮುಳುಗಿದ್ದರೂ ಬಡವನ ಹಸಿವೆಯ ಬಗೆಗೂ ಚಿಂತಿಸಿರುವುದನ್ನು ಕಾಣಬಹುದು. "ಪತಿಯಿಲ್ಲದ ಭೂಮಿಗೆ ಬಲವಂತನೇ ರಾಜ, ಗತಿಯಿಲ್ಲದವನಿಗೆ ಕಂಡದ್ದೇ ಕೂಳು."[2] "ತಿನ್ನಬೇಕಾದ ಅನ್ನ ತಿನ್ನದೆ ಗಡಪಾರೆ ನುಂಗಿದರೆ ಹಸಿವಿಂಗುವುದೇ!"[3] "ಚಿಂತೆಯಿಲ್ಲದ ಅಂಬಲಿ ಒಂದು ಬೊಗಸೆಯೇ ಸಾಕು"[4] ಎನ್ನುತ್ತಾರೆ ಅನ್ನಮಯ್ಯ.

ಆಹಾರ ಸೇವನೆಯನ್ನು ತಾತ್ತ್ವಿಕ ಚಿಂತನೆಯ ಅಂಗವಾಗಿ ಅನ್ನಮಾಚಾರ್ಯರು ಕೂಡ ಹಲವೆಡೆಗಳಲ್ಲಿ ಬಳಸಿಕೊಂಡಿದ್ದಾರೆ. "ನಮ್ಮ ಹೊಟ್ಟೆ ಇರುವುದೆಷ್ಟು; ನಾವು ತಿನ್ನುವುದೆಷ್ಟು, ಇದಕ್ಕಾಗಿ ಎಷ್ಟೆಲ್ಲ ಪರದಾಟ"[5] ಎಂದು ಆಚಾರ್ಯರು ಹೇಳಿದರೆ; "ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" (ಉ.ಪ್ರ., ಭಾಗ 4, ಪು.25) ಎನ್ನುತ್ತಾರೆ ಪುರಂದರದಾಸರು. ಅನ್ನಮಯ್ಯ ವೇಂಕಟೇಶ್ವರನನ್ನು ಕುರಿತು ಹೇಳುವ ಕೀರ್ತನೆಯೊಂದರಲ್ಲಿ ನಿಪ್ಪಟ್ಟಿನ ಹೋಲಿಕೆ ಕೊಟ್ಟಿದ್ದಾರೆ: "ಯಾರು ಎಷ್ಟು ನಿನ್ನನ್ನು ನೆನೆಯುವರೊ ಅವರಿಗೆ ನೀನು ಅಷ್ಟೆ; ಅಂತರಾಂತರಗಳನು ಎಣಿಸಿನೋಡಲು ಹಿಟ್ಟಿನಷ್ಟೆ ನಿಪ್ಪಟ್ಟು ಎಂದಂತೆ."[6]

ಅನ್ನಮಾಚಾರ್ಯರು ಪುರಂದರದಾಸರಂತೆಯೇ ಆಹಾರ ಪದಾರ್ಥಗಳನ್ನು ಉಪಮೆಗಳಾಗಿ ಬಳಸಿಕೊಂಡಿದ್ದಾರೆ. ಉದಾಹರಣೆಗೆ "ಅಡಂಗೆಗಾಗಿ ಕತ್ತರಿಸಿದ ತರಕಾರಿ

---

1 ಆಕಟಿವಾನಿಕಿ ನನ್ನಮೆ ಬ್ರಹ್ಮಮು
ಲೋಕಮೆ ಬ್ರಹ್ಮಮು ಲೋಲುನಿಕಿ (5-282).

2 ಪತಿಲೇನಿ ಭೂಮಿಕಿ ಬಲವಂತುಡೇ ರಾಜು
ಗತಿಲೇಮಿ ಕೂಟಿಕಿ ಕನ್ನದೇ ಕೂಡು (6-63).

3 ಗಡ್ಡಪಾರ ಮಿಂಗಿತೇ ಆಕಲಿ ದೀರೇನಾ (5-119).

4 ಚಿಂತಲೇನಿಯಂಬಲೊಕ್ಕ ಚೇರೆಡೇ ಚಾಲು (ಅಧ್ಯಾ. ಸಂ., 1, ಪು. 78).

5 ಕಡುಪೆಂತ ತಾಗುಡುಚು ಕುಡುಪೆಂತ ದೀನಿಕೈ
ಪಡನಿಪಾಟ್ಲ ನೆಲ್ಲಬಡಿ ಪೊರಲನೇಲಾ (5-205).

6 ಎಂತ ಮಾತ್ರಮುನ ನೆವ್ವರು ದಲಚಿನ ಅಂತ ಮಾತ್ರಮೇ ನೀವು
ಅಂತರಾಂತರಮು ಲೆಂಚಿ ಚೂಡ ಪಿಂಡಂತೇ ನಿಪ್ಪಟಿಯನ್ನಟ್ಲು (ಅಧ್ಯಾ. ಸಂ., 2, ಪು.5).

ಯಂತಾಯಿತು ಬದುಕು'' [1] ''ಹಸಿವಾದವರು ಅನ್ನಕ್ಕಿಂತ ಮುಂಚೆ ಪಲ್ಯ ತಿನ್ನುವಂತೆ'' [2] ಮುಂತಾದ ಹೋಲಿಕೆಗಳನ್ನು ನೋಡಬಹುದು.

ವೇಂಕಟೇಶ್ವರನಿಗೆ ಕೊಡುವ ನೈವೇದ್ಯ ನವರಸಭರಿತವೂ ವೈಭವೋಪೇತವೂ ಆಗಿರುತ್ತದೆ. ಪುಲುಗಮು (ಹುಗ್ಗಿ), ದುಗ್ಧಾನ್ನ, ಅಪ್ಪ, ತುಪ್ಪ, ಸಕ್ಕರೆ, ಕುಟ್ಟಿದಹಿಟ್ಟಿನ ಪದಾರ್ಥಗಳು, ಬೆಲ್ಲ, ತೊವ್ವೆ, ಕೆನೆಮೊಸರು, ಉಪ್ಪಿನಕಾಯಿ ಮುಂತಾದವುಗಳಿಂದ ಕೂಡಿದ ನೈವೇದ್ಯವನ್ನು ತೆಗೆದುಕೊಳ್ಳಬೇಕೆಂದು ಅನ್ನಮಾಚಾರ್ಯರು ಮುಂದಿನ ಕೀರ್ತನೆಯಲ್ಲಿ ಪ್ರಾರ್ಥಿಸಿದ್ದಾರೆ :

ಕಲವಂಟಕಮುಲು ಪುಲುಗಮುಲು ದುಗ್ಧಾನ್ನಮುಲು
ಪಲುತೆರಗುಲೈನ ಅಪ್ಪಮುಲಗಮುಲು
ನೆಲಕೊನ್ನ ನೇತುಲುನು ನಿರತಂಪು ಚಕ್ಕೆರಲು
ಗಿಲುಕೊಟ್ಟುಚನು ನಾರಗಿಂಚವಯ್ಯ.

ಪೆಕ್ಕುವಗು ಸೈದಂಪು ಪಿಂಡಿವಂಟಲಮೀದ
ಪಿಕ್ಕಟಿಲು ಮೆಱುಗುಪೊಡಿ ಬೆಲ್ಲಮುಲುನು
ಪೊಕ್ಕಟಿಗ ಕಲಪುಕೊನಿ ಪೊಲುಪು ಪಪ್ಪುಲತೋಡ
ಕಿಕ್ಕಿರಿಯ ನಿಟುಲಾರಗಿಂಚವಯ್ಯಾ.

ಕಡು ಮಧುರಮೈನ ಮೀಗಡ ಪೆರುಗುಲನು ಮಂಚಿ
ಅಡಿಯಾಲ ಪೂರುಗಾಯಲ ರುಚುಲತೋ
ಬಡಿ ಬಡಿಗ ನವಕಂಪು ಪಳ್ಳೆರಂಬುಲ ತೋಡ
ಕಡು ನಾರಗಿಂಚು ವೇಂಕಟ ಗಿರೀಂದ್ರಾ (ಅಧ್ಯಾ. ಸಂ., 1, ಪು. 94).

ಚಕ್ಕಿಲಾಲು (ಚಕ್ಕುಲಿ), ಅಡುಕುಲು (ಅವಲಕ್ಕಿ), ಸನಿಗೆ ಪಪ್ಪುಲನು (ಕಡಲೆ ಬೀಜ), ಚೆಕ್ಕಿನ ಮೆಂತ್ಯನಿ ತೋಟ ಬೆಱಿಕುಲುನು (ಕತ್ತರಿಸಿದ ಮೆಂತ್ಯನೆಯ ತೋಟದ ಕಬ್ಬು), ನವ್ವುಲು (ಎಳ್ಳು), ಚಿಟಿಬೆಲ್ಲಾಲು (ಬೆಲ್ಲದ ಅಚ್ಚು) ಮುಂತಾದವು (ಅಧ್ಯಾ. ಸಂ., 1, ಪು. 171) ಕನ್ನಡಿಗರಿಗೂ ಪರಿಚಿತವಾದವೇ.

ಕೆಲವು ಆಹಾರ ಪದಾರ್ಥಗಳಾದ ಈರುಳ್ಳಿ, ಬೆಳ್ಳುಳ್ಳಿ, ಮೂಲಂಗಿ ಮೊದಲಾದ ವನ್ನು ಬ್ರಾಹ್ಮಣಾದಿಗಳು ತಿನ್ನಬಾರದೆನ್ನುವರು. ಇವು ನಮ್ಮ ದೇಶದವಲ್ಲವಾದ್ದರಿಂದ ಧರ್ಮಾಚರಣೆಗಳಲ್ಲಿ ಮಾತ್ರವಲ್ಲದೆ ದಿನನಿತ್ಯದ ಬಳಕೆಗೂ ನಿಷಿದ್ಧ ಎನ್ನಲಾಗಿದೆ. ''ಉಳ್ಳಿ ತಿಂದ ಕೋಮಟಿ ಸುಮ್ಮನೆ ಇರುವಂತೆ'' [3] ಎಂಬುದು ಗಾದೆ ಮಾತಾಗಿದೆ. ಇದನ್ನು

[1] ವಂಡದರಿಗಿನ ಕೂರವಲೆನಾಯ ಬತುಕು (ಅಧ್ಯಾ. ಸಂ., 1, ಪು. 62).

[2] ಕೂಡುಲೇಕ ಆಕಟಿಕಿ ಕೂರ ದಿನ್ನಟ್ಲು
ಆಡನೀಡ ಮೋವಿ ಚಿಗುರಾಕು ದಿನೇರಯ್ಯ (ಅಧ್ಯಾ. ಸಂ., 1, ಪು. 157).

[3] ಉಲ್ಲಿದಿನ್ನ ಕೋಮಟಿ ಪೂರಕವುನ್ನಟ್ಲು (7-260).

ಅನ್ನಮಾಚಾರ್ಯರು ಹೇಳಿದ್ದಾರೆ. ಉಳ್ಳಿತಿಂದವ ಬಾಯಿಬಿಟ್ಟರೆ ಎಲ್ಲರಿಗೂ ತಿಳಿದು ಬಿಡುತ್ತದೆ. ಈರೀತಿ ನಿಷಿದ್ಧ ವಸ್ತುಗಳನ್ನು ತಿನ್ನುವ ಸನ್ನಿವೇಶವೊಂದು ಪುರಂದರದಾಸರ ಕೀರ್ತನೆಯಲ್ಲೂ ಬರುತ್ತದೆ.[1]

ಹುಣಿಸೆಕಾಯಿಗಳನ್ನು ಕುಟ್ಟಿ ಉಪ್ಪು, ಅರಿಸಿನ ಹಾಕಿ 'ತೊಕ್ಕು' ತಯಾರಿಸಿ ಇಟ್ಟುಕೊಂಡು ಬೇಕಾದಾಗ ಪಚ್ಚಡಿಮಾಡಿಕೊಳ್ಳುತ್ತಾರೆ. ಇಂಥ ತೊಕ್ಕನ್ನು ನೋಡಿದ ರೇನೇ ಬಾಯಲ್ಲಿ ನೀರೂರುತ್ತದೆಂದು ಅನ್ನಮಾಚಾರ್ಯರು ಹೇಳುತ್ತಾರೆ.[2] ಇಡ್ಲಿ (ಇಡ್ಡನಲು 9-10), ಕರ್ಜಿಕಾಯಿ (ಕರಜಿಕಾಯ 4-4), ಗಟ್ಟಿಮೊಸರು (ಗಡ್ಡ ಪೆರುಗು 14-51), ವಡೆ (ಗಾರೆ 4-4), ಪಾನಕ (ಪಾನಕಮು 12-14), ಪರಮಾನ್ನ (ಪರಮಾನ್ನಮು 4-4), ರಾಜಾನ್ನ (ರಾಜಾನ್ನಮು 10-27) ಮುಂತಾದ ಅನೇಕ ವಿಧವಾದ ಆಹಾರ ಪಾನೀಯಗಳ ಉಲ್ಲೇಖ ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಕಂಡು ಬರುತ್ತದೆ.

ತಾಂಬೂಲ ಸೇವನೆ ರಸಿಕತೆಯ ಸಂಕೇತ. ಬಗೆಬಗೆಯ ವೀಳ್ಯಗಳನ್ನು ತಯಾರಿಸು ತ್ತಿದ್ದರೆಂಬುದನ್ನು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ನೋಡಬಹುದು: "ಒಗರು ಮತ್ತು ಖಾರದ ವೀಳ್ಯದಂತೆ ಒಮ್ಮೆ ನಗಿಸುವನು ಮತ್ತೊಮ್ಮೆ ಮುನಿಸಿಕೊಳ್ಳುವಂತೆ ಮಾಡುವನು"[3] ಎಂದು ಪ್ರಿಯನನ್ನು ಪ್ರೇಯಸಿ ವರ್ಣಿಸುತ್ತಾಳೆ. ಇನ್ನೊಂದು ಕಡೆ ತಾಂಬೂಲ ಸೇವನೆಯನ್ನು ಸೋಮರಸಪಾನಕ್ಕೆ ಹೋಲಿಸಿರುವ ಅಪೂರ್ವಕಲ್ಪನೆ ಕಂಡು ಬರುತ್ತದೆ. ಕಾಮುಯಾಗ ಮಾಡಿದ ಸ್ತ್ರೀ ತನ್ನ ಪ್ರೇಮವೆಲ್ಲ ದೇವತಾ ಪ್ರೀತಿಗಾಗಿ ಎಂದು ಕೊಂಡು ಸೋಮರಸ ಕುಡಿದಂತೆ ತಾಂಬೂಲರಸಪಾನ ಮಾಡಿದಳೆಂದು ಅನ್ನಮಾ ಚಾರ್ಯರು ಚರೆದಿದ್ದಾರೆ.[4]

ಪುರಂದರದಾಸರು ಮತ್ತು ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ಉಲ್ಲೇಖಿ ಸಿರುವ ಆಹಾರ ಪಾನೀಯಗಳನ್ನು ಪರಿಶೀಲಿಸಿದಾಗ ಸಮಾನ ಅಂಶಗಳು ಕಂಡುಬರುತ್ತವೆ. ಜೊತೆಗೆ ಭೌತಿಕ ಅವಶ್ಯಕತೆಯಾದ ಆಹಾರವನ್ನೂ ಆಧ್ಯಾತ್ಮಿಕತೆಯ ಕಡೆಗೊಯ್ದಿರುವುದು ಎದ್ದು ಕಾಣುವ ಪ್ರತ್ಯೇಕ ಅಂಶವಾಗಿದೆ.

---

[1] ಬೆಳ್ಳುಳ್ಳಿ ನುಗ್ಗೆಕಾಯಿ ಕವಡಿಕಾಯಿಗಳು ತಿಂಬೆವಮ್ಮ
ಮುಲ್ಲಂಗಿ ಪಲ್ಲೆ ಗೆಜ್ಜರಿ ಪುಂಡೆಪಲ್ಲೆವು ಸಾಲದಮ್ಮ
ಸುಳ್ಳುಯಾಕಾಡಲಿ ಗಂಡಸರು ತುಗಳುಂಬೋರಮ್ಮ.... (ಉ. ಪ್ರ., ಭಾಗ 4, ಪು.91).

[2] ಚಿಂತಕಾಯ ತೊಕ್ಕು ಚೂಚಿತೇನೆ ನೋರೂರು (6-234).

[3] ನಗಯಿಂಚು ನೊಕವೇಳ ನಲಗಿಂಚು ನೊಕವೇಳ
ವೊಗರು ಕಾರಪುವಿಡೆ ಮುಬ್ಬಿಂಚಿನಟ್ಲು (7-189).

[4] ಪೊಲು ಪಲರ ಸುರತ ತಾಂಬೂಲ ರಸಪಾನಂಬು
ನಲಿನಾಕ್ಷಿ ಸೋಮಪಾನಂಬುಗಾನು (ಅನ್ನ. ಸಂ., 2, ಪು. 42).

## ಗೃಹೋಪಕರಣಗಳು

ಮನೆಯಲ್ಲಿ ಬೇರೆ ಬೇರೆ ಕೆಲಸಗಳಿಗಾಗಿ ಬಳಸುವ ವಸ್ತು ಸಮುದಾಯವೂ ಸಂಸ್ಕೃತಿಯ ಅಧ್ಯಯನದಲ್ಲಿ ಪಾತ್ರವಹಿಸುತ್ತದೆ. ಅಡುಗೆಗೆ, ಊಟಕ್ಕೆ, ಕುಟ್ಟುವುದಕ್ಕೆ, ಬೀಸುವುದಕ್ಕೆ ಮತ್ತು ಬೇರೆ ಬೇರೆ ಕೆಲಸಗಳಿಗೆ ಬಳಸುವ ಉಪಕರಣಗಳು ಪ್ರಾದೇಶಿಕ ಭಿನ್ನತೆಯಿಂದ ಕೂಡಿರುತ್ತವೆ. ಇಂಥ ಸಾಮಾನ್ಯ ವಸ್ತುಗಳನ್ನು ಕೂಡ ವಿವಿಧ ಸಂದರ್ಭ ಗಳಲ್ಲಿ ವಿವಿಧ ಭಾವಗಳನ್ನು ತಿಳಿಸಲು ಕೀರ್ತನಕಾರರು ಬಳಸಿಕೊಂಡಿದ್ದಾರೆ.

ಮನುಷ್ಯ ಬೇಟೆಯಾಡುತ್ತಿದ್ದ ಕಾಲದಲ್ಲಿ ಬಿಲ್ಲು ಬಾಣಗಳಂಥ ಮೂರು ನಾಲ್ಕು ಉಪಕರಣಗಳನ್ನು ಬಿಟ್ಟರೆ ಹೆಚ್ಚಿನ ವಸ್ತುಗಳನ್ನು ಬಳಸುತ್ತಿರಲಿಲ್ಲ. ಗೃಹನಿರ್ಮಾಣದ ಹಂತ ತಲುಪಿದ ಮೇಲೆ ಹಲವು ಬಗೆಯ ಕೆಲಸಗಳಿಗೆ ಬಗೆಬಗೆಯ ವಸ್ತುಗಳನ್ನು ತಯಾರು ಮಾಡಿಕೊಂಡು ಅನಂತರದ ಹಂತಗಳಲ್ಲಿ ಆ ವಸ್ತುಗಳನ್ನು ಕಲಾತ್ಮಕವಾಗಿ ತಯಾರಿಸುವುದನ್ನು ಮನುಷ್ಯ ಕಲಿತ.

ಮನೆಯ ಕೆಲಸಗಳಿಗೆ ಬಳಸುವ ಮಡಕೆ, ಬಿಂದಿಗೆ, ಚೀಲ, ಒನಕೆ, ಮಂಚ ಮುಂತಾದ ವಸ್ತುಗಳು ಸಾಹಿತಿಯ ಕೈಯಲ್ಲಿ ಹೇಗೆ ಕ್ರಿಯಾತ್ಮಕ ಮೌಲ್ಯವನ್ನು ಪಡೆಯು ತ್ತವೆ. ಎಂಬುದನ್ನು ಕೀರ್ತನಕಾರರ ಉಲ್ಲೇಖಗಳಿಂದ ಕಾಣುತ್ತೇವೆ. ಗಾದೆ, ಉಪಮೆ, ರೂಪಕ, ಒಗಟು ಇತ್ಯಾದಿಗಳ ರೂಪದಲ್ಲಿ ಸಾಮಾನ್ಯ ವಸ್ತುಗಳನ್ನು ಬಳಸಿ ತಮ್ಮ ಜಾಣ್ಮೆ ಯನ್ನು ತೋರಿದ್ದಾರೆ. ಇದರಿಂದ ಆ ಕಾಲದಲ್ಲಿ ಬಳಸುತ್ತಿದ್ದ ಭೌತಿಕವಸ್ತು ಸಮುದಾಯದ ಅರಿವಾಗುವುದರ ಜೊತೆಗೆ ಸಾಹಿತ್ಯದ ಅಭಿವ್ಯಕ್ತಿಗೆ ಹೋಲಿಕೆಯ ವಸ್ತುಗಳಾಗಿಯೂ ಅವುಗಳ ಪಾತ್ರವನ್ನು ತಿಳಿದಂತಾಗುತ್ತದೆ. ''ಹೃದಯವೆಂಬೊ ಮಡಕೆ'' (ಉ. ಪ್ರ., ಭಾಗ 2, ಪು. 43) ಯಂಥ ಉಪಮಾನಗಳು ಭಾರತೀಯ ಸಾಹಿತ್ಯದಲ್ಲಿ ಸರ್ವೇ ಸಾಮಾನ್ಯವಾಗಿ ಕಂಡುಬರುತ್ತವೆ. ''ಧರ್ಮವೆಂಬ ಮಡಕೆಯಲ್ಲಿ ನಿರ್ಮಲ ಮನ ಗಂಗೆ ತುಂಬ'' (ಹ. ಕೀ. ತ., ಪು. 144) ಬೇಕೆಂದು ದಾಸರು ಹೇಳುತ್ತಾರೆ. 'ಕೊಡ' 'ಬಿಂದಿಗೆ', 'ಚಿನ್ನದಗಿಂಡಿ', 'ಗಂಗಾಳ' (ಉ. ಪ್ರ., ಭಾಗ 1, ಪು. 14, 19, 45) ಮುಂತಾದ ಪಾತ್ರೆಗಳಲ್ಲಿ ಕೆಲವು ಪ್ರತಿನಿತ್ಯ ಬಳಕೆಯಾಗುವುದಾದರೆ, ಚಿನ್ನದ ಗಿಂಡಿ ಯಂಥವು ಅಪರೂಪದ ವಸ್ತುಗಳಾಗಿರುತ್ತವೆ. ಏಕೆಂದರೆ ಶ್ರೀಸಾಮಾನ್ಯ ಚಿನ್ನದ ಗಿಂಡಿಯನ್ನು ಉಪಯೋಗಿಸಲು ಸಾಧ್ಯವೇ ? ಇದೇನಿದ್ದರೂ ಶ್ರೀಮಂತರ ಬಳಿ ಕಂಡುಬರುವಂಥದು.

ಬಾಲಕೃಷ್ಣನನ್ನು ವರ್ಣಿಸುವ ಅನೇಕ ಸಂದರ್ಭಗಳಲ್ಲಿ ಈ ತರಹದ ಗೃಹೋಪ ಕರಣಗಳ ಉಲ್ಲೇಖ ಕಂಡುಬರುತ್ತದೆ. ''ಕಾಲ ಮೇಲೆ ಮಲಗಿ ಸಿಂಪಿಯಲಿ ಹಾಲು ಕುಡಿಯುವ''(4-11) ಚಿತ್ರ; ''ಅಟ್ಟದ ಮೇಲಿಟ್ಟಿಹ ಚಟ್ಟಿಗೆ ಹಾಲ ಬಟ್ಟನಿಕ್ಕಿ ಚೀಪುವ'' (4-67) ಚಿತ್ರ ; ''ಒರಳನೆಳೆತಂದು ಮತ್ತಿಮರ ಮುರಿದೋಡಿದ'' (4-44) ಲೀಲೆ ; ''ಛಲದಿಂದ ಕೊಡಲಿಯ ಪಿಡಿವೆನೆಂದಳುತಾನೆ .. ನೆಲುವಿನ ಬೆಣ್ಣೆ ಕೈ ನಿಲುಕದೆಂದಳು ತಾನೆ'' (4-24) ಮುಂತಾದ ಚಿತ್ರಗಳಲ್ಲಿ ಸಿಂಪಿ, ಚಟ್ಟಿಗೆ, ಒರಳು, ಕೊಡಲಿ, ನೆಲುವು

ಇತ್ಯಾದಿ ಉಪಕರಣಗಳನ್ನು ನೋಡಬಹುದು. ಕಂಚುಕನ್ನಡಿ (2-44), ನಿಲುವುಗನ್ನಡಿ (4-66) ಮುಂತಾದ ಉಲ್ಲೇಖಗಳನ್ನೂ ಪುರಂದರದಾಸರ ಕೀರ್ತನೆಗಳಲ್ಲಿ ನೋಡಬಹುದು.

ಅತಿಶಯ ವೈಭವದಿಂದ ಮೆರೆಯುವ ಪರಮಾತ್ಮನನ್ನು ಮಾನವನ ಸ್ಥಿತಿಗೆ ತಂದು ಪ್ರೀತಿ, ವಾತ್ಸಲ್ಯಗಳನ್ನು ತೋರಿಸುವುದು ಭಕ್ತಿಯ ಸ್ವರೂಪ. ಇಂಥ ಪರಮಾತ್ಮನನ್ನು 'ಹೇಗೆ ಮೆಚ್ಚಿಸಲಿ' ಎಂದು ಯೋಚಿಸುತ್ತಾ ಪುರಂದರದಾಸರು ಹೀಗೆನ್ನುತ್ತಾರೆ: "ಹಾಸಿಗೆಯನು ತಂದು ಹಾಸುವೆನೆಂದರೆ ಶೇಷನ ಮೇಲೆ ನೀ ಪವಡಿಸಿರ್ಪೆ, ಬೀಸಣಿಗೆಯ ತಂದು ಬೀಸುವೆನೆಂದರೆ ಬೀಸುತಿಹನು ಖಗ ತನ್ನ ಪಕ್ಕದಲಿ" (ಉ. ಪ್ರ., ಭಾಗ 2, ಪು. 29). ಹಾಸಿಗೆ, ಮಂಚ ಮುಂತಾದ ಗೃಹೋಪಕರಣಗಳಲ್ಲಿ ತೋರಿಸುವ ವೈವಿಧ್ಯ ಮತ್ತು ರಸಿಕತೆ ಗಮನಾರ್ಹವಾದುದು. "ಚೆಂದುಳ್ಳ ಹಾಸಿಗೆ" (ಉ. ಪ್ರ., ಭಾಗ 1, ಪು. 29) "ಸುಪ್ಪತ್ತಿಗೆ (5-1), "ಗಿಲುಕು ಮಂಚ" (4-65), "ಹಾಸುಮಂಚ" (ಉ. ಪ್ರ., ಭಾಗ 1, ಪು. 47), "ಚಪ್ಪರಮಂಚ" (ಅದೇ, ಭಾಗ 3, ಪು. 27), "ತೂಗುಮಂಚದಿ ಹಂಸತೂಲದ ಹಾಸಿಗೆ ನಾಗಸಂಪಿಗೆ ಹೂವಿನ ಒರಗು" (ಅದೇ. ಪು. 58), "ಪಟ್ಟೆಮಂಚ" (3-99) ಮುಂತಾದವನ್ನು ಬಳಸುತ್ತಿದ್ದರೆಂದು ತಿಳಿದು ಬರುತ್ತದೆ.

ಗೃಹೋಪಕರಣಗಳನ್ನು ವಿವಿಧ ಸಂದರ್ಭಗಳಲ್ಲಿ ಬಳಸಿರುವ ಇಂಥ ಹಲವು ಉಲ್ಲೇಖಗಳು ಕಂಡುಬರುತ್ತವೆ. "ವೈರಾಗ್ಯ ಕಲ್ಲಲಿ ಬೀಸಿ ...ಬುದ್ಧಿಯಿಂದ ಪಾಕಮಾಡಿ ಹರಿವಾಣಕೆ ಬಡಿಸಿಕೊಂಡ" (ಉ. ಪ್ರ , ಭಾಗ 2, ಪು. 43) ಸಂದರ್ಭವನ್ನು ನೋಡಬಹುದು. "ಸೆಳೆ ನಡುವಿನೊಳಗೆ ಕತ್ತರಿ, ಕಳೆಯ ಸಂಚಿ, ಗಜುಗಚೀಲ...." ಇರುವ ಕೃಷ್ಣನ (4-94) ಚಿತ್ರವೊಂದು. "ಕಾಸಿದ್ದ ಹಾಲುಗಳ ಕಾವಡಿಯ ತುಂಬಿಟ್ಟು" (1-177) 'ಏಳಯ್ಯ ಬೆಳಗಾಯಿತು' ಎಂದು ಪ್ರಭಾತಗೀತೆ ಹಾಡುವ ಚಿತ್ರ ಇನ್ನೊಂದು.

ಗೃಹೋಪಕರಣಗಳನ್ನು ಬಳಸುವ ರೀತಿ ಬಳಸದೆ ಯಾವುದಕ್ಕೋ ಯಾವುದನ್ನೋ ಬಳಸಿದರೆ ಹಾಸ್ಯಾಸ್ಪದವಾಗಿ ಕಾಣುತ್ತದೆ. ಕೃಷ್ಣನ ತಂತ್ರೂರಿ ನಾದ ಕೇಳಿದವಳೊಬ್ಬಳು ಅವನನ್ನು ಕಾಣಲು ಹೋಗುವ ಆತುರದಿಂದ ವಸ್ತುಗಳನ್ನು ಅಸ್ತವ್ಯಸ್ತವಾಗಿ ಬಳಸುವ ಸಂದರ್ಭವನ್ನು ಪುರಂದರದಾಸರು ಹಾಸ್ಯಭರಿತವಾಗಿ ಚಿತ್ರಿಸಿದ್ದಾರೆ: "ಹರಿಸ್ವರವೆನ್ನುತ ಒಬ್ಬಳು ಪೇಳಿ, ನೆರೆಮನೆಗ್ಹೋಗಿ ತಾ ಕೇಳಿದಳು, ಒರಳ ಕೊಟ್ಟೀರಾ ಪರಮಾನ್ನ ಮಾಡಿ, ತ್ವರದಿ ಮರಳಿ ತಂದಿಪ್ಪೆನೆನುತಲಿ, ವನಿತೆ ಸೌಟಿನೊಳಕ್ಕಿಯ ತೊಳಸಿ, ಒನಕೇಲಿ ಓಗರವ ಹದನೋಡಿ....ತೊಟ್ಟಿಲೊಳಗೆ ಶಿಶು ಅಳುವುದ ಕಂಡು ಕಟ್ಟಿದ ನವಿಲನು ತೂಗಿದಳು.... ಗಿಳಿಗೆ ಹಾಸಿದಳು ಹಾಸುಮಂಚವ, ಆಳಿಯನ ಪಂಜರದೊಳಗಿರಿಸಿ, ತೊಟ್ಟಿಲೊಳಗೆ ಎಡೆ ಮಾಡಿದಳು..." (ಉ. ಪ್ರ., ಭಾಗ 1, ಪು. 47).

ಭಾರತೀಯ ಗೃಹೋಪಕರಣಗಳಲ್ಲಿ ಏಕರೂಪತೆ ಕಾಣುವುದು ಸಹಜ. ಅದರಲ್ಲೂ ದಕ್ಷಿಣಭಾರತದ ವಸ್ತುಸಮುದಾಯ ಬಹುಪಾಲು ಒಂದೇ ರೀತಿ ಇರುತ್ತದೆ.

ಅನ್ನಮಾಚಾರ್ಯರು ಬದುಕಿನ ವೈರಾಗ್ಯದಿಂದ "ಎಂಥ ಬದುಕು ಎಂಥ ಬದುಕು ಮುಂತ (ಚಿಕ್ಕಪಾತ್ರೆ) ನೀರಿನಲ್ಲಿ ಮುಳುಗುವ ಬದುಕು"[1] ಎನ್ನುತ್ತಾರೆ. ಈ ಬದುಕು "ಚಿಕ್ಕಪಾತ್ರೆ ನೀರಿನಲ್ಲಿ ಮುಳುಗಿ ಎದ್ದಂತೆ, ನೆಲುವಿನ ಮೇಲೆ ನೇತಾಡುವಂತೆ"[2] ಎಂದಿದ್ದಾರೆ.

ಮಡಕೆ, ಚೆಂಬು, ಊಟದತಟ್ಟೆ, ಗೋಣಿಚೀಲ ಮುಂತಾದ ಅತಿಸಾಮಾನ್ಯ ವಸ್ತುಗಳನ್ನು ಅನ್ನಮಾಚಾರ್ಯರ ಅನೇಕ ಕೀರ್ತನೆಗಳಲ್ಲಿ ಕಾಣಬಹುದು. "ಕುಂಬಾರ ನಿಲ್ಲದೆ ಕೊಡ ಹುಟ್ಟುತ್ತದೆಯೋ, ನನ್ನಿಯೊಳು ನೀನು ಹುಟ್ಟಿಸದೆ ನಾನು ಹುಟ್ಟಿದೆನೇ"[3] ಎಂದು ಪ್ರಶ್ನಿಸುತ್ತಾರೆ. ಎಲ್ಲೋ ಹುಡುಕಬೇಕಾದ ವಸ್ತುವನ್ನು ಇನ್ನೆಲ್ಲೋ ಹುಡುಕುವುದರಿಂದ ಪ್ರಯೋಜನವಿಲ್ಲ. "ಕುಂಬಾರನ ಆವಿಗೆಯಲ್ಲಿ ಚೆಂಬನ್ನು ಬಯಸಿ ಹುಡುಕುವುದೇಕೆ, ನಂಬಿದ ಶ್ರೀಪತಿಯನ್ನು ಸೇವಿಸಿ ಬದುಕಿರೋ"[4] ಎಂದು ಪ್ರಬೋಧಿಸುತ್ತಾರೆ. ಊಟದತಟ್ಟೆ (ಕಂಚಮು) ಆಚಾರ್ಯರ ಕಾಲದಲ್ಲೇ ಬಳಕೆಯಲ್ಲಿತ್ತು. "ಸಾಕುವ ತಂದೆ ತಾಯಿ ಪ್ರೀತಿಯಿಂದ ಬಡಿಸಲು ತಟ್ಟೆಯನ್ನು ಕಾಲಿಂದೊದೆಯುವ ಸಂಗತಿ ಆ ಮಕ್ಕಳಿಗೆ"[5] ಎನ್ನುತ್ತಾರೆ.

ಮುಚ್ಚಳದಂಥ ಸಣ್ಣ ವಸ್ತುಗಳನ್ನು ಕೂಡ ಆಚಾರ್ಯರು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. "ಬಾಯಿಗೆ ಬಂದಂತೆ ಆಡುವವರಿಗೆ ನಾನೇನು ಹೇಳಲಿ, ಕೆರೆಯನ್ನು ಮುಚ್ಚಲು ಮುಚ್ಚಳ ಇದೆಯೋ"[6] ಎಂದು ಹೇಳುವಾಗ ಬಹುಶಃ ಕೆಲವು ವ್ಯಕ್ತಿಗಳ ವಿಷಯದಲ್ಲಿ ತಮಗಾದ ಅನುಭವವನ್ನು ಆಚಾರ್ಯರು ಹೇಳಿರಬಹುದು. "ಸೌಟು ಪಲ್ಯದ ರುಚಿ ಅರಿಯುವುದೇ" ಎಂಬ ಗಾದೆಯನ್ನು ಹಾಗೆಯೇ ಒಂದು ಕಡೆ ಬಳಸಿಕೊಂಡಿದ್ದಾರೆ.[7]

---

[1] ಏಟಿ ಬ್ರದುಕು ಯೇಟಿ ಬ್ರದುಕು....
ಮುಂತ ನೀಳ್ಳನೇ ಮುನಿಗೇಟಿ ಬ್ರದುಕು (ಅಧ್ಯಾ. ಸಂ., 1, ಪು. 233).

[2] ಮುಂತಲೋನಿ ನೀಟ ಮುನಿಗಿ ಲೇಚುಟ
ಉಟ್ಟಿಪೈ ಚೆರಲಾಟ ಮೂರ ಬೊತ್ತುಲ ಕೂಡು (ಅದೇ, ಪು. 48-49).

[3] ಕುಮ್ಮರವಾಡು ಲೇಕೇ ಕುಂಡದಾಬುಟ್ಟುನಾ
ನೆಮ್ಮಿ ನೀವು ಪುಟ್ಟಿಂಚಕ ನೇನೇ ಪುಟ್ಟಿತಿನಾ (6-130).

[4] ಕುಮ್ಮರಾವಮುನ ಚೆಂಬುಕೋರಿ ವೆದಕನೇಲ
ನಮ್ಮಿನ ಶ್ರೀಪತಿಗೊಲ್ಚಿ ಬದುಕರೋ ಪ್ರಜಲು (10-135).

[5] ಪೆಂಚೇಟಿ ತಲಿದಂಡ್ರುಲು ಪ್ರಿಯಮೈ ವಡಿಂಚಗಾನು
ಕಂಚಮು ಕಾಲದನ್ನ ಸಂಗತಿಯಾ ಬಿಡ್ಡಲಕು (8-20).

[6] ಏಮೈನಾ ನಾಡೇ ವಾರಿ ನೇ ಮಂದುನು
ಮೋಮು ಚೂಚಿತೇ ಚೆರುವು ಮುಯ್ಯಮೂಕುಡುನ್ನದಾ (14-67

[7] ತೆಡ್ಡು ಚೌಲೆರುಗುನಟಯ್ಯ (11-1-101).

ವೇಂಕಟೇಶ್ವರನಿಗೆ ಸಲ್ಲಿಸುವ ಅನೇಕ ಸೇವೆಗಳಲ್ಲಿ ಹಾಸಂಗೆ ಸೇವೆಯೂ ಒಂದು. ಅದುದರಿಂದ ಮಂಚದ ಬಗೆಗೆ ಹಲವು ಉಲ್ಲೇಖಗಳು ಕಂಡುಬರುತ್ತವೆ. "ಪಟ್ಟೆಮಂಚ" (ಶೃ. ಸಂ., 29, ಪು. 346) ಇಂದಿಗೂ ಜನಪ್ರಿಯವಾಗಿದೆ. ಮಂಚದಂಥ ವಸ್ತುವನ್ನು ಉಪಮೆಯಾಗಿ ಹೇಗೆ ಬಳಸಿಕೊಳ್ಳಬೇಕೆಂಬ ಆಲೋಚನೆ ಅನ್ನಮಾಚಾರ್ಯರಿಗೆ ಬಂದಿರಬೇಕು. "ಎದ್ದು ಬಿದ್ದು ಒಂದು ಉಪಮೆಯನ್ನು ಯೋಚಿಸದೆ, ಮಂಚದ ಕೆಳಗೇ ಒಂದು ಬಾವಿ ಇರುತ್ತದೆ"[1] ಎಂದಿದ್ದಾರೆ. ಮಲಗುವ ಮಂಚದ ಕೆಳಗೆ ಇರುವ ಬಾವಿಯು ಅರಿವಿಲ್ಲದೆ ನಿಶ್ಚಿಂತೆಯಿಂದಿರುವವರ ಬಗ್ಗೆ ಇಲ್ಲಿ ಹೇಳಿದ್ದಾರೆ. ಇದೇ ಉಪಮೆಯನ್ನು ಹಲವೆಡೆ ಬಳಸಿದ್ದಾರೆ (9-84, 280 ; 10-135). ಅನ್ನಮಾಚಾರ್ಯರ ಕಾಲದಲ್ಲಿ ಸೊಳ್ಳೆಪರದೆಯು ಬಳಕೆ ಇತ್ತು. "ಸೊಳ್ಳೆಪರದೆ ಪರೆಯಲ್ಲಿ ನಿದ್ರಿಸುತ್ತಾ ಸುಳ್ಳು ಹೇಳುತ್ತಿದ್ದೀಯೆ, ನೀನು ತುಂಬ ಬುದ್ಧಿವಂತ"[2] ಎಂದಿದ್ದಾರೆ ವೇಂಕಟರಮಣನನ್ನು. ಇನ್ನೊಂದು ಕಡೆ ಸೊಳ್ಳೆ ಪರದೆಯನ್ನು ಹಾವಿಗೆ ಹೋಲಿಸಿರುವ ಉಪಮೆ ಇದೆ. "ವಿನ್ನಪಗಳನ್ನು ಕೇಳಬೇಕು ಅವು ತುಂಬ ಚೋದ್ಯವಾದವು, ಹಾವಿನ ಸೊಳ್ಳೆಪರದೆ ಮೇಲೆತ್ತಯ್ಯ"[3] ಎಂದು ಒಂದು ಪ್ರಭಾತಗೀತೆಯಲ್ಲಿ ಹೇಳಲಾಗಿದೆ. ಆದಿಶೇಷ ವಿಷ್ಣುವಿಗೆ ಎಲ್ಲ ವಿಧದ ಸೇವೆ ಮಾಡುವನೆಂದು ಹೇಳುತ್ತಾರೆ.[4] ಅವನು ಸೊಳ್ಳೆ ಪರದೆಯಾಗಿಯೂ ಇರುತ್ತಾನೆ. ಹಾವಿನಪೊರೆ ಸೊಳ್ಳೆಪರದೆಯಂತೆಯೆ ಇರುವುದು ಸುವಿದಿತ.

ಗಡಿಯಾರ ಆಧುನಿಕ ಕಾಲದ ಅತ್ಯಗತ್ಯ ವಸ್ತು. ಪುರಂದರದಾಸರು "ಸದ್ದಡಗಿತು ಗಡಿಯಾರ ಸಾರಿತು" (1-162)ಎಂದು ಹೇಳಿ ಆ ಕಾಲದಲ್ಲಿ ಒಂದು ಬಗೆಯ ಗಡಿಯಾರ ಬಳಕೆಯಲ್ಲಿತ್ತು ಎಂಬುದನ್ನು ತಿಳಿಸಿದ್ದಾರೆ. ಅದಕ್ಕಿಂತ ಮುಂಚೆ ಅನ್ನಮಾಚಾರ್ಯರ ಕಾಲದಲ್ಲೇ ಇಂದಿನ ಅಗ್ನಿಪ್ರಮಾದ ಸೂಚಕಯಂತ್ರದಂತೆ (fire alarm) ಕಳ್ಳರ ಆಗಮನ ತಿಳಿಸುವ ಅಲಾರಾಂಗಳಂಥ ವ್ಯವಸ್ಥೆ ಇತ್ತೆಂದು ಆಚಾರ್ಯರ ಕೀರ್ತನೆಗಳ ಉಲ್ಲೇಖದಿಂದ ತಿಳಿಯುತ್ತದೆ. "ಗಂಟೆ ಬಾರಿಸದಂತೆ ಕಸವನ್ನು (ಬೂಸ) ತುಂಬಿಸಿ ನಮ್ಮ ಮನೆಯವರು ನಿದ್ರಿಸಿರಲು, ಒಂದು ಕರು ಮನೆಗೆ ನುಗ್ಗಿ ಆ ಬೂಸ ಮೆದ್ದಾಗ ಗಂಟೆ

---

[1] ವುಂಡಿ ವುಂಡಿ ಕಿಂದು ಮೀದು ವುಪಮು ಚಿಂತಿಂಚುಕೊಂಟಿ
ವುಂಡುಬೋ ಮಂಚಮುಕಿಂದ ನೊಕನೂಯಿ (5-242).

[2] ದೋಮತೆರ ಮರಗುನ ನಿದುರ ಪೋತಾಬೊಂಕೇವು
ನೇರುಪರಿವಯ್ಯಾ (ಶೃ.ಸಂ., 29, ಪು, 88).

[3] ವಿನ್ನಪಾಲು ವಿನವಲೆ ವಿಂತವಿಂತಲು
ಪನ್ನಗಪು ದೋಮತೆರ ಪೈಕೆತ್ತವೇಲಯ್ಯ (ತಾ. ಅ. ಪಾ., ಪು. 13).

[4] ನಿವಾಸ ಶಯ್ಯಾಸನ ಪಾದುಕಾಂಶುಕೋಪಧಾನ ವರ್ಷಾತಪ ವಾರಣಾದಿಭಿಃ, ಶರೀರ ಭೇದೈಸ್ತವ ಶೇಷತಾಂ ಗತೈರ್ಯಥೋಚಿತಂ ಶೇಷ ಇತೀರಿತೇ ಜನೈಃ
(ಯಾಮುನಾಚಾರ್ಯನ ಸ್ತೋತ್ರರತ್ನ).

ಗಣಗಣ ಬಾರಿಸಿತು, ನಾವು ಎಚ್ಚರಗೊಂಡೆವು"[1] ಎಂದು ಸಂಕೀರ್ತನೆಯೊಂದರಲ್ಲಿ ಹೇಳಿದ್ದಾರೆ.

### ಇತರ ವಸ್ತುಗಳು

ಗೃಹೋಪಕರಣಗಳಲ್ಲದೆ ವಸ್ತು ಸಂಸ್ಕೃತಿಗೆ ಸೇರಿದ ಇತರ ವಸ್ತು ಸಮುದಾಯದ ಉಲ್ಲೇಖಗಳನ್ನೂ ಕೀರ್ತನೆಗಳಲ್ಲಿ ಕಾಣಬಹುದು. ವಿವಿಧ ವೃತ್ತಿಗಳಲ್ಲಿ ಬಳಸುವ ಪರಿಕರಗಳು, ಅಳತೆಯ ಸಾಧನಗಳು, ಆಯುಧಗಳು ಮುಂತಾದವನ್ನು ಇಲ್ಲಿ ಸೇರಿಸ ಬಹುದು. ಗೃಹೋಪಕರಣಗಳ ವಿಷಯದಲ್ಲಿ ಹೇಳಿದ ಮಾತುಗಳೇ ಬಹುಮಟ್ಟಿಗೆ ಇಲ್ಲೂ ಒಪ್ಪುತ್ತವೆ. ಯಾವುದೇ ವಸ್ತುವನ್ನಾದರೂ ಕೀರ್ತನೆಗಳಲ್ಲಿ ಉಪಮಾರೂಪಕಾದಿಗಳ ರೂಪದಲ್ಲಿ ಹೇಗೆ ಬಳಸಿಕೊಳ್ಳಲಾಗುತ್ತದೆ ಎಂಬುದನ್ನು ಹೇಳಲು ಪೂರಕವಾಗಿ ಇತರ ವಸ್ತುಗಳ ವಿಷಯವನ್ನು ಇಲ್ಲಿ ಪರಿಶೀಲಿಸಬಹುದು.

ವಿವಿಧ ವೃತ್ತಿಗಳಿಗೆ ಸಂಬಂಧಿಸಿದ ಕೆಲವು ಉಲ್ಲೇಖಗಳನ್ನು ಪುರಂದರದಾಸರ ಕೀರ್ತನೆಗಳಲ್ಲಿ ನೋಡಬಹುದು. "ನಾರಾಯಣನೆಂಬ ನಾಮವ ನಿಮ್ಮ ನಾಲಿಗೆ ತುದಿ ಯಿಂದಲಿ ಬಿತ್ತಿರಯ್ಯ, ಹೃದಯ ಹೊಲವ ಮಾಡಿ ಮನವ ನೇಗಿಲ ಮಾಡಿ, ಶ್ವಾಸೋ ಚ್ಛ್ವಾಸ ಎರಡೆತ್ತು ಮಾಡಿ, ಜ್ಞಾನವೆಂಬ ಹಗ್ಗ ಕಣ್ಣಿಯಮಾಡಿ, ನಿರ್ಮಮವೆಂಬ ಗುಂಟೆಲಿ ಹರವಿರಯ್ಯ, ಮದಮತ್ಸರಗಳೆಂಬ ಮರಗಳನೆ ತರಿದು, ಕಾಮಕ್ರೋಧಗಳೆಂಬ ಕಳೆಯು ಕಿತ್ತು, ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ ಚಂಚಲವೆಂಬ ಹಕ್ಕಿಯ ಹೊಡೆಯಿ ರಯ್ಯ ..." (ಉ. ಪ್ರ., ಭಾಗ 4, ಪು. 13) ಎಂದು ಹೇಳುವಲ್ಲಿ ಬೇಸಾಯಕ್ಕೆ ಬೇಕಾದ ನೇಗಿಲು, ಎತ್ತು, ಗುಂಟೆ ಮುಂತಾದವನ್ನು ನೋಡಬಹುದು. ಕೃಷಿಕ ವೃತ್ತಿಯಲ್ಲಿ ಪ್ರಧಾನವಾದ ಎತ್ತುಗಳನ್ನು ಹೀಗೆ ವರ್ಣಿಸಿದ್ದಾರೆ :

> ವೇದಗಳೆಂಬ ದಾವಣಿಗಳಲ್ಲಿ
> ನಾಮಗಳೆಂಬ ಮೂಗು ನೇಣುಗಳಿಂದ
> ದೇವರುಗಳೆಂಬ ಎತ್ತುಗಳನೆ ಕಟ್ಟಿ
> ಭಕುತಿ ರಸವೆಂಬ ಮುಟ್ಟುಗಳನೆ ಹಾಕಿ....(6-60)

'ಧಾನ್ಯ ದೊರಕಿತು ಎನಗೆ ಧನವು ದೊರಕಿತು' ಎಂದು ಹೇಳುತ್ತಾ "ಕಟ್ಟಿ ಹಗೆವು ಹಾಕುವುದಲ್ಲ, ಒಟ್ಟಿ ಕೆಸರ ಬಡಿಯುವುದಲ್ಲ" (2-131) ಎನ್ನುತ್ತಾರೆ. ಧಾನ್ಯಗಳನ್ನು ಹಗೇವಿಗೆ ಹಾಕುತ್ತಿದ್ದುದು ತಿಳಿಯುತ್ತದೆ. ದೋಣಿ ನಡೆಸಲು ಬೇಕಾದ ಹರಿಗೋಲು (1-104 : 1-106, 111) ಕೂಡ ಉಲ್ಲೇಖಗೊಂಡಿದೆ.

[1] ಗಂಟವಾಗ ಕುಂಡಾ ನಿಂಡ ಕಸವುದುರಿಗಿ ಮಾ
ಯಿಂಟಿವಾರು ನಿದ್ದಿರಿಂಚ ನಿಲ್ಲು ಚೊಚ್ಚಿನು
ಅಂಟಿಮಚ್ಚಿ ಪೊಕದೂಡ ಆ ಪೂರಿ ಮೇಸಿತೇನು
ಗಂಟ ಗಣಗಣವಾಗೆ ಗಕ್ಕನ ಮೇಲ್ಕಂಟಿಮಿ (ಅಧ್ಯಾ. ಸಂ., 2, ಪು. 111).

ಇದೇ ರೀತಿ ಬೇರೆ ವೃತ್ತಿಗಳನ್ನೂ ತಾತ್ತ್ವಿಕ ಪರಿಭಾಷೆಗೆ ಪರಿವರ್ತಿಸಿ ಹೇಳಿರುವ ಸಂದರ್ಭಗಳಿವೆ. ನೂಲುವ ಕೆಲಸವನ್ನು ಆಧ್ಯಾತ್ಮಿಕ ಸಾಧನೆಗೆ ಅನ್ವಯಿಸಿ ಹೇಳಿದ್ದಾರೆ. "ಮಂದಿಯ ಗೊಡವೆ ಇನ್ನೇನು ಮಗಳೆ, ಮುಂದೆ ನೋಡಿ ಹಂಜಿ ನೂಲವ್ವ"(6-108) ಎಂದಿದ್ದಾರೆ. ಈ ಹಾಡಿನಲ್ಲಿ ವಸುಧೆಯ ಮಣೆ ಮಾಡಿ, ಶಶಿರವಿಗಳೆರಡು ಕಂಬವ ಹೂಡಿ, ಸಿರಿರಂಗರನ್ನು ಎರಡು ಚಕ್ರವಮಾಡಿ, ದರ್ಶನವೆಂಬುವ ನುಲಿಯನು ಬಿಗಿದು, ಜ್ಞಾನ ವೆಂಬುವ ಕದಿರನಿಕ್ಕಿ, ಮಾನವಂದವೆಂಬ ಹಂಜಿಯ ಹಿಡಿದು, ಧ್ಯಾನವೆಂಬ ಎಳೆಯನು ತೆಗೆದು ಮೌನದಿಂದಲಿ ನೂಲವ್ವ–ಎಂದು ಹೇಳುತ್ತ ನೂಲಲು ಬೇಕಾದ ವಸ್ತುಗಳನ್ನೆಲ್ಲ ಹೆಸರಿಸಿದ್ದಾರೆ.

ಆಧ್ಯಾತ್ಮಿಕ ನೆಲೆಯಲ್ಲಿ ಆಲೋಚಿಸುತ್ತಿದ್ದರೂ ಸಾಮಾನ್ಯ ಜನರ ಬವಣೆಯನ್ನು ದಾಸರು ಮರೆಯದೆ ಇರುವುದು ಅವರ ವೈಶಿಷ್ಟ್ಯ. "ಧರೆಯೊಳಗೆ ದಾರಿದ್ರ್ಯವಾರಿಗೂ ಬೇಡವೋ" (5-149) ಎಂದು ಹೇಳುತ್ತಾ ಬಡತನ ಬಂದರೆ "ಕುಡುಗೋಲ ಹಿಡಿದು ಕೂಲಿಯ ಮಾಡಿ ಉಣಬಹುದು" ಆದರೆ ಕೆಟ್ಟು ನಂಟರ ಸೇರಬಾರದು ಎಂದು ಸಾರುತ್ತಾರೆ.

ಯಾರು ಯಾರಿಗೆ ಯಾವುದು ಆಶ್ರಯ ಎಂದು ಹೇಳುವಲ್ಲಿ 'ಕಣ್ಣಿಲ್ಲದಾತನಿಗೆ ಕೈಗೋಲಿನಾಶ್ರಯವು'(1-97)ಬೇಕು ಎಂಬುದನ್ನೂ ದಾಸರು ಹೇಳಿದ್ದಾರೆ. ಪರಮಾತ್ಮನ ನಾಮಾಮೃತವೆಂಬ ಭಂಡಾರ ಕದ್ದ ಕಳ್ಳನಿಗೆ ನಿನ್ನ ಭಕ್ತಿಯೆಂಬ ಸಂಕೋಲೆಹಾಕು (1-148) ಎಂದು ಬೇಡಿದ್ದಾರೆ.

ಅನ್ನಮಾಚಾರ್ಯರಲ್ಲೂ ವೃತ್ತಿಗಳಿಗೆ ಸಂಬಂಧಿಸಿದ ಅನೇಕ ಉಲ್ಲೇಖಗಳು ಬರುತ್ತವೆ. ಬೇಸಾಯದ ಪರಿಕರಗಳನ್ನು ಅಲ್ಲಲ್ಲಿ ಹೆಸರಿಸಿ ಉಪಮೆಗಳಾಗಿ ಬಳಸಿ ಕೊಂಡಿರುವುದನ್ನು ನೋಡುತ್ತೇವೆ. "ನಾರಿಯನ್ನು ಕುರಿತ ಯೋಚನೆ ನೇಗಿಲಿನಿಂದಾದ ಗೆರೆ"[1] ಎನ್ನುತ್ತಾರೆ. ಹೊಲವನ್ನೇ ಈ ಜಗತ್ತಿಗೆ ಪ್ರತಿಮೆಯಾಗಿ ಸ್ವೀಕರಿಸಿ "ಮುನಿಗಳಿಗೆ ಸ್ಥಾವರವಾದ ಹೊಲ, ಬೇಸರವಿಲ್ಲದೆ ನೇಗಿಲಿಗೆ ಆಸ್ಪದವಾದ ಹೊಲ"[2] ಎನ್ನುತ್ತಾರೆ ಅನ್ನಮಯ್ಯ. ಬತ್ತ ಬೆಳೆಯುವವರಿಗೆ ಕಣಜದ ಅಗತ್ಯವಿರುವಂತೆ ವೇಂಕಟೇಶ್ವರನಿಗೂ ತನ್ನ ಶಕ್ತಿಯುಕ್ತಿಗಳನ್ನು ಸುರಿಯಲು ಕಣಜವಿದೆ. "ಇವನೊಡನೆ ಹಣಗಾಡಲು ನಮಗೆ ಸಾಧ್ಯವೇ. ತನ್ನ ಶಕ್ತಿಯುಕ್ತಿಗಳನ್ನು ಇವನು ಕಣಜಗಳಿಗೆ

---

[1] ನಾತಿಮೀದಿ ತಲಪೋತ ನಾಗೇಟಿ ಗೀತ (12-274).

[2] ಮುನುಲಕು ರಚ್ಚೈನ ಪೊಲಮು
ವೇಸರಕ ನಾಗೇಟಿ ಮೇಗಿಲೈನ ಪೊಲಮು (10-52).

ಸುರಿಯುವವನು."[1] "ಚಿನಿವಾರನ ಕೈಯ ಒರೆಗಲ್ಲು ಈ ಪರಮಾತ್ಮ. ಇಷ್ಟದಂತೆ ಆಡುವನೀ ಪರಮಾತ್ಮ"[2] ಎಂದು ದೇವರನ್ನು ವರ್ಣಿಸಿದ್ದಾರೆ.

ಸಾಂಸ್ಕೃತಿಕ ಅಧ್ಯಯನದ ಭಾಗವಾಗಿ ಅಳತೆಯ ಸಾಧನಗಳ ಪರಿಶೀಲನೆಯನ್ನೂ ಕೈಗೊಳ್ಳಬಹುದು. ಸಾಂಸ್ಕೃತಿಕ ವಿಕಾಸದ ಪ್ರಾಥಮಿಕ ಹಂತದಲ್ಲಿ ಅಳತೆ ಸಾಧನಗಳ ಅವಶ್ಯಕತೆ ಇರಲಿಲ್ಲ. ಆರ್ಥಿಕ ವ್ಯವಸ್ಥೆಯ ಅಂಗವಾಗಿ ವಸ್ತುಗಳನ್ನು ಅಳೆಯುವ ಪದ್ಧತಿ ರೂಢಿಗೆ ಬಂತು. ಇತ್ತೀಚಿನ ವರ್ಷಗಳ ತನಕವೂ ಬಳಕೆಯಲ್ಲಿದ್ದ ಸೇರು ಮುಂತಾದ ಅಳತೆಯ ವಸ್ತುಗಳಿಂದ ಸಂಸ್ಕೃತಿಯ ಕೆಲವು ಮುಖಗಳು ತಿಳಿದುಬರುತ್ತವೆ. ಪುರಂದರ ದಾಸರು ಒಂದು ಸಂದರ್ಭದಲ್ಲಿ "ಕಂಡೆ ಕಂಡೆ ಇಪ್ಪತ್ತು ದುಡ್ಡಿಗೆ ಸೇರು ತೀರ್ಥ ಒಪ್ಪದಲಿ ಕ್ರಯಮಾಡಿ ಕೊಡಿಸುವ" (ಉ. ಪ್ರ., ಭಾಗ 1, ಪು. 51) ಎಂದು ವೇಂಕಟೇಶ್ವರನನ್ನು ವರ್ಣಿಸಿರುವುದನ್ನು ನೋಡಿದರೆ, ಅವರ ಕಾಲದಲ್ಲಿ ಒಂದು ಸೇರು ತೀರ್ಥವನ್ನು ಇಪ್ಪತ್ತು ದುಡ್ಡಿಗೆ ಮಾರುತ್ತಿದ್ದ ವಿಷಯ ತಿಳಿದುಬರುತ್ತದೆ. ಇಂದಿಗೂ ಈ ತರಹದ ತೀರ್ಥದ ಮಾರಾಟ ಕೆಲವು ದೇವಸ್ಥಾನಗಳಲ್ಲಿ ಮುಂದುವರಿದಿದೆ. "ಈರೇಳು ಲೋಕದಲ್ಲಿ ಇರುವ ಕಸ್ತೂರಿರಂಗ ಮಾರುವ ಆರು ಸೇರು ಜೇನುತುಪ್ಪ ಅಗ್ಗವಾಗಿದೆ" (ಉ. ಪ್ರ., ಭಾಗ 2, ಪು. 96) ಎಂದು ಹೇಳುವಾಗಲೂ ಅಳತೆಯ ಸಾಧನವನ್ನು ಉಲ್ಲೇಖಿಸುವುದರ ಜೊತೆ ಜೇನುತುಪ್ಪ ವಿಕ್ರಯವಾಗುತ್ತಿದ್ದುದನ್ನೂ ಹೇಳಲಾಗಿದೆ. "ಐದು ಮಣ ಗೋಧಿಟ್ಟು, ಐದು ಮೊಗೆಯ ತುಪ್ಪ" (ಉ. ಪ್ರ., ಭಾಗ 5, ಪು. 60), "ಒಮ್ಮಾನ (ಒಂದು ಮಾನ) ಗೋಧಿ" (ಅದೇ, ಭಾಗ 2, ಪು. 43), "ಕೊಳಗ" (4-66) ಮುಂತಾದ ಉಲ್ಲೇಖಗಳಲ್ಲಿ ಬೇರೆ ಬೇರೆ ಪದಾರ್ಥಗಳನ್ನು ತೂಗುವಾಗ ಮತ್ತು ಅಳೆಯುವಾಗ ಬಳಸುವ ಸಾಧನಗಳ ಪ್ರಸ್ತಾಪವಿದೆ.

ಕರ್ನಾಟಕ ಮತ್ತು ಆಂಧ್ರಗಳಲ್ಲಿ ಒಂದೇ ರೀತಿಯ ಅಳತೆಯ ವ್ಯವಸ್ಥೆ ಇತ್ತು. ಕನ್ನಡ ಮತ್ತು ತೆಲುಗುಗಳಲ್ಲಿ ಮಣ, ಸೇರು, ಪಾವು ಮುಂತಾದ ಅಳತೆ ಸಾಧನಗಳ ಹೆಸರುಗಳಲ್ಲೂ ಹೋಲಿಕೆ ಇದೆ. ಅನ್ನಮಾಚಾರ್ಯರು ಇಂಥ ಕೆಲವು ಅಳತೆಗಳನ್ನು ಸಾಂದರ್ಭಿಕವಾಗಿ ಬಳಸಿಕೊಂಡಿದ್ದಾರೆ. "ಸೇರಿ ಸೇವಿಸಿದವರಿಗೆ (ತೆಲುಗಿನ 'ಕೊಲ್ಚಿನ ವಾರಿಕಿ' ಎಂಬುದಕ್ಕೆ ಸೇವಿಸಿದವರಿಗೆ ಅಳೆದವರಿಗೆ ಎಂಬ ದ್ವಂದ್ವಾರ್ಥಗಳಿವೆ) ಕೈ ಹಿಡಿಯುವ ಕುಂಚ (ಅಳತೆಯ ಸಾಧನ) ನೀನು, ಕೋರಿ ಸ್ತುತಿಸಿದವರಿಗೆ ಸೆರಗು

---

[1] ಪಾಟಿಂಚಿ ಪೆನಗ ಮನತರಮುಲಾ ಯಿಾತಡು
ತೇಟಲ ನೇರುಪುಲು ಗಾದೆಲ ಬೋಸೀನಿ (ಶೃ. ಸಂ., 29, ಪು. 334).

[2] ಬಚ್ಚು ಚೇತಿ ವೊರಗಲ್ಲು ಪರಮಾತ್ಮುಡು
ಯಿಚ್ಚಕೊಲದಿ ನಾಡವೊ ಈ ಪರಮಾತ್ಮುಡು (5-235).

ಬಂಗಾರ"[1] ಎಂದು ವೇಂಕಟೇಶ್ವರನ ಬಗೆಗೆ ಹೇಳಲಾಗಿದೆ. ಎಣ್ಣೆಯನ್ನು ಅಳೆಯುವ ಕಂಚ ಅಳೆದೂ ಅಳೆದೂ ನುಣ್ಣಗಾಗುತ್ತದೆ.[2]

ಇತರ ವಸ್ತುಗಳಲ್ಲಿ ಆಟದ ಪರಿಕರಗಳನ್ನು ಕೂಡ ಪರಿಶೀಲಿಸಬಹುದು. ಆಟ, ವಿನೋದ ಮುಂತಾದವು ಸಾಮಾಜಿಕ ಆಚಾರಗಳಿಗೂ ಕಲಾತ್ಮಕ ವಿನೋದಗಳಿಗೂ ಮಧ್ಯದಲ್ಲಿರುತ್ತವೆ. ಕೋಲಾಟ ಮುಂತಾದವು ಕಲಾತ್ಮಕ ವಿನೋದಗಳಾದರೆ, ಇನ್ನು ಕೆಲವು ಆಟಗಳು ದೈಹಿಕ ವ್ಯಾಯಾಮ ಮತ್ತು ಮನರಂಜನೆಗೆ ನೆರವಾಗುವಂಥವು. ಆಟ ಎಂಬುದು ಎಲ್ಲ ಮನುಷ್ಯರಲ್ಲೂ ಇರುವ ಸ್ವಭಾವಾಭಿವ್ಯಕ್ತಿಯ ಪ್ರಕಾರವಾಗಿದೆ ಎನ್ನಬಹುದು.

ಆಟದ ಸಾಮಾನುಗಳದೇ ಒಂದು ವೈವಿಧ್ಯದ ಅಧ್ಯಯನವಾಗಬಲ್ಲುದು. ಪಗಡೆ ಯಾಟದಂಥವು ಬಹಳ ಪ್ರಾಚೀನ ಕಾಲದಿಂದಲೂ ಪ್ರಪಂಚದ ಅನೇಕ ಪ್ರದೇಶಗಳಲ್ಲಿ ಜನಪ್ರಿಯವಾಗಿದ್ದುವು. ಪಗಡೆ ಆಟದ ವಸ್ತುಗಳು ಈಜಿಪ್ಟ್, ರೋಮ್ ಮೊದಲಾದ ಪ್ರದೇಶಗಳಲ್ಲಿಯ ಸಮಾಧಿಗಳಲ್ಲಿ ಸಿಕ್ಕಿವೆ. ಋಗ್ವೇದದಲ್ಲೂ ಜೂಜಿಗೆ ಬಳಸುತ್ತಿದ್ದ ಸಾಧನಗಳ ಬಗೆಗೆ ಉಲ್ಲೇಖಗಳಿವೆ.

ಪುರಂದರದಾಸರು ಪಗಡೆ ಲೆತ್ತ ಜೂಜು ಮುಂತಾದ ಹೆಸರುಗಳನ್ನು ಅನೇಕ ಸಂದರ್ಭಗಳಲ್ಲಿ ಬಳಸಿದ್ದಾರೆ. "ಹದಿನಾರು ಸಾವಿರ ಗೋಪ್ಯೆರಕೂಡಿ ಚದುರಂಗ ಪಗಡೆಯನಾಡುವನಮ್ಮ" (ಉ. ಪು., ಭಾಗ 1, ಪು, 60) ಎಂಬುದು ಕೃಷ್ಣನ ಲೀಲೆಯ ವರ್ಣನೆ. "ಪಗಡೆ ಚದುರಂಗ ಕವಡೆಯನಾಡ ಕರೆದರೆ ನಿಗುರಿದವು ಕರ್ಣಗಳು ಮುಚ್ಚಿಯಂತೆ, ಜಗದೀಶನಾ ದಿನದಿ ಜಾಗರಿಕೆ ಕರೆದರೆ ಮುಗಿಲ್ಪರಿದು ಬಿದ್ದಂತೆ ಧರೆಗಿಳಿವೆ ...." (2-11) ಎಂಬುದರಲ್ಲಿ ಪಗಡೆ ಚದುರಂಗದ ಬಗೆಗಿದ್ದ ಆಸಕ್ತಿ ಎಂಥದೆಂದು ತಿಳಿಯುತ್ತದೆ. ಬಾಲಕೃಷ್ಣನ ಆಟಗಳನ್ನು ಕುರಿತು ಹೇಳುವಾಗ "ಚಿತ್ತಜನ್ಯೆಯನ ಕೈಗೆ ಚಿನ್ನದ ಚೆಂಡನೆಕೊಟ್ಟು" (4-66) ಆಟವಾಡಿಸುವ ರೀತಿಯನ್ನು ವರ್ಣಿಸಲಾಗಿದೆ. "ಅಣ್ಣೆಕಲ್ಲು, ಗೋಲಿ, ಗಜುಗ, ಚಿಣ್ಣಿಕೋಲು, ಚೆಂಡು, ಬುಗುರಿ, ಕಣ್ಣುಮುಚ್ಚಾಲೆ.... ಆಡ ಹೋಗೋಣ ಬಾರೊ ರಂಗ, ಓಡಿ ಹೋಗಲು ಬೇಡೊ ಕೃಷ್ಣ" (4-42) ಎಂದು ಕೃಷ್ಣನನ್ನು ಕರೆಯುವ ಚಿತ್ರವನ್ನು ಕಾಣುತ್ತೇವೆ. ಹಸು ಹಿಂಡ ಕಾಯಲು ಹೋಗುವ ಗೊಲ್ಲ 'ಕಲ್ಲು ಮಣೆ ಕವಡಿ'ಗಳ (4-103) ಆಟ ಆಡುವುದನ್ನೂ ಪುರಂದರದಾಸರು ಹೇಳಿದ್ದಾರೆ. ಅಣ್ಣೆಕಲ್ಲು, ಗೋಲಿ, ಗಜುಗ, ಚಿಣ್ಣಿಕೋಲು, ಚೆಂಡು, ಬುಗುರಿ, ಕಲ್ಲುಮಣೆ ಕವಡೆಗಳು ಅಂದಿಗೂ ಇಂದಿಗೂ ಆಟದ ಸಾಮಾನುಗಳಾಗಿ ಬಳಕೆಯಲ್ಲಿವೆ.

ನೆತ್ತಮನಾಡುವಾಗ ಯಾವಾಗಲೂ ವೇಂಕಟೇಶ್ವರನಿಗೆ ಸೋಲುಂಟಾಗುವುದೆಂದು ಅನ್ನಮಾಚಾರ್ಯರು ಬರೆಯುತ್ತಾರೆ. "ರತಿಯ ವೇಳೆ ಪಂದ್ಯಹಾಕಿ ನೆತ್ತಮನಾಡುವೆ,

[1] ಚೇರಿ ಕೊಲ್ಚಿನವಾರಿಕಿ ಚೇಪಟ್ಟು ಕುಂಚಮವು
ಕೋರಿ ನುತಿಂಚಿನವಾರಿ ಕೊಂಗು ಪೈಡಿವಿ (ಅಧ್ಯಾ. ಸಂ., 2, ಪು. 116).

[2] ನೂನೆ ಗೊಲಚೇ ಕುಂಚಮು ನುನುಪೆಕ್ಕು ಮೀದ ಮೀದ (13-108).

ನೀನೇ ಸೋಲುವೆಯೇಕೆ ವೆಂಕಟೇಶ"[1] ಎಂಬ ಸಂದರ್ಭವನ್ನೂ "ಪಂದ್ಯಹಾಕಿ ನಿನ್ನೊಡನೆ ಪಗಡೆ ಆಡಿ ಆಡಿ" ಹೋದ ವಿಷಯವನ್ನೂ ಆಚಾರ್ಯರೂ ಉಲ್ಲೇಖಿಸುತ್ತಾರೆ, "ಕೋಲಾಟ"(14-149),"ಚದುರಂಗ"(3-139),"ಚೆಂಡಾಟ"(14-149), "ಬಿಲ್ಲಗೋಟು" (10-172; ಚಿಣ್ಣಿಕೋಲು), "ವಾನಗಂಟಲು" (13-201; ಅಳಿಗುಳಿವಂಣೆ) ಮುಂತಾದವುಗಳ ಉಲ್ಲೇಖವೂ ಆಚಾರ್ಯರ ಕೀರ್ತನೆಗಳಲ್ಲಿ ಕಂಡು ಬರುತ್ತದೆ.

ಭಗವನ್ನಾಮ ಸಂಕೀರ್ತನೆ ಮಾಡುವ ಭಕ್ತಕವಿಗೆ ಯುದ್ಧವನ್ನಾಗಲಿ, ಯುದ್ಧ ಪರಿಕರಗಳನ್ನಾಗಲಿ, ರಣವಾದ್ಯಗಳನ್ನಾಗಲಿ ವರ್ಣಿಸುವ ಆವಶ್ಯಕತೆ ಇರುವುದಿಲ್ಲ. ತುಂಬ ವಿರಳವಾಗಿ ಇಂಥ ಕೆಲವು ಉಲ್ಲೇಖಗಳು ಕಂಡುಬಂದರೂ ಅವು ಶಿವನನ್ನೋ ವಿಷ್ಣುವನ್ನೊ ವರ್ಣಿಸುವ ಸಂದರ್ಭಗಳಾಗಿರುತ್ತವೆ. "ಶಂಖಚಕ್ರ ಗದಾಧರ"ನೆಂದು (3-82) ವಿಷ್ಣುವನ್ನೂ "ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿ" (3-132) ಧರನೆಂದು ಶಿವನನ್ನೂ ಪುರಂದರದಾಸರು ವರ್ಣಿಸಿದ್ದಾರೆ. "ಶ್ರೀರಾಮನಾಮವೆಂಬ ಸಿಂಗಾಡಿ ತಕ್ಕೊಂಡು ವೈರಿವಧೆ ಮಾಡಬಹುದು" (2-130) ಎಂದು ಹೇಳುವಾಗ ರಾಮನಾಮ ಮಹಿಮೆಯ ಕಲ್ಪನೆ ಇದೆ. "ಬತ್ತೀಸಾಯುಧ ಕೈಯಲಿ ಧರಿಸಿ ದೊಡ್ಡ ಈಟಿಯವರೊ ಇನ್ನು ಮೂರು ಚಿಕ್ಕ ಈಟಿಯವರೊ" (ಉ. ಪ್ರ., ಭಾಗ 5, ಪು. 56) ಎಂದು ಯಮನಾಳುಗಳನ್ನು ಚಿತ್ರಿಸಿದ್ದಾರೆ. "ಉಟ್ಟದಟ್ಟಿ ಕಟ್ಟಿದ ಕಠಾರಿ ತೊಟ್ಟಂಬು ತೋರಗದೆ ತೋಮರ"ಗಳಿಂದ (3-141) ಅಲಂಕೃತನಾದ ವಿಷ್ಣುವನ್ನು ಕುರಿತು ಹೇಳಿದ್ದಾರೆ.

ವೈಷ್ಣವ ಸಂಪ್ರದಾಯದಲ್ಲಿ ಪಂಚಾಯುಧಗಳಿಗೆ ಪ್ರಾಧಾನ್ಯವಿದೆ. ಲೋಕ ಕಲ್ಯಾಣವೇ ವಿಷ್ಣುವಿನ ಆದರ್ಶ. ಆದಕ್ಕಾಗಿ ಅವನು ಧರಿಸಿದ ಪಂಚಾಯುಧಗಳನ್ನು ಸ್ಮರಿಸುವುದು ಭಕ್ತರ ಕರ್ತವ್ಯ. ಈ ಪಂಚಾಯುಧಗಳು ವಿಷ್ಣುನಾಮ ಸ್ಮರಣೆಯಷ್ಟೇ ಪುಣ್ಯ ಕೊಡುತ್ತವೆಂಬ ನಂಬಿಕೆ ಇರುವುದರಿಂದ ವೈಷ್ಣವ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ಇವನ್ನು ಸ್ಮರಿಸಿದರು. ತಾಳ್ಳಪಾಕ ಕವಿಗಳು ಸುದರ್ಶನೋಪಾಸಕರಾದುದರಿಂದ ಸುದರ್ಶನ ಚಕ್ರವನ್ನು ಅವರೆಲ್ಲರೂ ವಿಶೇಷವಾಗಿ ಸ್ತುತಿಸಿದ್ದಾರೆ. ಪಂಚಾಯುಧಗಳು ಭಕ್ತರನ್ನು ಹೇಗೆ ಕಾಪಾಡಿವೆ ಎಂಬುದನ್ನು ಅನ್ನಮಾಚಾರ್ಯರು ಒಂದು ಕೀರ್ತನೆಯಲ್ಲಿ ವಿವರಿಸಿದ್ದಾರೆ: "ಅಂಬರೀಷನ ಆಪತ್ತುಗಳನ್ನು ಹೋಗಲಾಡಿಸಿ ಕಾಪಾಡಿತು ನಿನ್ನ ಚಕ್ರ, ಅಂಬರದಲ್ಲಿರುವ ಧ್ರುವನ ಅಜ್ಞಾನವನ್ನು ಹೋಗಲಾಡಿಸಿ ಕಾಪಾಡಿತು ಪಾಂಚಜನ್ಯ, ಜರಾಸಂಧಾದಿಗಳನ್ನು ನಾಶಮಾಡಿ ಮಧುರೆಯನ್ನು ನಿಲ್ಲಿಸಿತು ನಿನ್ನ ಗದೆ, ಹಿರಣ್ಯಕಶಿಪ

[1] ಅನ್ನ. ಸಂ., 2, ಪು. 51.

ನನ್ನು ಕೊಂದು ಪ್ರಹ್ಲಾದನನ್ನು ಕಾಪಾಡಿತು ನಿನ್ನ ಖಡ್ಗ, ರಾವಣನನ್ನು ಕೊಂದು ವಿಭೀಷಣನ ರಕ್ಷಿಸಿತು ನಿನ್ನ ಕೈಯ ಶಾರ್ಙ್ಗ."[1]

ವಿಷ್ಣುವಿನ ಪಂಚಾಯುಧಗಳನ್ನು ಮಾತ್ರವಲ್ಲದೆ ಯುದ್ಧದಲ್ಲಿ ಉಪಯೋಗಿಸುವ ಹಲವು ಆಯುಧಗಳನ್ನು ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. ಕಠಾರಿ(6-101), ಕತ್ತಿ(6-85), ಖಡ್ಗ(12-209), ಭಲ್ಲೆ(6-93), ಶೂಲ (13-191) ಮುಂತಾದವನ್ನು ಇಲ್ಲಿ ಸ್ಮರಿಸಬಹುದು.

ವಾದ್ಯಗಳಲ್ಲಿ ಸಂಗೀತಕ್ಕೆ ಅಳವಡಿಸುವಂಥವು ಕೆಲವಾದರೆ, ಶಬ್ದಪ್ರಧಾನವಾದ ರಣರಂಗದಲ್ಲಿ ಬಳಕೆಯಾಗುವ ವಾದ್ಯಗಳು ಕೆಲವು. ಇಂಥ ರಣವಾದ್ಯಗಳ ಪ್ರಸಕ್ತಿ ಪುರಂದರದಾಸರಲ್ಲಿ ಹೆಚ್ಚಿಗೆ ಇಲ್ಲದಿದ್ದರೂ ಕಾಳೆ, ಹೆಗ್ಗಾಳೆ, ದುಂದುಭಿ (2-106), ತುತ್ತೂರಿ, ಭೇರಿ (6-122) ಮುಂತಾದ ಕೆಲವನ್ನು ಮಾತ್ರ ಕಾಣಬಹುದು. ಅನ್ನಮಾಚಾರ್ಯರಲ್ಲೂ ತುತ್ತೂರಿ (ತುತ್ತುರುಕೊಮ್ಮು; 12-96), ದುಂದುಭಿ (8-21), ಭೇರಿ (8-194) ಮುಂತಾದ ವಾದ್ಯಗಳ ಉಲ್ಲೇಖಗಳು ಕಂಡುಬರುತ್ತವೆ.

## ಚಿತ್ರಕಲೆ-ಶಿಲ್ಪ-ಗೃಹವಾಸ್ತು

ಚಿತ್ರಕಲೆ ಮತ್ತು ಶಿಲ್ಪ ಲಲಿತಕಲೆಗಳಲ್ಲಿ ಬರುತ್ತವೆ. ಆದರೂ ವಸ್ತುವಿಲ್ಲದೆ ಅವುಗಳ ಕೆಲಸವೇ ನಡೆಯುವುದಿಲ್ಲವಾದ್ದರಿಂದ ಅವನ್ನು ವಸ್ತು ಸಂಸ್ಕೃತಿಯಲ್ಲಿ ಸೇರಿಸಲಾಗಿದೆ. ಪ್ರಕೃತಿಯ ವಸ್ತುಗಳನ್ನು ಉಪಯೋಗಿಸಿಕೊಂಡು ಮನುಷ್ಯ ಸಾಂಸ್ಕೃತಿಕ ಮಹತ್ತ್ವವನ್ನು ಸಾಧಿಸಿದ ರೀತಿಯನ್ನು ಈ ಕೆಲವು ಸಾಧನೆಗಳು ತಿಳಿಸಿಕೊಡುತ್ತವೆ.

'ಅಭಿಲಷಿತಾರ್ಥ ಚಿಂತಾಮಣಿ'ಯಂಥ ಗ್ರಂಥಗಳಲ್ಲಿ ಕರ್ನಾಟಕಾಂಧ್ರ ಪ್ರದೇಶಗಳಿಗೆ ಸಂಬಂಧಿಸಿದ ಚಿತ್ರಕಲೆ, ಶಿಲ್ಪ ಇತ್ಯಾದಿಗಳನ್ನು ಕುರಿತ ಹಲವು ವಿಷಯಗಳು ವಿವರಿಸಲ್ಪಟ್ಟಿವೆ. ಆಲೇಖ್ಯಕಲೆಯನ್ನು ಕುರಿತು ಸೋಮೇಶ್ವರ ಸುಮಾರು ನೂರುಪುಟ

---

[1] ಅಂಬರೀಷು ಬೈಕೊನ್ನ ಆಪದಲನ್ನಿಯು ಬಾಪಿ
ಬೆಂಬಡಿ ಗಾಚೆ ನೀಚೇ ಪೆನುಚಕ್ರಮು
ಅಂಬರಾನನುನ್ನು ಧ್ರುವುನಜ್ಞಾನ ಮೆಲ್ಲಬಾಪೆ
ಪಂಚಿನ ಚೇತನುನ್ನ ಪಾಂಚಜನ್ಯಮು
ಪಕ್ಕನು ಜರಾಸಂಧು ಬಲಮೆಲ್ಲನುಗ್ಗಾಡಿ
ನಿಕ್ಕಮು ಮಧುರನಿಲ್ಪೆ ನೀಚೇ ಗದ
ತೊಕ್ಕಿ ಹಿರಣ್ಯಕಶಿಪುದುನಿಮಿ ಪ್ರಹ್ಲಾದುಗಾಚೆ
ನಿಕ್ಕಿ ನಿಕ್ಕಿ ಮೆರಸೇಟಿ ನೀ ಖಡ್ಗಮು
ವೆಡ ರಾವಣುನಿ ಜಂಪಿ ವಿಭೀಷಣುನಿಗಾಚೆ
ಚಿಡಿ ಮುಡಿಪಡಕ ನೀಚೇ ಶಾರ್ಙ್ಗಮು (9-145).

ಗಳಷ್ಟು ಬರೆದಿದ್ದಾನೆ. ಇದಕ್ಕಿಂತ ಒಳ್ಳೆಯ ಪ್ರಾಚೀನ ಚಿತ್ರಲೇಖನಶಾಸ್ತ್ರ ಬೇರೊಂದಿಲ್ಲ. ಆ ಕಾಲದಲ್ಲಿ ಪ್ರತಿಯೊಂದು ಮನೆಯ ಗೋಡೆಗಳೂ ಚಿತ್ರಲೇಖನ ಗಳಿಂದ ಸುಂದರವಾಗಿ ಅಲಂಕರಿಸಲ್ಪಡುತ್ತಿದ್ದುವು. ವಿಜಯನಗರದ ಅರಸರ ಕಾಲದಲ್ಲಿ ಚಿತ್ರಕಲೆ ಮತ್ತು ಇತರ ಕಲೆಗಳಿಗೆ ರಾಜಮನ್ನಣೆ ಸಿಕ್ಕಿತ್ತು. ದೇವಾಲಯಕುಡ್ಯಗಳ ಮೇಲೂ ವಿವಿಧ ವರ್ಣಚಿತ್ರಗಳು ರಾರಾಜಿಸಿದುವು. ಸ್ತ್ರೀಯರು ಕೂಡ ಚಿತ್ರಕಲೆಯಲ್ಲಿ ನುರಿತವರಾಗಿದ್ದರೆಂದು ಶ್ರೀಕೃಷ್ಣದೇವರಾಯನ 'ಆಮುಕ್ತ ಮಾಲ್ಯದ' ಕಾವ್ಯದಿಂದ (5-149) ತಿಳಿದುಬರುತ್ತದೆ.

ವಿಜಯನಗರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಕುಡ್ಯ ಚಿತ್ರಕಲೆಯನ್ನು ಪ್ರತ್ಯಕ್ಷ ವಾಗಿಯೋ ಪರೋಕ್ಷವಾಗಿಯೋ ಸೂಚಿಸುವ ಉಲ್ಲೇಖಗಳನ್ನು ಪುರಂದರದಾಸರಲ್ಲೂ ಅನ್ನಮಾಚಾರ್ಯರಲ್ಲೂ ಕಾಣುತ್ತೇವೆ.

> ಆರೇನ ಮಾಡುವರು ಅವನಿಯೊಳಗೆ....
> ಮಾಡಿದಡುಗೆಯು ಕೆಡಲು ಮನೆಯ ಗಂಡನು ಬಿಡಲು
> ಕೂಡಿದ್ದ ಸತಿ ತಾನು ಕುಣಿಸ್ಯಾಡಲು
> ಗೋಡೆಗೆ ಬರೆದ ಹುಲಿ ಘುಡಿ ಘುಡಿಸಿ ತಿನಬರಲು (ಹ. ಕೀ. ತ., ಪು. 92).

ಮಾನವ ಜೀವನದಲ್ಲಿ ಆಗಬಾರದ್ದೆಲ್ಲ ಆದರೆ ಹೇಗಿರುತ್ತದೆ ಎಂಬುದನ್ನೂ ಗೋಡೆ ಮೇಲೆ ಬರೆದ ಚಿತ್ರವನ್ನೂ ಈ ಕೀರ್ತನೆ ತಿಳಿಸುತ್ತದೆ. ಇನ್ನೊಂದು ಕಡೆ "ಪರಿ ಪರಿ ಯಿಂದಲಿ ಗೋಡೆಯ ಮೇಲೆ ಬರೆದಿಹ ಚಿತ್ರದ ಗೊಂಬೆಯ ನೋಡಿ ಕರವ ಪಿಡಿದು ಎಳೆತಂದು ತನ್ನಯ ನೆರೆಯಲ್ಲಿಯೆ ನೀವಿರಿಸಿರಿಯೆಂಬ" ಕಂದನ ಮುಗ್ಧಭಾವದ ಚಿತ್ರವಿದೆ (4-22). "ಕುಶಲದಿ ಬಣ್ಣಿಸಿ ಬರೆದು ಚಿತ್ತಾರವ ಮಸಿ ಮಣ್ಣುಮಾಡಿ ನೀ ಕೆಡಿಸುವುದು (1-111) ಎಂಬ ಸಂದರ್ಭವನ್ನೂ ಪುರಂದರದಾಸರು ಹೇಳಿದ್ದಾರೆ. ಹೆಣ್ಣನ್ನು ವರ್ಣಿಸುವಾಗ "ಶಿರವ ತೂಗುವಳು, ಚಿತ್ರದ ಪ್ರತಿಮೆಯಂತಿಹಳು" (3-22) ಎಂದಿದ್ದಾರೆ.

ಭಾವಚಿತ್ರಗಳನ್ನು ಬಿಡಿಸುವ ವರ್ಣನೆಗಳು ಪ್ರಾಚೀನ ಕಾವ್ಯಗಳಲ್ಲಿ ಮತ್ತು ನಾಟಕಗಳಲ್ಲಿ ಹೇರಳವಾಗಿ ಬರುತ್ತವೆ. ಒಂದು ಕೀರ್ತನೆಯಲ್ಲಿ ಅನ್ನಮಾಚಾರ್ಯರು "ನಿನ್ನ ಭಾವಚಿತ್ರದ ಹಲಗೆಯನ್ನು ಅಪ್ಪಿಕೊಂಡು"[1] ಎಂದು ಹಲಗೆಯ ಮೇಲೆ ಭಾವ ಚಿತ್ರಗಳನ್ನು ಬಿಡಿಸುತ್ತಿದ್ದ ಪದ್ಧತಿಯನ್ನು ಸೂಚಿಸಿದ್ದಾರೆ. ಕುಡ್ಯ ಚಿತ್ರಕಲೆಯನ್ನು ಕುರಿತ ಸೂಚನೆ ಅನ್ನಮಾಚಾರ್ಯರಲ್ಲೂ ಕಂಡುಬರುತ್ತದೆ. "ಜೊತೆಗೂಡಿ ನೀನು ನಾನು ಆಡಿದ ಮಾತುಗಳೆಲ್ಲಾ ಗೋಡೆ ಇಲ್ಲದ ಚಿತ್ರಗಳಾಗಿ ನನ್ನ ಮತಿಯಲ್ಲಿ ಸ್ಥಿರವಾಗಿವೆ

[1] ನೀ ಭಾವಚಿತ್ರ ಪಲಕ ಕಾಗಿಟ ಜೇರ್ಚಿ (ಶೃ. ಸಂ., 29, ಪು. 23).

ವೆಂಕಟೇಶಾ''[1] ಎಂದು ಅಲಮೇಲುಮಂಗ ಹೇಳುತ್ತಾಳೆ. ವೇಂಕಟೇಶ್ವರ ಎಷ್ಟು ದಿನವಾದರೂ ಬರಲಿಲ್ಲವೆಂದು ಅಲಮೇಲುಮಂಗ ತನ್ನ ಗೆಳತಿಯನ್ನು ರಾಯಭಾರಕ್ಕೆ ಕಳುಹಿಸಿದಳು. ''ವಿರಹ ತಾಳಲಾಗದೆ ನಮ್ಮವಳು ನಿನಗೆ ಚಿತ್ರಫಲಕ ಕಳುಹಿಸಿದಳಿಗೋ''[2] ಎಂದು ಚಿತ್ರಫಲಕವನ್ನು ಕೊಟ್ಟಳು.

ವಿಜಯನಗರಕಾಲ ಶಿಲ್ಪಕಲೆಗೆ ಹೆಸರುವಾಸಿಯಾಗಿದೆ. ವಿಜಯನಗರದ ಒಂದೊಂದು ದೇವಾಲಯವೂ ರಾಜಭವನವೂ ವಾಸ್ತು ಮತ್ತು ಶಿಲ್ಪಕಲೆಗಳಿಗೆ ನಿದರ್ಶನಗಳಾಗಿವೆ. ವೀರಗಲ್ಲುಗಳನ್ನು ಕೆತ್ತುವ ಜನಪದ ಶಿಲ್ಪಗಳಿಂದ ಹಿಡಿದು ದೊಡ್ಡ ದೊಡ್ಡ ಶಿಲೆಗಳನ್ನು ಮನೋಹರಶಿಲ್ಪಗಳಾಗಿ ಪರಿವರ್ತಿಸುವ ಕಲೆಯವರೆಗೂ ಎಲ್ಲ ರೀತಿಯ ಶಿಲ್ಪವೈಭವ ವಿಜಯನಗರ ಕಾಲದಲ್ಲಿ ಕಾಣುತ್ತದೆ. ಪುರಂದರದಾಸರು ಮತ್ತು ಅನ್ನಮಾಚಾರ್ಯರು ಶಿಲ್ಪಕಲಾ ವೈಭವವನ್ನು ಕುರಿತು ಹೆಚ್ಚು ಹೇಳಿದವರಲ್ಲ. ಪುರಂದರದಾಸರು ತಮ್ಮ ಇಷ್ಟದೈವ ವರ್ಣನೆಯಲ್ಲಿ ಮಾತ್ರ ಶಿಲ್ಪಾಕೃತಿಯ ಸೌಂದರ್ಯವನ್ನು ನಿರೂಪಿಸಿದ್ದಾರೆಂದು ಹೇಳಬಹುದು. ಉತ್ಸವ ವಿಗ್ರಹಗಳ ವರ್ಣನೆಗಳು, ವಾಹನಗಳನ್ನು ಕುರಿತ ಉಲ್ಲೇಖಗಳು ಮಾತ್ರ ಕೆಲವು ಕೀರ್ತನೆಗಳಲ್ಲಿವೆ: ''ಉತ್ಸವ ಮೂರುತಿಯು ಬೀದಿ ಮೆರೆಯುತ ಬರಲು ಸತ್ಸಂಗತಿಗೆ ಹರಿದಾಸರೆಲ್ಲ'' (2-106). ಅನ್ನಮಾಚಾರ್ಯರು ಕೂಡ ಶಿಲ್ಪಾಕೃತಿಗಳ ವರ್ಣನೆಮಾಡುವ ಗೋಜಿಗೆ ಹೋಗಿಲ್ಲ. ವೇಂಕಟೇಶ್ವರನ ದಿವ್ಯ ಮಂಗಲ ವಿಗ್ರಹವನ್ನು ಬಹಳ ಸುಂದರವಾಗಿ ವರ್ಣಿಸಿರುವುದನ್ನು ನೋಡುತ್ತೇವೆ.

ಪಡಿಯಚ್ಚುಗಳಲ್ಲಿ ಲೋಹ ಮುಂತಾದವನ್ನು ಕರಗಿಸಿ ಹಾಕಿ ಗೊಂಬೆಗಳನ್ನು ತಯಾರಿಸುವ ವಿಧಾನಗಳು ಆಚಾರ್ಯರ ಕಾಲದಲ್ಲೂ ಇದ್ದವು. ''ವಿವಿಧ ರೂಪಗಳನ್ನು ಪಡಿಯಚ್ಚುಗಳಲ್ಲಿ ಹಾಕಿದಂತೆ ಸ್ಪಷ್ಟವಾಗಿ ನಿಂತಿದೆ ನಿನ್ನ ಮಾಯೆ''[3] ಎಂದು ಭೌತಿಕ ಪ್ರಪಂಚವೆಂಬ ಮಾಯೆ ಹೇಗೆ ಕಣ್ಣಮುಂದೆ ನಿಂತಿದೆ ಎಂಬುದನ್ನು ಅನ್ನಮಾಚಾರ್ಯರು ಹೇಳುತ್ತಾರೆ. ಪಡಿಯಚ್ಚಿನ ಗೊಂಬೆಗಳಿಗೆ 'ಬಚ್ಚಿನರೂಪುಲು' ಎಂದು ಹೆಸರು. ಅರಗು ಲೇಪನದ ಗೊಂಬೆಗಳನ್ನು ತಯಾರಿಸುವುದೂ ಆ ಕಾಲದಲ್ಲಿತ್ತು. 'ಲಕ್ಕಪೂತ ಕಪುರುಲು' (7-34) ಎಂಬುದು ಇದನ್ನೇ ಸೂಚಿಸುತ್ತದೆ. ಶಿಲಾವಿಗ್ರಹ, ದಾರುವಿಗ್ರಹ (5-189), ಸೂತ್ರದಗೊಂಬೆ (7-273) ಮುಂತಾದವನ್ನು ಅನ್ನಮಾಚಾರ್ಯರು ಉಲ್ಲೇಖಿಸಿದ್ದಾರೆ.

---

[1] ಜೋಡುಗೂಡಿ ನೀವು ನೇನು ನಾಡುಕೊನ್ನ ಮಾಟಲೆಲ್ಲಾ
ಗೋಡಲೇನಿ ಚಿತ್ತರವುಲೈ ವೇಂಕಟೇಶ
ಯಾಡಾ ನಾ ಮತಿ ಬಾಯವುರಾ (13-312).

[2] ವಿರಹಾನ ಬಡಲೇಕ ಮಾ
ಪಡತಿ ನೀಕು ಚಿತ್ತುರುಪಟ ಪಂಪೇ ನಿದಿಗೋ (16-2-47).

[3] ಬಚ್ಚೆನ ರೂಪುಲು ಪೆಕ್ಕು ಪಡೆಚ್ಚುಲ ವೇಸಿನಟ್ಲು
ನಿಚ್ಚಲ ನಿನುಚುನ್ನದಿ ನೀ ಮಾಯ (ಅಧ್ಯಾ. ಸಂ., 2, ಪು. 121).

ಕೀರ್ತನೆಗಳಲ್ಲಿ ಕೋಟೆ, ದೇವಸ್ಥಾನ ಮುಂತಾದವುಗಳ ವಾಸ್ತುಶಿಲ್ಪದ ಬಗೆಗೆ ಉಲ್ಲೇಖಗಳು ಕಂಡುಬರುವುದಿಲ್ಲವಾದರೂ ಗೃಹ ನಿರ್ಮಾಣವನ್ನು ಸೂಚಿಸುವ ಉಲ್ಲೇಖಗಳು ಕೆಲವು ಸಿಕ್ಕುತ್ತವೆ. "ಮುನ್ನ ಶತಕೋಟಿರಾಯರುಗಳಾಳಿದ ನೆಲವ, ತನ್ನದೆಂದೆನಂತ ಶಾಸನವ ಬರೆಸಿ, ಬಿನ್ನಣದ ಮನೆಕಟ್ಟಿ ಕೋಟೆಕೊತ್ತಳವಿಕ್ಕಿ, ಚೆನ್ನಿಗನಸುವಳಿಯೆ ಹೊರಗೆ ಹಾಕುವರು" (ಉ. ಪ್ರ., ಭಾಗ 1, ಪು. 56) ಎಂಬಲ್ಲಿ ಎಲ್ಲವೂ ನಶ್ವರವೆಂಬುದನ್ನು ಪುರಂದರದಾಸರು ಸಾರಿದ್ದಾರೆ.

ಗೃಹವಾಸ್ತುವಿನಲ್ಲಿ ಅನೇಕ ವಿಷಯಗಳನ್ನು ಪರಿಶೀಲಿಸಬಹುದು: ಬುನಾದಿ ಗೋಡೆ, ಬಾಗಿಲು, ಬಚ್ಚಲು, ಅಡುಗೆಮನೆ ಮುಂತಾದವುಗಳಿಂದ ಕೂಡಿದ ನಿವಾಸಗೃಹ; ಜನೋಪಯೋಗಿ ಸ್ಥಳಗಳಾದ ದೇವಾಲಯ, ಶಾಲೆ, ನೃತ್ಯಾಗಾರ, ಸಮಾಧಿ ಇತ್ಯಾದಿಗಳು. ಆದರೆ ಹಿಂದೆ ಹೇಳಿದಂತೆ ಪುರಂದರದಾಸರಲ್ಲಿ ಗೃಹವಾಸ್ತುವಿನ ಬಗೆಗಿನ ಉಲ್ಲೇಖಗಳೇ ಹೆಚ್ಚಾಗಿ ಕಂಡುಬರುತ್ತವೆ.

"ಹೊಸಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ" (ಉ. ಪ್ರ., ಭಾಗ 2, ಪು. 27) ಎಂಬುದು ವಾಸ್ತುವಿಗೆ ಸಂಬಂಧಿಸಿದ್ದಲ್ಲದಿದ್ದರೂ ಮನೆಕಟ್ಟಿದಾಗ ಶಾಂತಿ ಮಾಡಿಸಬೇಕೆಂಬ ನಂಬಿಕೆಯನ್ನು ಸೂಚಿಸುತ್ತದೆ. "ಕೂಳಿನ ಬಲದಲಿ ಬೆಳೆದ ಕಾಯದ ಬಾಳವೆಯೆಂಬುದು ಸ್ಥಿರವಲ್ಲ, ಮಾಳಿಗೆ ಮನೆಯುಪ್ಪರಿಗೆಯು ಕೋಣೆಯು ಫೌಳಿಗಳಲಲ್ಲಿ ಹಂದಲ್ಲ" (ಹ. ಕೀ. ತ., ಪು. 83) ಎಂಬ ವೈರಾಗ್ಯದ ಮಾತುಗಳು ಪುರಂದರದಾಸರಲ್ಲಿ ಕಂಡುಬರುತ್ತವೆ. ಮಾಳಿಗೆ ಮನೆಗಳು ಅಂದೂ ಇಂದೂ ಕಾಣಸಿಕೊಳ್ಳುವಂಥವೇ. ಆದರೆ "ಕುಂದಣದಿ ರಚಿಸಿದ ಸಜ್ಜೆ ಮನೆಯಲ್ಲಿ ಇಂದ್ರಮಾಣಿಕಮಯ ಮಂಟಪದಿ..." ಪವಡಿಸುವ ಪರಮಾತ್ಮನ ಚಿತ್ರ ಕನಸಿನ ಕಲ್ಪನೆಯೇ ಆಗಿದೆ. ಈ ರೀತಿಯ ಊಹೆಗಳು ಪ್ರಾಚೀನ ಕಾವ್ಯಗಳಲ್ಲಿ ಹೇರಳವಾಗಿ ಕಂಡುಬರುತ್ತವೆ. "ಚಿತ್ರದ ಮನೆಗಳು ಬೆಳ್ಳಿಕಂಬ ಚಿನ್ನದ ಬೋದಿಗೆ ರತ್ನದಕೆಲಸ ಉಪ್ಪರಿಗೆ ನೋಡಿ ಪ್ರೀತಿಯಾಗಿ ನಾನಿರುವೋದು ಕಂಡು ಕರೆವೊರೇನೊ ಎನ್ನ ಯಮುನೆ ಎಳೆವೊರೇನೊ" (ಉ. ಪ್ರ., ಭಾಗ 5, ಪು. 55) ಎಂದು ಹಲುಬುವವನ ಕಲ್ಪನೆ ಪುರಂದರದಾಸರಲ್ಲೂ ಕಂಡುಬರುತ್ತದೆ.

ಮನೆ ಎಂಬ ಕಲ್ಪನೆ ತಾತ್ತ್ವಿಕ ಆಲೋಚನೆಗಳಿಗೆ ಎಡೆಮಾಡಿಕೊಡುತ್ತದೆ. ಪಂಜರ, ಮನೆ ಮುಂತಾದವು ದೇಹಕ್ಕೆ ಸಂಕೇತಗಳಾಗಿ ಬಳಕೆಯಾಗುವುದನ್ನು ಕಾಣುತ್ತೇವೆ. "ಒಂಬತ್ತು ಬಾಗಿಲ ಮನೆ ತುಂಬಿದ ಸಂದಣಿಯಿರಲು, ಕಂಬ ಮುರಿದು ಡಿಂಬ ಬಿದ್ದು ಅಂಬರಕೆ ಹಾರಿಹೋಯಿತು" (6-116) ಎಂದು ನವರಂಧ್ರಗಳಿಂದ ಕೂಡಿದ ದೇಹದಿಂದ ಆತ್ಮ ಹಾರಿಹೋಗುವ ವಿಷಯವನ್ನು ಪುರಂದರದಾಸರು ವರ್ಣಿಸಿದ್ದಾರೆ. ಬಾಗಿಲು ಅಥವಾ ಕಂಬಗಳ ಸಂಖ್ಯೆ ಬೇರೆಯಾಗಬಹುದು. ಆದರೆ ಮನೆಯನ್ನು ದೇಹಕ್ಕೆ ಪ್ರತಿಮೆಯಾಗಿ ತೆಗೆದುಕೊಳ್ಳುವ ರೀತಿ ಮಾತ್ರ ಒಂದೇ ಆಗಿರುತ್ತದೆ. "ಅಷ್ಟ ಕಂಬವನಿಕ್ಕಿ ಚೌಕದುಪ್ಪರಿಗೆಯ ಕಟ್ಟಿದ ಮನೆ ಇದ್ದಂತಿಹುದು" (5-124) ಎಂದು ಉಪ್ಪರಿಗೆಯಿಂದ ಕೂಡಿದ ಮನೆಗೆ ಹೋಲಿಸಬಹುದು. ಕೆಲವು ಮಾರ್ಮಿಕ ಭಾವಗಳನ್ನು ಸೂಚಿಸಲು

ಗೃಹನಿರ್ಮಾಣದ ಅಂಗಗಳನ್ನು ಹಲವೆಡೆ ದಾಸರು ಹೆಸರಿಸಿದ್ದಾರೆ. "ಕದವ ಮುಚ್ಚಿದ ಳಿದಕೊ ಗೈಯ್ಯಾಳಿ ಮೂಳಿ ಚಿಲುಕ ಅಲ್ಲಾಡುತಿದೆ" (ಉ. ಪ್ರ., ಭಾಗ 2, ಪು. 42) ಎನ್ನುತ್ತಾರೆ. ದ್ವಂದ್ವಾರ್ಥವುಳ್ಳ ಇಂತಹ ಪದಗಳಿಗೆ ಅರ್ಥ ಹೇಳುವುದೇ ಕಷ್ಟ. "ಹಿತ್ತಲ ಗೋಡೆಯು ಬಿರಿಯಲಿ ಕಾಳ್ಗತ್ತಲೆಯಾದರೂ ಕವಿಯಲಿ ಹರಿಯೆ" (6-100) ಎಂದು ಹೇಳುವಾಗ ಅದು ಗೂಢಾರ್ಥದಲ್ಲಿದ್ದರೂ ಮನೆಗೆ ಹಿತ್ತಲಿನ ಗೋಡೆ ಇರುವ ವಿಷಯ ತಿಳಿಯುತ್ತದೆ. "ಸುಣ್ಣವಿಲ್ಲ ಭಾಗವತರೆ ಸುಣ್ಣನೆ ಗೋಡೆಗೆ ನಿನ್ನೆ ತೊಡೆದುಬಿಟ್ಟೆ" (6-102) ಎಂಬಲ್ಲಿ ಗೋಡೆಗೆ ಸುಣ್ಣ ಬಳಿದು ಅಂದವಾಗಿ ಇಟ್ಟುಕೊಳ್ಳುವ ಅಭ್ಯಾಸ ಅಂದಿಗೂ ಇಂದಿಗೂ ಇರುವಂಥದೇ ಎಂಬ ವಿಷಯ ವ್ಯಕ್ತವಾಗುತ್ತದೆ.

ಅನ್ನಮಾಚಾರ್ಯರು ಕೂಡ ಗೃಹನಿರ್ಮಾಣವನ್ನು ಕುರಿತು ಕೆಲವು ಸಂಕೀರ್ತನೆಗಳಲ್ಲಿ ಹೇಳಿದ್ದಾರೆ. ಶ್ರೀಮಂತರು ದೊಡ್ಡ ಭವನಗಳಲ್ಲಿ ವಾಸಿಸಿದರೆ ಬಡವರು ಚಿಕ್ಕ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ಬಡವರಿಗೆ "ತೂತಿಲ್ಲದ ಗುಡಿಸಲು ಕುಕ್ಕೆಯಷ್ಟಿದ್ದರೂ ಸಾಕು"[1] ಎನ್ನುತ್ತಾರೆ ಆಚಾರ್ಯರು. "ಸುಣ್ಣ ಗೋಡೆಗೆ ಎಷ್ಟು ಶೋಭೆಯನ್ನು ನೀಡುವುದೆಂದರೆ, ಮನುಷ್ಯನಿಗೆ ವಿಂತಿಯಿಲ್ಲದ ಅರಿವಿನಷ್ಟು."[2] ಸುಣ್ಣವಿಲ್ಲದ ಗೋಡೆ ಕಾಂತಿ ಹೀನ ಎಂದು ತಿಳಿಸಿದ್ದಾರೆ.

ಅನ್ನಮಾಚಾರ್ಯರ ಕಾಲದಲ್ಲಿ ಉಪ್ಪರಿಗೆ ಮನೆಗಳಿಗೇನು ಕೊರತೆಯಿರಲಿಲ್ಲ. "ಉಪ್ಪರಿಗೆ ಮೇಲೆ ನೀನು ಎಲೆ ಮಡಿಚಿಕೊಟ್ಟದ್ದು" ಎಷ್ಟು ಚೆನ್ನಾಗಿತ್ತು[3] ಎಂಬುದನ್ನು ಹೇಳಿದ್ದಾರೆ. ಅನ್ನಮಾಚಾರ್ಯರು ಅಲ್ಲಲ್ಲಿ ಉಲ್ಲೇಖಿಸಿರುವ ಗೃಹ ನಿರ್ಮಾಣದ ಅಂಗಗಳಲ್ಲಿ ಚಾವಡಿ (13-22), ಚಪ್ಪರ (6-84), ಬಾಗಿಲು (6-84), ದೊಡ್ಡಿ (17-505), ಮಹಡಿ (3-113) ಮುಂತಾದವು ಸೇರಿವೆ.

ವೇಷಭೂಷಣಗಳು, ಆಹಾರಪಾನೀಯಗಳು, ಗೃಹೋಪಕರಣಗಳು, ಇತರ ವಸ್ತುಗಳು, ಗೃಹನಿರ್ಮಾಣಕ್ಕೆ ಸಂಬಂಧಿಸಿದ ವಸ್ತುಗಳು ಮುಂತಾದ ಉಲ್ಲೇಖಗಳ ಪರಿಶೀಲನೆಯಿಂದ ಆಯಾ ಪ್ರಾಂತದ ಅಭಿರುಚಿಗಳು, ಸಂಪ್ರದಾಯಗಳು ಮತ್ತು ಪದ್ಧತಿಗಳು ತಿಳಿದಂತಾಯಿತು.

---

[1] ಕಂತಲೇನಿ ಗುಡಿಶೊಕ್ಕ ಗಂಪಂತಯಿತ ಜಾಲು (ಅಧ್ಯಾ. ಸಂ., 1. 78).

[2] ಗೋಡಪ್ಪೈ ಸುನ್ನಂಬು ಕೊದಲೇನಿ ಯೆಱುಕ (ಅದೇ, ಪು 72).

[3] ಉಪ್ಪರಿಗ ಪೈ ನಾಕು ಮಡಿಚಿ ನೀವೀಗಾ
ವದನಾನ ನಂದುಕೊನೆ ವಡಿನೆಂತ ವಲಪೋ (4-2).

# ಆಚಾರ–ನಂಬಿಕೆ–ಧರ್ಮ

ಆಚಾರ, ನಂಬಿಕೆ ಮತ್ತು ಧರ್ಮ ಎಂಬವು ಮಾನವನ ಮಾನಸಿಕ ವಿಚಾರಕ್ಕೆ ಸಂಬಂಧಿಸಿದಂಥವು. ಇವು ಸಮಾಜದಲ್ಲಿ ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಪ್ರಸಾರ ಆಗುವಂಥವು. ಈ ಪ್ರಸಾರ ಭಾಷೆಯ ಮೂಲಕ ಆಗಬಹುದು ಅಥವಾ ಆಚರಣೆ, ವಿಧಿ, ನಿಷೇಧ ಮುಂತಾದವುಗಳ ಮೂಲಕ ಆಗಬಹುದು. ಇಲ್ಲಿ ಬಳಸುವ ವಸ್ತುಗಳಿಗೆ ಅಥವಾ ಭಾಷೆಗೆ ಅಷ್ಟೇನೂ ಪ್ರಾಧಾನ್ಯವಿಲ್ಲ. ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಪ್ರಸಾರವಾಗುವ ವಿಷಯಕ್ಕೆ ಮಾತ್ರ ಪ್ರಾಧಾನ್ಯ.

ಮನುಷ್ಯನ ಜೀವನಚಕ್ರದಲ್ಲಿ ನಡೆಯುವ ಕೆಲವು ಮುಖ್ಯ ಘಟನೆಗಳಿವೆ. ಈ ಘಟನೆಗಳಲ್ಲಿ ಮೊದಲನೆಯದಾದ ಹುಟ್ಟಿನಿಂದಲೇ ಆಚಾರಗಳು ಪ್ರಾರಂಭವಾಗಿ ಸಾವಿನಲ್ಲಿ ಮುಕ್ತಾಯ ಆಗುತ್ತವೆ. ಈ ಮಧ್ಯದಲ್ಲಿ ಮದುವೆ ಒಂದು ಪ್ರಧಾನ ಘಟ್ಟವಾಗಿ ನಿಲ್ಲುತ್ತದೆ. ಉದ್ದಕ್ಕೂ ಯಾವುದೋ ಒಂದು ರೀತಿಯ ಆಚಾರ, ಸಂಪ್ರದಾಯಗಳ ಪ್ರಭಾವ ಇದ್ದೇ ಇರುತ್ತದೆ.

ಆಚಾರ ಮತ್ತು ನಂಬಿಕೆಗಳ ನಡುವೆ ಇರುವ ವ್ಯತ್ಯಾಸ ತುಂಬ ಸೂಕ್ಷ್ಮ. ಆಚಾರ ಕೆಲವು ನಂಬಿಕೆಗಳಿಂದ ಕೂಡಿರಬಹುದು. ಒಂದೊಂದು ಸಲ ಇವೆರಡನ್ನೂ ಪ್ರತ್ಯೇಕಿಸಿ ನೋಡುವುದು ಅಸಾಧ್ಯವೇ ಆಗುತ್ತದೆ. ಮಾನವ ಜೀವನದಲ್ಲಿ ನಂಬಿಕೆಗಳಿಗಿರುವ ಪಾತ್ರ ದೊಡ್ಡದು. ನಂಬಿಕೆ ಇಲ್ಲದ ಮನುಷ್ಯನಿಲ್ಲ. ಆದರೆ ಭಯಮೂಲದ ಮೂಢನಂಬಿಕೆಗಳು ಕೆಲವು ಸಲ ಮನುಷ್ಯನ ಪತನಕ್ಕೆ ಕಾರಣವಾಗುತ್ತವೆ.

ಆಚಾರಗಳು ಮತ್ತು ನಂಬಿಕೆಗಳು ಧಾರ್ಮಿಕ ವ್ಯವಸ್ಥೆಗೆ ಕಾರಣವಾಗುತ್ತವೆ. ಸಾಮಾನ್ಯ ಜನರ ಮಟ್ಟದಲ್ಲಿ ವ್ಯವಸ್ಥಿತವಾದ ಧಾರ್ಮಿಕ ಪದ್ಧತಿ ಇರುವುದಿಲ್ಲ; ಆದರೆ ಆಚಾರಗಳು ಮತ್ತು ನಂಬಿಕೆಗಳು ಇರುತ್ತವೆ. ಸಮಾಜ ಪ್ರಬುದ್ಧ ಸ್ಥಿತಿಯ ಕಡೆಗೆ ಹೋದಷ್ಟೂ ವ್ಯವಸ್ಥೆ ನಿಯಮಬದ್ಧವಾಗುತ್ತದೆ. ಆಚಾರಗಳು, ನಂಬಿಕೆಗಳು, ಧಾರ್ಮಿಕ ಆಚರಣೆಗಳು ಇವೆಲ್ಲ ಸೇರಿ ಒಂದು ವ್ಯವಸ್ಥೆಯ ರೂಪತಾಳಿ ಸಮಾಜದ ಸದಸ್ಯರೆಲ್ಲ ಅವನ್ನು ಅನುಸರಿಸಬೇಕೆಂಬ ನಿಯಮ ಮಾಡಿದಾಗ ಧಾರ್ಮಿಕ ವ್ಯವಸ್ಥೆ ಏರ್ಪಡುತ್ತದೆ.

## ಆಚಾರ

ಆಚಾರ ಎಂಬುದನ್ನು ನಾವು ಬೇರೆ ಬೇರೆ ಅರ್ಥಗಳಲ್ಲಿ ಬಳಸುತ್ತಿರುತ್ತೇವೆ. ಸಮಾಜದ ಸದಸ್ಯರು ಒಪ್ಪಿ ಆಚರಿಸುವ ಕೆಲವು ವಿಧಿಗಳನ್ನು ಆಚಾರ ಎನ್ನಬಹುದು. ಕೆಲವು ಸಂದರ್ಭಗಳಲ್ಲಿ ಇದನ್ನು ವಿಧಿ, ಸಂಸ್ಕಾರ ಮುಂತಾದ ಹೆಸರುಗಳಿಂದಲೂ

ಕರೆಯುವುದುಂಟು. ಆಚಾರ, ಅನಾಚಾರ, ಸದಾಚಾರ, ದುರಾಚಾರ, ಡಂಬಾಚಾರ, ಮೂಢಾಚಾರ ಮುಂತಾದ ಪದಗಳು ಬೇರೆ ಬೇರೆ ಸಂದರ್ಭಗಳಲ್ಲಿ ಬಳಕೆಯಾಗುತ್ತಿರುತ್ತವೆ. ಜನರು ಸಾಮೂಹಿಕವಾಗಿ ಅನುಸರಿಸುವ ಸಂಪ್ರದಾಯಗಳೂ ಸೇರಿದಂತೆ ಆಚಾರ ಎಂಬ ಪದವನ್ನು ಇಲ್ಲಿ ಬಳಸಲಾಗಿದೆ. ನೋಂಪಿ, ವ್ರತ, ಹಬ್ಬ, ಜಾತ್ರೆ, ಉತ್ಸವ ಮತ್ತು ಇತರ ಆಚರಣೆಗಳನ್ನು ಇದರಲ್ಲಿ ಸೇರಿಸಬಹುದು. ಈ ಉತ್ಸವಗಳಲ್ಲಿ ಕೆಲವು ಧಾರ್ಮಿಕ ಹಿನ್ನೆಲೆ ಇರುವವಾದರೆ, ಇನ್ನು ಕೆಲವು ಲೌಕಿಕ ಹಿನ್ನೆಲೆ ಇರುವಂಥವು. ಗೃಹವೈದ್ಯವೂ ಸಾಮಾಜಿಕ ಆಚಾರಗಳಲ್ಲಿ ಒಂದು.

ಹುಟ್ಟಿನಿಂದ ಸಾವಿನವರೆಗೂ ಮನುಷ್ಯ ಆಚರಿಸುವ ಆಚಾರಗಳು ಅವನ ಜೀವನದ ಅವಿಭಾಜ್ಯ ಅಂಗವಾಗಿರುತ್ತವೆ. ಇಂಥ ವೈವಿಧ್ಯಮಯ ಆಚಾರಗಳಿಂದ ಸಂಸ್ಕೃತಿಯ ಹಲವು ಮುಖಗಳ ಅರಿವು ನಮಗುಂಟಾಗುತ್ತದೆ. ಪುರಂದರದಾಸರು ಮತ್ತು ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ನೂರಾರು ಆಚಾರಗಳನ್ನು ಉಲ್ಲೇಖಿಸಿದ್ದಾರೆ.

ಸೂತಕ ಮುಂತಾದವು ಶುಭ್ರತೆಯ ದೃಷ್ಟಿಯಿಂದಲೋ ಜನನ ಮರಣಾದಿ ಗಳಲ್ಲಿರುವ ನಿಗೂಢತೆಯ ದೃಷ್ಟಿಯಿಂದಲೋ ಏರ್ಪಟ್ಟು ಇಂದಿಗೂ ಸ್ವಲ್ಪಮಟ್ಟಿಗೆ ಅಸ್ತಿತ್ವದಲ್ಲಿವೆ.

> ಹೆತ್ತಸೂತಕ ಹತ್ತು ದಿನಕೆ ಪರಿಹಾರವು
> ಮೃತ್ಯುಸೂತಕ ಹನ್ನೆರಡು ದಿನವು
> ಮತ್ತೆ ಋಣಸೂತಕ ಜನ್ಮಜನ್ಮಾಂತರದಿ
> ಹತ್ತಿಕೊಂಡಿಹುದು ಎತ್ತಲು ಹೋಗಗೊಡದೆ (2-20)

ಎಂದು ಸೂತಕದ ವಿಚಾರವನ್ನು ಪುರಂದರದಾಸರು ಉಲ್ಲೇಖಿಸಿದ್ದಾರೆ. ''ಪುತ್ರ ಹುಟ್ಟಿದ ದಿವಸ ಹಾಲು ಊಟದ ಹಬ್ಬ, ಮತ್ತೊಬ್ಬ ಮಗನ ಉಪನಯನ ನಾಳೆ, ಅರ್ಥಿಯಾಗಿದೆ ಬದುಕು ಸಾಯಲಾರೆನು... '' (2-74) ಎಂಬಲ್ಲಿ ಮಗ ಹುಟ್ಟಿದಾಗ ಆಚರಿಸುವ ಹಬ್ಬವನ್ನೂ ಮುಂದೆಮಾಡುವ ಉಪನಯನವನ್ನೂ ಹೇಳಿದ್ದಾರೆ. ಹೆಣಕ್ಕೆಮಾಡುವ ಸಂಸ್ಕಾರವನ್ನು ಪುರಂದರದಾಸರು ಹೀಗೆ ಹೇಳಿದ್ದಾರೆ:

> ಯಾರು ಬರುವರು ನಿನ್ನಹಿಂದೆ....
> ತುರಗ ಗಜಗಳು ಬರುವುದಿಲ್ಲ ನಿನ್ನ
> ಮೆರವಣಿಗೆ ಮಾಡುವ ಈ ತನು ನಿನ್ನದಲ್ಲ
> ನರಪತಿಯ ಸೇವೆ ಸ್ಥಿರವಲ್ಲ
> ಈ ದೇಹ ನೀ ಬಿಟ್ಟ ಬಳಿಕ ಅವರ
> ಬಾಧೆಗೋಸ್ಕರ ಬೆಂಕಿಹಾಕಿ ಸುಡುತಿಹರೊ
> ಬೂದಿ ನೀರೊಳು ಚೆಲ್ಲುತಿಹರೊ ಬಂದು
> ಬೀದಿಯಲಿ ನಿಂತು ಬೊಬ್ಬೆಯ ಮಾಡುತಿಹರೊ (ಉ. ಪ್ರ., ಭಾಗ 3, ಪು. 3.).

ಕೆಲವು ಆಚಾರಗಳು ಅರ್ಥಹೀನವಾಗಿ ಮೂಢಾಚಾರಗಳಾಗಿ ಮುಂದುವರಿಯುತ್ತವೆ. ಇಂಥ ಕೆಲವು ಆಚಾರಗಳು ಪುರಂದರದಾಸರ ಕಾಲಕ್ಕೇ ಟೀಕೆಗೆ ಗುರಿಯಾಗಿದ್ದರೂ ಅವು ಇಂದೂ ಆಚರಣೆಯಲ್ಲಿರುವಂಥವೇ. "ತಂದೆ ಸತ್ತಮೇಲೆ ನೂರು ಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತನಾದನೆಂಬರು ಮಂದಮತಿಯ ಜನಗಳು" (ಉ. ಪ್ರ., ಭಾಗ 1, ಪು. 79) ಎಂದು ಧೈರ್ಯವಾಗಿ ದಾಸರು ಟೀಕಿಸಿರುವುದು ಗಮನಾರ್ಹ. ಇನ್ನೊಂದು ಕಡೆ "ಸತ್ತವನು ಎತ್ತ ಹೋದ, ಸತ್ತು ತನ್ನ ಜನ್ಮಕ್ಕೋದ, ಸತ್ತವನು ಉಂಬವನೆಂದು ನಿತ್ಯ ಪಿಂಡ ಇಕ್ಕಿದರೆ ಇದು ಯಾವ ಕರ್ಮವೊ... ಎಳ್ಳುದರ್ಭೆ ಕೈಲಿ ಪಿಡಿದು ಪಿತೃ ತೃಪ್ತಿಯೆಂದು ಬಿಡಲು, ಎಳ್ಳು ಮೀನು ನುಂಗಿಹೋಯಿತು, ದರ್ಭೆ ನೀರೊಳು ಹರಿದು ಹೋಯಿತು, ಎಡಕ್ಕೆ ಬಲಕ್ಕೆ ಎಂದು ಕೇಳಿ, ಎಡಕ್ಕೆ ತೋರಿಸಿ ಬಲಕ್ಕೆ ತೋರಿಸಿ, ಕಡು ದೇವತೆಯನೆ ಬರಿಸಿ, ಕಠಿನವಸ್ತು ಕೇಳಿರುತಾರೆ, ಮಂತ್ರಾಕ್ಷತೆಯ ಕೈಲಿಕೊಟ್ಟು, ಸ್ವರ್ಗವನ್ನು ಹೋಗೆಂದರೆ, ಮಂತ್ರವೆಲ್ಲೊ ಅಕ್ಷತೆಯೆಲ್ಲೊ, ಅವರೆಲ್ಲೊ ಇವರೆಲ್ಲೊ ಹೇಳುವನು ಅಜ್ಞಾನಿ ಕೇಳುವನು ಅವಿವೇಕಿ...." ಎಂದು ಹೇಳಿ (ಉ. ಪ್ರ., ಭಾಗ 3, ಪು. 10) ಆಚಾರಗಳನ್ನು ವೈಚಾರಿಕ ದೃಷ್ಟಿಯಿಂದ ನೋಡಿದ್ದಾರೆ. ಆದರೆ ಧಾರ್ಮಿಕ ಹಿನ್ನೆಲೆಯಿಂದ ಸಮಾಜದಲ್ಲಿ ನಡೆದುಬಂದಿರುವ ಆಚಾರಗಳಿಗೆ ದಾಸರೂ ಬದ್ಧರಾಗಿದ್ದರು. "ಅಂಬಲಿಯನುಂಬುವಗೆ ಅಮೃತಾನ್ನವೇಕೆ ಕಂಬಳಿಯ ಹೊದೆಯುವವಗೆ ಮಡಿಯೇತಕೆ" (ಹ. ಕೀ. ತ., ಪು. 130) ಎಂದು ಕೇಳಿ ಮಡಿ ಹೇಗಿರಬೇಕೆಂದು ಸೂಚಿಸಿದ್ದಾರೆ:

ಮಡಿ ಮಡಿ ಮಡಿಯೆಂದು ಮುಮ್ಮಾರು ಹಾರುತಿ
ಮಡಿಯೆಲ್ಲಿ ಬಂದಿತೊ ಬಿಕನಾಶಿ....
ಮಡಿಯು ನೀನೆ ಮೈಲಿಗೆ ನೀನೆ
ಸುಡಲಿ ನಿನ್ನ ಮಡಿ ಬಿಕನಾಶಿ.... (5-71)
ಬಟ್ಟೆಯ ನೀರೊಳಗಿಟ್ಟು ಒಣಗಿಸಿ
ಉಟ್ಟರೆ ಅದು ತಾ ಮಡಿಯಲ್ಲ
ಹೊಟ್ಟೆಯೊಳಗಿನ ಕಾಮಕ್ರೋಧಗಳ
ಬಿಟ್ಟರೆ ಅದು ತಾ ಮಡಿಯೊ (5-72).

ಮುಟ್ಟಾದ ಹೆಣ್ಣು ಹೊರಗೆ ಕೂರುವುದನ್ನೂ ದಾಸರು ಹೇಳಿದ್ದಾರೆ: "ಅಟ್ಟದ ಮೇಲಿನ ಅಕ್ಕಿ ತೆಗೆಯಲಾರೆ, ಹೊಟ್ಟೆನೋವು ಕಾಣೊ ಹೋಗೋ ದಾಸಯ್ಯ ಮುಟ್ಟಾಗಿ ಕುಳಿತೇನೆ ಮನೆಯುಮರಿಲ್ಲವೊ ಕಟ್ಟುಗ್ರ ಮಾಡದೆ ಹೋಗೋ ದಾಸಯ್ಯ (5-158).

ಹಿರಿಯರಿಗಾಗಿ ಮಾಡುವ ತಿಥಿ, ಶ್ರಾದ್ಧ ಮುಂತಾದ ಆಚಾರವನ್ನು ಒಂದೆಡೆ ಹೇಳಿದ್ದಾರೆ: "ಹಿರಿಯರ ದಿನದಲ್ಲಿ ಹೆಸರತೊವ್ವೆ ಅತ್ತೈಲಭಕ್ಷ್ಯ, ಗೋದಿ ಉದ್ದಿನಲಿ

ಮಾಡದಿರಲು ಸರಿಯು ಕಾಗೆಯು ಮಾಂಸಕ್ಕೆಂದು ಶ್ರುತಿ ಸಾರುತಿದೆ ಜಗದೊಳು.... (5-67) ಎಂದಿದ್ದಾರೆ.

ಪೂಜಾದಿಗಳನ್ನು ನಿಯಮ ತಪ್ಪದೆ ಅನುಸರಿಸಲು ಸಾಧ್ಯವಾಗದಿರುವವರಿಗೆ ಕೆಲವು ಸುಲಭೋಪಾಯಗಳನ್ನು ಹೇಳಿದ್ದಾರೆ. "ಸುಲಭ ಪೂಜೆಯ ಕೇಳಿ ಬಲವಿಲ್ಲದವರು ಕಾಲಕಾಲದ ಕರ್ಮ ಕಮಲಾಕ್ಷಗರ್ಪಿಸಿರಿ" (2-129) ಎಂದು ಹೇಳುತ್ತಾ "ಇರುಳು ಹಚ್ಚುವ ದೀಪ ಹರಿಗೆ ನೀರಾಜನವು, ಮರುವುಡುವ ಧೋತರವು ಪರಮವಸ್ತ್ರ, ತಿರುಗಾಡಿ ದಣಿಯುವುದು ಹರಿಗೆ ಪ್ರದಕ್ಷಿಣೆಯು, ಮರಳಿ ಹೊಡಮರಳುವುದು ನೂರೆಂಟು ದಂಡ, ನುಡಿವ ಮಾತೆಗಳೆಲ್ಲ ಪಾಂಡುರಂಗನ ಜಪವು...." ಎಂದು ಸುಲಭ ದಲ್ಲೇ ಭಗವಂತನನ್ನು ಒಲಿಸಿಕೊಳ್ಳುವ ಬಗೆಯನ್ನು ವಿವರಿಸಿದ್ದಾರೆ.

ಪೂಜಾ ವಿಧಾನಗಳನ್ನು ಧರ್ಮ ಮತ್ತು ನಂಬಿಕೆಗಳಿಂದ ಬೇರೆಮಾಡಲು ಸಾಧ್ಯವಿಲ್ಲ. ಆದರೂ ಇವುಗಳಲ್ಲಿ ಕೆಲವು ಕಾರ್ಯವಿಧಾನಗಳು ಅಡಗಿರುವುದರಿಂದ ಆಚಾರಗಳಲ್ಲಿ ಪರಿಶೀಲಿಸಲಾಗುತ್ತಿದೆ. ಪೂಜೆಯನ್ನು ಕೈಗೊಳ್ಳುವ ಮುಂಚೆ ಶೌಚವಿಧಿಗಳು ಇರುತ್ತವೆ. "ಮಲಮೂತ್ರ ಮಾಡುವಾಗ ಕರದಲ್ಲಿ ಜಲವಿರೆ ಮಲಕೆ ಸಮಾನ ಅದು ಶುದ್ಧವಲ್ಲ" (5-38) ಎಂದು ಹೇಳಿ ಮೃತ್ತಿಕಾಶೌಚವನ್ನು ಕುರಿತು ವಿವರವಾಗಿ ಹೇಳಿದ್ದಾರೆ. "ಮೃತ್ತಿಕೆ ಶೌಚವಿಲ್ಲದವಗೆ ಮತ್ತೆ ಸ್ನಾನ ಜಪವೇಕೊ, ಹಸ್ತ ಕಟ್ಟಲರಿಯದವಗೆ ಅಗ್ನಿ ಹೋತ್ರವೇಕೊ (2-100) ಎಂಬುದು ಪುರಂದರದಾಸರ ಅಭಿಪ್ರಾಯ. ಆಚಮನ ಮಾಡುವ ವಿಧಿಗಳನ್ನು ಕೂಡ ದಾಸರು ಶ್ರದ್ಧೆಯಿಂದ ಉಲ್ಲೇಖಿಸಿದ್ದಾರೆ: "ಹಲವು ಕರ್ಮಗಳಿಗೆ ಹವಣು ಎರಡಾಚಮನ, ಮಲಮೂತ್ರ ವಿಸರ್ಜನಕ್ಕೆ ಮಾಡು ಮೂರು (5-49). ಬ್ರಾಹ್ಮಣರ ಸಂಧ್ಯಾವಂದನಾದಿ ಆಚರಣೆಗಳಲ್ಲಿ ಆಪೋಶನ ಪ್ರಧಾನ ಪಾತ್ರ ವಹಿಸುತ್ತದೆ.

ಆಕಳ ಕಿವಿಗೆ ಎಣೆ ಅಂಗೈ ಹಳ್ಳವಾಗಿರಬೇಕು
ಉದ್ದು ಮುಣುಗುವಂತೆ ಇರಬೇಕು
ನೀರು ಸುಕಾಗದೆ ಹೆಚ್ಚು ಕಡಮೆ ಸಾಕೆಂಬಷ್ಟು ಕುಡಿದರೆ
ಸಾಕಾರ ಪುರಂದರವಿಠಲ ಮದ್ಯ ಸಮಮಾಡುವ (5-48).

"ಎಡದ ಕೈಯಿಂದ ನೀರ ಎತ್ತಿ ಬಲದ ಕೈಯಲ್ಲಿಟ್ಟು ಕುಡಿದರೆ ಆರಾದರಾಪೋಶನಕೆ ಮತ್ತದು ಮದ್ಯ" (5-62) ಎಂತಲೂ "ಆಪೋಶನವ ತನ್ನ ಕೈಯಿಂದ ತಾನೆ ಎರೆದುಕೊಂಡು ಕುಡಿಪಂಗೆ ಕುಲನಾಶನ" (5-63) ಎಂಬ ನಂಬಿಕೆಯನ್ನೂ ಹೇಳಲಾಗಿದೆ. ನೈವೇದ್ಯ (3-134); ಏಕಾರತಿ, ಧೂಪಾರತಿ, ಮಂಗಳಾರತಿ (3-153) ಮುಂತಾದವು ಕೂಡ ಪೂಜಾವಿಧಾನದ ಭಾಗಗಳಾಗಿವೆ.

ನಮ್ಮ ಸಂಸ್ಕೃತಿಯಲ್ಲಿ ಹಬ್ಬ ಹರಿದಿನಗಳಲ್ಲಿ ಮಾತ್ರವಲ್ಲದೆ ಪ್ರತಿದಿನವೂ ಮನೆ ಮತ್ತು ಮನೆಯ ಮುಂಭಾಗವನ್ನು ಸಾರಿಸಿ ರಂಗೋಲಿಗಳಿಂದ ಅಲಂಕರಿಸುವ ಪದ್ಧತಿ

ಯಿದೆ. "ಮಡಕೆ ತೊಳೆಯುಂತೇನೆ ಮನೆಯು ಸಾರಿಸಂತೇನೆ" (5-158), "ರಂಗವಲ್ಲಿಯಂ ಹಾಕಿರೆ" (ಉ. ಪ್ರ., ಭಾಗ 1, ಪು. 45) ಎಂದು ಈ ಪದ್ಧತಿಯನ್ನು ಸ್ಮರಿಸಿದ್ದಾರೆ.

ಭಾರತೀಯರಿಗೆ ಪೂಜೆಮಾಡಲು ವಿಗ್ರಹವೇ ಇರಬೇಕೆಂಬ ಕಡ್ಡಾಯವಿಲ್ಲ. ಮತ ಭೇದವಿಲ್ಲದೆ ಮಾಡುವ ಪೂಜೆಗಳಿವೆ. ಅಂಥವುಗಳಲ್ಲಿ ತುಲಸಿಪೂಜೆ ಒಂದು; ಹೊಸ್ತಿಲ ಪೂಜೆ (ಕಾವ್ಯಪ್ರೇಮಿ, ಪು. 131) ಇನ್ನೊಂದು. ಸಾಲಿಗ್ರಾಮವೆಂಬ ವಿಶೇಷ ಶಿಲೆ ಯನ್ನಿಟ್ಟುಕೊಂಡು ಪೂಜೆಮಾಡುವುದೂ ಉಂಟು. "ದೇವರಪೆಟ್ಟಿಗೆ ತೆಗೆದು ಸಾಲಗ್ರಾಮ ನುಂಗುವನೆ" (ಹ. ಕೀ. ತ., ಪು. 69) ಎಂದು ಬಾಲಕೃಷ್ಣನ ಮೇಲೆ ಗೋಪಿಕೆಯರು ದೂರು ಹೇಳುವರು. ನಮ್ಮಲ್ಲಿ ಉಪವಾಸ, ಜಾಗರಣೆಗಳಂತೂ ಲೆಕ್ಕವೇ ಇಲ್ಲ. ಏಕಾದಶಿ ಹರಿದಿನವೆಂದೂ ಅಂದು ರಾತ್ರಿ ಎಚ್ಚರವಾಗಿದ್ದುಕೊಂಡು ಹರಿಭಜನೆ ಮಾಡಬೇಕೆಂದೂ ಹೇಳಿ (3-16) ಹರಿವಾಸರದುಪವಾಸದ ಭಾಗ್ಯ ದೊರಕುವುದೇ ಕಂಡ ಕಂಡವರಿಗೆ (3-79), 'ಶ್ರಾವಣ ಮಾಸದ ಚವತಿಯ ಉಪವಾಸ' (5-127) ದಂಥ ಇನ್ನು ಕೆಲವು ಸಂದರ್ಭಗಳನ್ನು ಪುರಂದರದಾಸರು ಹೆಸರಿಸಿದ್ದಾರೆ. ನಾಗರಪೂಜೆ ಮಾಡುತ್ತಿದ್ದ ಸಂದರ್ಭವನ್ನು ಹೇಳಿ ಅದು ವ್ಯರ್ಥವಾದುದು ಎಂದು ಹೇಳುತ್ತಾರೆ. "ಹೊನ್ನನಾಗರ ಮಾಡಿ ಬಣ್ಣಿಸಿ ಕಿವಿಗಿಟ್ಟು, ನನ್ನಯ್ಯ ನಾಗಪ್ಪ ಸಲಹೆನ್ನುತ, ಚಿನ್ನನಾಗರ ಬಂದು ಓಡಾಡಿ ಕಡಿವಾಗ, ಹೊನ್ನನಾಗರ ಎತ್ತಹೋದನೆ ಮಾಳಿ" (5-127) ಎಂದು ಪ್ರಶ್ನಿಸುತ್ತಾರೆ.

ಪುರಂದರದಾಸರ ಕಾಲದಲ್ಲಿ ಯಜ್ಞಯಾಗಾದಿಗಳು ಹೆಚ್ಚಿಗೆ ನಡೆಯುದಿದ್ದರೂ ಜಾತ್ರೆ ಮುಂತಾದ ವಿಶೇಷ ಸಂದರ್ಭಗಳಲ್ಲಿ ಪ್ರಾಣಬಲಿ ನಡೆಯುತ್ತಿದ್ದುವೆಂದು ಊಹಿಸ ಬಹುದು. ಪುರಂದರದಾಸರಂಥ ಸಾತ್ತ್ವಿಕ ಪ್ರವೃತ್ತಿಯವರಿಗೆ ಈ ಬಲಿವಿಧಾನಗಳನ್ನು ನೋಡಿ ವರ್ಣಿಸುವ ಸಾಧ್ಯತೆಗಳು ಕಡಿಮೆ. ಆದರೆ ಇಂಥ ಆಚಾರಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಉಪಮೆ, ರೂಪಕಗಳಾಗಿ ಬಳಸಿಕೊಂಡಿರುವ ನಿದರ್ಶನಗಳು ಕೀರ್ತನೆ ಗಳಲ್ಲಿ ಸಿಕ್ಕುತ್ತವೆ. ಊರದೇವರನ್ನು ತನ್ನೊಳಗೆ ತಾನೆ ಮಾಡಬೇಕೆಂದು ಹೇಳುವ ಕೀರ್ತನೆಯೊಂದರಲ್ಲಿ ದಾಸರು ಹೀಗೆನ್ನುತ್ತಾರೆ :

....ಅಷ್ಟದಳದ ಕಂಭ ನಿಲ್ಲಿಸಿ ಕಟ್ಟಿ ಚಕ್ರಂಗಳನು ಹಾಕಿ  
ಸೃಷ್ಟಿದೇವರ ತಂದು ನಿಲ್ಲಿಸಿ ದುಷ್ಟಕೋಣನ ಶಿರವ ತರಿದು  
ಕಷ್ಟತರ್ಕವೆಂಬ ಕುರಿಯಣ್ಣ, ಅದನು ತಂದು  
ಕಟ್ಟಿ ತಲೆಯನು ಹೊಡೆಯಬೇಕಣ್ಣ  
ಅಷ್ಟಮದದ ಕುರಿಗಳನ್ನು ಕಟ್ಟಿ ತಲೆಯನು ಚಂಡನಾಡಿ  
ಅಟ್ಟಿ ತಿರುಗುವ ಕೋಳಿಯನ್ನು ಕುಟ್ಟಿ ಸೂರೆ ಹಾಕುತಲ್ಲಿ  
ನಾನು ಎಂಬುವ ಮೇಕೆ ಹೋತಣ್ಣ, ಅದಕ್ಕೆ ತಕ್ಕ  
ಜ್ಞಾನವೆಂಬ ಪೋತ ರಾಜಣ್ಣ  
ಮಾನವೆಂಬ ಛಾಟಿಹೊಡೆದು ಹೀನ ಹೋತನ ಸೀಳಿಬಿಸುಟು

ಧಾನ್ಯ ಗುಡಿಸಲು ಸೂರೆಗೊಂಡು ತಾನೆ ಬೆಳಗುವ ಜ್ಯೋತಿ ನಿಲ್ಲಿಸಿ

(ಹ. ಕೀ. ತ., ಪು. 107).

ಮೇಲೆ ಉಲ್ಲೇಖಿಸಿದ ಆಚಾರಗಳು ತೆಲುಗುರಲ್ಲೂ ಬಹುಪಾಲು ಕಂಡುಬರುತ್ತವೆ. ಇಂಥ ಸಮಾನ ಆಚಾರಗಳನ್ನು ಅನ್ನಮಾಚಾರ್ಯರ ಕೀರ್ತನೆಗಳಲ್ಲೂ ನೋಡಬಹುದು. ಮನೆಯಲ್ಲಿ ಮಗು ಹುಟ್ಟಿದಾಗ ಸೂತಕ (ಪುರುಡು), ಯಾರಾದರೂ ಸತ್ತಾಗ ಸೂತಕ (ಅಂಟು) ಆಂಧ್ರದಲ್ಲಿ ಆಚರಣೆಯಲ್ಲಿವೆ. ಇವನ್ನು ಉಲ್ಲೇಖಿಸುವಾಗ ಅನ್ನಮಾಚಾರ್ಯರು ಕೆಲವು ಸಂದರ್ಭಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಬಳಸಿಕೊಂಡಿದ್ದಾರೆ. ಸೂತಕ ಹತ್ತಿರದ ನೆಂಟರು ಆಚರಿಸುವಂಥದು. "ಕರ್ಮದೇಹಿಗಳಾದ ಇವರೊಂದಿಗೆ ಪುರುಡು ಆಚರಿಸಿದ ಮಾತ್ರಕ್ಕೆ ಹೋಲಿಕೆಗಳು ಬರುವುದಿಲ್ಲ"[1] ಎಂದು ವೈರಾಗ್ಯದಿಂದ ಹೇಳಿದ್ದಾರೆ. ಅನೇಕ ಸಂದರ್ಭಗಳಲ್ಲಿ ಮೈಲಿಗೆಯೆಂದು ಬೇರೆಯವರನ್ನು ಮುಟ್ಟಬಾರದೆಂದು ನಿಷೇಧಿಸುವುದುಂಟು. ಮುಟ್ಟಾದ ಪ್ರೇಯಸಿಯನ್ನು ವೇಂಕಟೇಶ್ವರ ಮುಟ್ಟಿದ ಪ್ರಸಂಗವೊಂದನ್ನು ಅನ್ನಮಾಚಾರ್ಯರು ಚಿತ್ರಿಸಿದ್ದಾರೆ : "ಮುಟ್ಟಿದೆ ನೀನು, ಅಲ್ಲಿಗೆ ಬಿಡದೆ ಅಪ್ಪಿಕೊಂಡೆ. ಸೆರಗು ಮಾಸಿತೆಂದು ಗೆಳತಿಯೊಡನೆ ಸುದ್ದಿ ಕಳುಹಿದೆ, ಆದರೂ ಅದನ್ನೆಲ್ಲಿ ಅರ್ಥಮಾಡಿಕೊಳ್ಳುವೆ ನೀನು, ಕಿರುನಗೆ ಬೀರಿ ನಾಚಿಕೆಯಿಂದಿದ್ದರೆ ನಾನು, ಹತ್ತಿರಬಂದು ಕುಳಿತುಕೊಳ್ಳುತ್ತೀಯೆ ನೀನು, ನಾಲ್ಕು ದಿನ ಕೆಲಸಮಾಡಲು ಗೆಳತಿಯರನ್ನು ಕರೆದರೆ ಅದೇಕೆ ಎನ್ನುವೆ ನೀನು, ಅದೆಲ್ಲ ನಿನಗೇಕೆ ?"[2]

ಶುಚಿಯ ದೃಷ್ಟಿಯಿಂದ ಏರ್ಪಟ್ಟ ಮಡಿ, ಮೈಲಿಗೆ ಮುಂತಾದವು ಕೊನೆಗೆ ಕೇವಲ ಸಂಪ್ರದಾಯಗಳಾಗಿ ಆಚರಿಸಲ್ಪಡುತ್ತಿವೆ. ಇಂಥವನ್ನು ಕೆಲವು ಸಂದರ್ಭಗಳಲ್ಲಿ ಮೀರಿಯುವ ಪ್ರಯತ್ನಗಳನ್ನೂ ಮಾಡುತ್ತಿದ್ದರೆಂದು ಮೇಲಿನ ಉಲ್ಲೇಖ ಸೂಚಿಸುತ್ತದೆ.

ಪುರಂದರದಾಸರು ಉಲ್ಲೇಖಿಸಿರುವ ಅನೇಕ ಪೂಜಾವಿಧಾನಗಳು ಅನ್ನಮಾಚಾರ್ಯರ ಕೀರ್ತನೆಗಳಲ್ಲೂ ಉಲ್ಲೇಖಗೊಂಡಿವೆ. ಸಾಮಾನ್ಯ ಪೂಜಾವಿಧಾನಗಳಲ್ಲಿ

---

[1] ಕರ್ಮದೇಹುಲೆಲ್ಲ ವೀರಿ ತೋಡ
ಪುರುಡ ವೆಟ್ಟುಕೋಬೋತೆ ಪೋಲಿಕಲು ರಾವು (8-119).

[2] ಅಂಟುಕೊಂಟಿ ವಿಕನೋ ಆಯುಗಾರಟ್ಟಾ
ಕಂಟಗಿಂಚಕಂತಲೋನೆ ಕಾಗಿಲಿಂಚು ಕೊಂಟಿವಿ
ಚೆಱಗು ಮಾಸಿನ ಸುದ್ದಿ ಚೆಲಿತೋ ನೇ ಜೆಪ್ಪಗಾನು
ಯೆಱುಕಲು ಸೇಸುಕೊನೇ ವೇಟಿಕಿ ನೀಕು
ಚಿಱುತ ನವ್ವುಲು ನವ್ವಿ ಸಿಗ್ಗುಪಡಿನೇನುಂಡಿತೇ
ವೊಱಪು ತೋಡನು ವಚ್ಚಿ ವೊದ್ದಗೂಚುಂಡಿತಿವಿ
ಸಾಲುನಾಳ್ಲು ಸೇಸೇನನಿ ನಾತುಲು ಬಿಲಿಚಿತೇನು
ಯಾಲೀಲ ನದೇಮನೇವು ಯೇಟಿಕಿನೀಕು (ಶೃ. ಸಂ., 29, ಪು. 91).

ಕನ್ನಡಿಗರಿಗೂ ತೆಲುಗರಿಗೂ ಏನೂ ವ್ಯತ್ಯಾಸವಿಲ್ಲ. ಅರ್ಘ್ಯ, ಪಾದ್ಯ, ಆಚಮನೀಯಂ, ದೀಪ, ಧೂಪ, ನೈವೇದ್ಯ, ತಾಂಬೂಲ, ಆಸನ, ಗಂಧ, ಮಾಲ್ಯ, ವಸ್ತ್ರಾಭರಣ (7-38) ಮುಂತಾದ ಪೂಜಾದ್ರವ್ಯಗಳನ್ನು ಅನ್ನಮಾಚಾರ್ಯರ ಕೆಲವು ಕೀರ್ತನೆಗಳಲ್ಲಿ ಉಲ್ಲೇಖಿಸಲಾಗಿದೆ.

ಬೇರೆಬೇರೆ ಧರ್ಮಗಳಿಗೆ ಸೇರಿದಂತೆ ಆಚಾರಗಳು ಭಿನ್ನವಾಗುತ್ತವೆ ಎಂಬುದನ್ನು ಗಮನಿಸಿ ಅಂಥ ಕೆಲವು ವ್ಯತ್ಯಾಸಗಳನ್ನು ಅನ್ನಮಯ್ಯ ಸೂಚಿಸಿದ್ದಾರೆ. "ಮೈಯೆಲ್ಲ ಭಸ್ಮವನ್ನು ಲೇಪಿಸಿಕೊಂಡು ತೋರಿಸಿದರು ಕೆಲವರು, ಲಕ್ಷ್ಮೀಕಾಂತ ಅಂತರಾತ್ಮನೆಂದು ನಾಮವನ್ನೂ ಶ್ರೀಚೂರ್ಣವನ್ನೂ ಇಟ್ಟು ತೋರಿಸಿದರು ಕೆಲವರು"[1] ಎಂದಿದ್ದಾರೆ. ಅವರ ಅಭಿಪ್ರಾಯದಲ್ಲಿ ಹರಿಭಕ್ತಿ ಮುಖ್ಯವೇ ಹೊರತು ಆಚಾರಗಳಲ್ಲ.

ಹುಲಿಗಳು ಗುಹೆಗಳಲ್ಲಿದ್ದ ಮಾತ್ರಕ್ಕೆ ಋಷಿಗಳೇ ?
ಕರಡಿ ಗಡ್ಡ ಬೆಳೆಸಿದರೆ ಯೋಗ್ಯ ಎನಿಸಿಕೊಳ್ಳುವುದೇ
ಹಕ್ಕಿಗಳು ಆಕಾಶದಲ್ಲಿ ಹಾರಿದರೆ ದೇವತೆಗಳೇ
ಕೋತಿ ಅಡವಿಯಲ್ಲಿದ್ದರೆ ವನವಾಸಿಯೇ
ಮರಗಳು ಮಾತನಾಡದಿದ್ದರೆ ಅದು ಮೌನವ್ರತವೇ
ಬಟ್ಟೆ ಉಡದ ಬಾಲಕರು ದಿಗಂಬರರೇ[2]

ಪುರಂದರದಾಸರದೂ ಇದೇ ಅಭಿಪ್ರಾಯ.[3]

---

[1] ಪುಟ್ಟುಗೆಲ್ಲಾ ಭಸ್ಮಮನಿ ಪೂಸುಕ ಚೂಪಿರಿ....
ಕೊಂದರು ಲಕ್ಷ್ಮೀಕಾಂತುಡಂತರಾತ್ಮಯನಿ
ಮುಂದೇ ನಾಮಮು ಶ್ರೀಚೂರ್ಣಮುನು ಬೆಟ್ಟಿ ಚೂಪಿರಿ (7-36).

[2] ಪುಲುಲು ಗುಹಲನುಂಟೆ ಪೋಲಿಂಪು ಋಷುಲಾ
ಯೆಲುಗು ಗಡ್ಡಮುಪೆಂಚು ನಿಂತಲೋನೇ ಯೋಗ್ಯುಡಾ
ಯಿಲಂ ಭಕ್ಷು ಲಾಕಾಶಾನ ಕೇಗಿತೇ ದೇವತಲಾ
ವೊಲಸಿ ಕೋತಿ ಯಡವಿನುಂಟೇ ವನವಾಸಮಾ
ಮಾಕುಲು ಮಾಟಲಾಡವು ಮೌನವ್ರತಮುಲಾ
ಕೋಕಗಟ್ಟರು ಬಾಲುಲು ಕೋರಿ ದಿಗಂಬರುಲಾ (2-62).

[3] ಶ್ವಾನ ಬೂದಿಯಲಿರಲು ಶಿವಭಕ್ತನೆನಬಹುದೆ
ಕಾನನದೊಳಿಹ ಕಾಗೆ ವನವಾಸಿಯೆ
ಗಾಣ ತಿರುಗುವ ಎತ್ತಿಗದು ಪ್ರದಕ್ಷಿಣೆಯೆ....
ತೋಳ ಅಡವಿಯಲಿರಲು ಅದು ದಿಗಂಬರನಹುದೆ
ಗಾಳಿಯುಂಬುವ ಉರಗ ಉಪವಾಸಿಯೆ
ಆಲವದು ಜಡೆಬಿಡಲು ಪರಮಋಷಿಯಹುದೆ....
ಮಂಡೂಕ ಗಂಟಲನು ಮೀಟಲದು ಮಂತ್ರವೆ
ಗುಂಡು ನೀರಲಿ ಮುಳುಗಲದು ಸ್ನಾನವೆ ... (5-155).

ಜ್ಞಾನಿಗಳು ಬರಿ ಆಚಾರಕ್ಕಿಂತ ಜ್ಞಾನ ಮಿಗಿಲಾದುದೆಂದು ಹೇಳಬಹುದು. ಆದರೆ ಸಾಮಾನ್ಯರು ಜೀವನದಲ್ಲಿ ಆಚಾರಗಳನ್ನು ಬಿಟ್ಟು ಬಾಳುವುದು ಸಾಧ್ಯವಿಲ್ಲ. ಯಾರನ್ನಾದರೂ ನೋಡಲು ಹೋದಾಗ ನಿಂಬೆಹಣ್ಣನ್ನು ಕೈಗೆ ಕೊಡುವ ಆಚಾರವನ್ನು ಅನ್ನಮಾಚಾರ್ಯರು ಹಲವೆಡೆ ಉಲ್ಲೇಖಿಸಿದ್ದಾರೆ (ಶೃ. ಸಂ., 24, ಪು. 7). ನಿಂಬೆಹಣ್ಣನ್ನು ತೆಗೆದುಕೊಳ್ಳುವುದು ಸ್ನೇಹದ ಅಂಗೀಕಾರಕ್ಕೆ ಸಂಕೇತವೆಂದು ಹೇಳಲಾಗಿದೆ : "ಅಂಗೀಕರಿಸದಿದ್ದಲ್ಲಿ ಮಾತಾಡಬಾರದು, ನಿಂಬೆಹಣ್ಣು ತೆಗೆದುಕೊಂಡರೆ ನೀನೇ ನಾನು."[1] ದುರಾಚಾರಗಳಲ್ಲಿ ಭ್ರಷ್ಟಾಚಾರವೂ ಒಂದು. ಲಂಚದ ಪ್ರಸಕ್ತಿ ಆಚಾರ್ಯರ ಕೀರ್ತನೆಗಳಲ್ಲಿ ಅನೇಕ ಕಡೆ ಬರುತ್ತದೆ. (ಉದಾ: ಶೃ. ಸಂ., 24, ಪು. 15). ಇದು ಅಧಿಕಾರಿಗಳಿಗೆ ಲಂಚಕೊಡುವ ನೇರವಾದ ಉಲ್ಲೇಖ ಅಲ್ಲ. ಆದರೆ ಅಂದೂ ಲಂಚಕೊಡುವ ಪದ್ಧತಿ ಇತ್ತೆಂಬುದರ ಸೂಚಕ ಎನ್ನಬಹುದು.

ಅನ್ನಮಾಚಾರ್ಯರು ಉಲ್ಲೇಖಿಸಿದ ಅನೇಕ ಆಚಾರಗಳಲ್ಲಿ ಗೋವಧೆಯ ಬಗೆಗಿನ ಕಳಕಳಿ ಗಮನಾರ್ಹವಾದುದು. ಹಿಂದೂಗಳಿಗೆ ಅತ್ಯಂತ ಪ್ರೀತಿಪಾತ್ರವೂ ಪವಿತ್ರವೂ ಆದ ಗೋವನ್ನು ಕೊಲ್ಲುವ ಪದ್ಧತಿ ಹಿಂದೂಗಳಿಗೆ ತುಂಬ ನೋವನ್ನುಂಟು ಮಾಡುವಂಥದು. "ಗೋಹತ್ಯೆಗಳನ್ನು ಮಾಡುತ್ತಿರಲು, ಕರುಗಳು ಅಂಗಲಾಚುತ್ತಿರಲು ಧರ್ಮದೇವತೆ ಹೇಗೆ ಅಂಗೀಕರಿಸಿತೊ"[2] ಎಂದು ಅನ್ನಮಾಚಾರ್ಯರು ಖೇದಪಟ್ಟರು. ಆಕಳನ್ನು ಕೊಳ್ಳುವವರಿಗೆ ಕರು ಕೂಡ ಸೇರಬೇಕೆಂಬುದು ನಮ್ಮ ಆಚಾರ. "ಅಲ್ಲಿ ಆಕಳನ್ನುಕೊಂಡರೆ ಆಕಳ ಜೊತೆ ಕರುವೂ ಕೊಂಡವರ ಸ್ವತ್ತಲ್ಲವೇ"[3] ಎನ್ನುವುದು ನಮ್ಮ ಅಭಿಪ್ರಾಯ.

ಉತ್ಸವ ಮುಂತಾದ ಸಂದರ್ಭಗಳಲ್ಲಿ ಮಾತ್ರವಲ್ಲದೆ ಸಾಮಾನ್ಯವಾಗಿ ಮನೆಯನ್ನು ಶುಭ್ರವಾಗಿ, ಅಂದವಾಗಿ ಇಟ್ಟುಕೊಳ್ಳಲು ಮೂಡಿಬಂದ ಕೆಲವು ಆಚಾರಗಳನ್ನು ಕೀರ್ತನೆಗಳಲ್ಲಿ ಉಲ್ಲೇಖಿಸಲಾಗಿದೆ. ಮನೆಯನ್ನು ಗುಡಿಸಿ, ತೊಳೆದು ಶುಚಿಯಾಗಿಟ್ಟುಕೊಳ್ಳುವುದು ಇದ್ದೇ ಇದೆ. ಆದರೆ ಗೋಡೆಗಳನ್ನು ತೊಳೆಯಲು ಹೋದರೆ ಮನೆಯೆಲ್ಲಾ ಕೆಸರು. "ಗೋಡೆ ತೊಳೆಯಲು ಹೋದರೆ ಕೊನೆಯವರೆಗೂ ರೊಚ್ಚು. ಸುಮ್ಮನೆ ಮಾಡುವ ತರ್ಕವಾದಗಳಂತಹವೇ."[4] ಆದರೆ ಮನೆಯನ್ನು ರಂಗವಲ್ಲಿಗಳಿಂದ ಅಂದವಾಗಿ

---

[1] ಸಮ್ಮತಿಂಚನನಗನು ಸಂದಡಿ ಮಾಟಾಡರಾದು
ನಿಮ್ಮಪಂಡಂದುಕೊಂಟೇ ನೀವೇ ನೇನಮ್ಮ (14-135).

[2] ಗೋಹತ್ಯಲು ಸೇಯಗದೂಡಲಂಗಲಾವ
ಸರಿಧರ್ಮದೇವತೆಟ್ಟು ಸಮ್ಮತಿಂಚೆನೋ (11-1-133).

[3] ಆಕಡ ಆವುಗೊಂಟೇ ನಾವು ವೆಂಟ ದೂಡಯುನು
ಜೋಕಲಗೊನ್ನಟ್ಟವಾರಿ ಸೊಮ್ಮೇಕಾದಾ (7-207).

[4] ಗೋಡ ಕಡುಗಗಬೋತೇ ಕೊನದಾಕಾರೊಂಪೇ
ಆಡುಕೋಲು ತರ್ಕವಾದಾಲಟು ವಂಟಿವೇ (9-279).

ಅಲಂಕರಿಸುವ ಆಚಾರವನ್ನು ಮಾತ್ರ ಬಿಡುವಂತಿಲ್ಲ. ಏನೂ ಇಲ್ಲದಿದ್ದರೆ ಸುಂದರವಾದ ನಗೆಯನ್ನೇ ರಂಗವಲ್ಲಿಯಂತಿಡುವ[1] ಜಾಣರು ಇರುತ್ತಾರೆ. ಈ ರೀತಿ ಅನೇಕ ಆಚಾರಗಳನ್ನು ಹೆಸರಿಸುವುದು ಮಾತ್ರವಲ್ಲದೆ ಅವನ್ನು ಕಾವ್ಯಮಯವಾಗಿ ಮಾಡಿರುವುದು ಒಂದು ವೈಶಿಷ್ಟ್ಯ. ಆಚಾರ್ಯರ ಕಾಲದಲ್ಲಿ ಯಜ್ಞಯಾಗಾದಿಗಳಿದ್ದರೂ ಅವುಗಳ ಪ್ರಾಧಾನ್ಯ ಕಡಿಮೆಯಾಗಿರಬೇಕು. ಆಚಾರಗಳಿಗಿಂತ ಭಕ್ತಿಗೆ ಹೆಚ್ಚಿನ ಪ್ರಾಮುಖ್ಯ ಕೊಡುವ ಇವರ ಯಜ್ಞಯಾಗವನ್ನು ಕಾಮಯಾಗವಾಗಿ ಮಾರ್ಪಡಿಸಿ ವೇಂಕಟೇಶ್ವರನ ಲೀಲಾವರ್ಣನೆಗೆ ಬಳಸಿಕೊಂಡಿದ್ದಾರೆ. ಅವರ ವರ್ಣನೆಯಂತೆ ತಾಂಬೂಲ ರಸಪಾನವೇ ಸೋಮಪಾನ, ಕಲಕಲದ ಕಲರವಗಳೇ ವೇದಮಂತ್ರ, ವಿರಹಾಗ್ನಿಯೇ ಹೋಮಾಗ್ನಿ (ಅನ್ನ. ಸಂ., 2, ಪು. 42).

ಯಜ್ಞಯಾಗಾದಿ ಧಾರ್ಮಿಕ ಕರ್ಮಕಾಂಡಗಳು ಲೌಕಿಕವಾಗತೊಡಗಿದಾಗ ಕೆಲವು ಧಾರ್ಮಿಕ ಪ್ರತಿಮೆಗಳನ್ನು ಮಾತ್ರ ಉಳಿಸಿಕೊಂಡು ಹಬ್ಬ, ವ್ರತ, ನೋಂಪಿ, ಉತ್ಸವ, ಜಾತ್ರೆ ಮುಂತಾದವು ರೂಪಗೊಂಡವು. ಇವು ಸಮಾಜದ ವಿವಿಧವರ್ಗದ ಜನರನ್ನು ಒಟ್ಟುಗೂಡಿಸುತ್ತವೆ. ಅನೇಕ ತಲೆಮಾರುಗಳಿಂದ ಜನರಲ್ಲಿ ಬೇರೂರಿರುವ ನಂಬಿಕೆ, ಸಂಪ್ರದಾಯ, ಆಚಾರಗಳು ಕ್ರಿಯಾರೂಪ ತಾಳಿ ಹಬ್ಬ, ವ್ರತ ಮುಂತಾದವೇರ್ಪಡುತ್ತವೆ. ಹಬ್ಬ, ವ್ರತ, ನೋಂಪಿ, ಜಾತ್ರೆ ಎಂಬ ಹೆಸರುಗಳು ಬೇರೆ ಬೇರೆಯಾಗಿದ್ದರೂ ಒಂದು ವಿಧದಲ್ಲಿ ಅವೆಲ್ಲ ಒಂದೇ ಎಂದು ಹೇಳಬೇಕಾಗುತ್ತದೆ. ಧಾರ್ಮಿಕ ಶ್ರದ್ಧೆಯು ಹಿನ್ನೆಲೆ ಸ್ವಲ್ಪಮಟ್ಟಿಗೆ ಕಡಿಮೆಯಾಗಿ ಸಂತೋಷದ ವಾತಾವರಣ ಹೆಚ್ಚಾಗಿರುವ ಈ ಆಚಾರಗಳು ಸಂಸ್ಕೃತಿಯ ನಾನಾ ಮುಖಗಳನ್ನು ಪ್ರದರ್ಶಿಸುವಂಥವಾಗಿರುತ್ತವೆ.

ಪುರಂದರದಾಸರಿಗಿಂತ ಹಿಂದಿನ ಮತ್ತು ಅನಂತರದ ಕವಿಗಳು ಕನ್ನಡನಾಡಿನ ಹಬ್ಬ ಉತ್ಸವ ಮುಂತಾದವನ್ನು ತಮ್ಮ ಕಾವ್ಯಗಳಲ್ಲಿ ಹೆಸರಿಸಿದ್ದಾರೆ. ಹಿಂದೂಗಳಿಗೆ ಆರು ಋತುಗಳಲ್ಲೂ ಯಾವುದಾದರೊಂದು ಹಬ್ಬ ಇದ್ದೇ ಇರುತ್ತದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಚಾಂದ್ರಮಾನದ ಪ್ರಕಾರ ಹಬ್ಬಗಳನ್ನು ಆಚರಿಸುತ್ತಾರೆ. ಪುರಂದರದಾಸರೂ ಕೆಲವನ್ನು ತಮ್ಮ ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. 'ಬನದ ಹುಣ್ಣಿಮೆ', 'ಭಾರತ ಹುಣ್ಣಿಮೆ' (5-127), 'ಮಹಾಲಯ ಪುಣ್ಯದಿವಸ' (5-40) ಮುಂತಾದ ಪರ್ವಗಳು ಪೌರಾಣಿಕ ವ್ಯಕ್ತಿಗಳ ಹೆಸರಿನಲ್ಲಿ ಹಾಗೂ ಬೇರೆ ಬೇರೆ ಸಂದರ್ಭಗಳ ನೆನಪಿನಲ್ಲಿ ದ್ವಾದಶಿಯಂಥ ಪುಣ್ಯತಿಥಿಗಳಲ್ಲಿ ಬರುತ್ತವೆ. 'ಉತ್ಥಾನ ದ್ವಾದಶಿ' (3-46), 'ಚಾಂದ್ರಾಯಣ' (3-6), 'ಭೀಷ್ಮ ಪಂಚಕ' (3-6), 'ವಿಷ್ಣು ಪಂಚಕ' (3-6) ಮುಂತಾದವನ್ನು ವೈಭವದಿಂದ ಆಚರಿಸುತ್ತಿದ್ದರು. ಆದರೆ ಈ ವ್ರತ, ಪಾರಣೆ, ಕಠಿಣ ಆಚಾರಗಳು ದೇವರ ನಾಮಸ್ಮರಣೆಗೆ ಸಾಟಿಯಾದುವಲ್ಲ ಎಂಬುದು ಭಕ್ತಿಯೋಗ ಸಾಧಿಸಿದಂಥ ಪುರಂದರದಾಸರು ಹೇಳುವ ಸಹಜವಾದ ಮಾತು : "ಧಾರಿಣಿ ಪಾರಣೆ

---

[1] ಚಿಕ್ಕಟಿಲ್ಲು ನವ್ವುಲನೇ ಪೆಟ್ಟೆ ಮುಗ್ಗುಲು (18-484).

ಭೀಷ್ಮಪಂಚಕಮಾಡಿ ಹರುಷದಿ ವಿಷ್ಣುಪಂಚಕಮಾಡು ಪರಮ ಕಠಿಣ ಚಾಂದ್ರಾಯಣ ಮಾಡಲು ಪುರಂದರವಿಠಲನ ಧ್ಯಾನಕೆ ಸಮವುಂಟೆ'' (3-6).

ದೇವರಿಗೆಮಾಡುವ ಅನೇಕ ರೀತಿಯ ಸೇವೆಗಳು ದಾಸರ ಕೀರ್ತನೆಗಳಲ್ಲಿ ಉಲ್ಲೇಖ ಗೊಂಡಿವೆ. 'ಜೋಡುದೀವಟಿಗೆ ಸೇವೆ', 'ರಜತದ ಪಂಜುಸೇವೆ'ಗಳು (3-88) ಇಂದಿಗೂ ಉತ್ಸವ ಸಂದರ್ಭಗಳಲ್ಲಿ ನಡೆಯುತ್ತಿರುತ್ತವೆ. ಶಯನೋತ್ಸವವನ್ನು ಕುರಿತು ''ಮಲಗಯ್ಯ ಜಲಜನಾಭ ಮಾಣಿಕ್ಯ ಮಂಟಪದಿ, ಆದಿಶೇಷನು ಬಂದು ಹಾಸಿಗೆಯಾಗಿಹ ವೇದವಿನಂತ ಜಗದಾದಿ ಪುರುಷ ಕೇಳೊ, ಸಿರಿಭೂದುರ್ಗೆಯರು ತರುಣಿಯರು ಮೂವರು ಚರಣವೊತ್ತಲಿಕೆ ಕೈಕಟ್ಟಿ ನಿಂತಿಹರು, ಸರುವಜ್ಞ ಮುನಿವಂದ್ಯ ಸರುವ ಸ್ವಂತತ್ರನೆ, ಪರಮಸುಂದರ ಪುರಂದರವಿಠಲರಾಯಾ'' ಎಂದಿದ್ದಾರೆ (1-161). ಈ ಸೇವೆಗಳ ಸಂದರ್ಭದಲ್ಲಿ ''ಪಂಚಮುಖದ ಜ್ಯೋತಿ ಬೆಳಗಲು ಎಡಬಲ ಸಂಚರಿಸುವ ಪೊಮ್ಮರಿಮೃಗ ಚೌರಿಯು, ಕಾಂಚನಮಯದ ಕಟ್ಟಿಗೆ ಕೋಲು ಹಸುರಿನ ಲಾಂಛನ ವಾದಗೆ ಹಾಕುವ ಪರಿ''ಯನ್ನು (3-88) ವರ್ಣಿಸಿದ್ದಾರೆ. ಇಂಥವನ್ನು ಆಚರಿಸುವುದ ರಿಂದ ಪ್ರಯೋಜನವಾದರೇನಿದೆ ? ಶುಕ್ರವಾರದ ಪುಲಕು ಪೂಜೆಗಳಂಥವನ್ನು ಮಾಡಿ ''ಪಾಪವಿನಾಶದಿ ಸ್ನಾನವಮಾಡಿ, ಪಾಪಗಳೆಲ್ಲ ಬೇಗನೆಬಿಟ್ಟು'' (3-80) ಹೋಗಲು ಇದೊಂದು ಮಾರ್ಗ. ಇವಲ್ಲದೆ ಕೆಲವು ಲೌಕಿಕ ಹಬ್ಬಗಳಾದ ''ಬಿಲ್ಲುಹಬ್ಬಗಳಂತೆ ಅಲ್ಲಿ ಬೀದಿ ಶೃಂಗರವಂತೆ, ಮಲ್ಲಕಾಳೆಗ ಮದ್ದಾನೆಗಳಂತೆ....'' (4-15) ಮುಂತಾದವುಗಳ ಪ್ರಸಕ್ತಿಯೂ ಪುರಂದರದಾಸರಲ್ಲಿ ಕಂಡುಬರುತ್ತವೆ. ಸಾಮಾನ್ಯವಾಗಿ ಆಚರಿಸುವ ಹಬ್ಬ ಉತ್ಸವಗಳಿಗಿಂತ ದೇವರನ್ನು ಸ್ತುತಿಸುವುದೇ ನಿಜವಾದ ಹಬ್ಬವೆಂದು ಹೇಳಿದ್ದಾರೆ :

ಸಾಧು ಸಜ್ಜನರೊಳಗಿರುವೋದೆ ಹಬ್ಬ
ವೇದಾಂತದರ್ಥವ ತಿಳಿವೋದೆ ಹಬ್ಬ
ಭೇದಬುದ್ಧಿಗಳೆಲ್ಲ ಬಿಡುವೋದೆ ಹಬ್ಬ
ಭಾಗೀರಥೀಲಿ ಲೋಲಾಡುವುದೆ ಹಬ್ಬ
ಸಾಲವಿಲ್ಲದವನ ಸಂಸಾರದಿ ಹಬ್ಬ
ಶರೀರಕ್ಕೆ ವ್ಯಾಧಿ ಬಾರದೊಂದೆ ಹಬ್ಬ
ಸಂಚಿತ ಕರ್ಮವು ಕಳೆಯೋದೆ ಹಬ್ಬ
ಪಂಚಮುಖಿನಾಥನ ಭಜಿಸುವುದೆ ಹಬ್ಬ
ಕಂಗಳು ಕಾಶಿಯ ಕಾಂಬೋದೆ ಹಬ್ಬ
ಶ್ರೀವಿಶ್ವಪತಿಯ ಭಜಿಸುವುದೆ ಹಬ್ಬ....
ಪುರಂದರವಿಠಲನ್ನ ಭಜಿಸುವುದೆ ಹಬ್ಬ (ಉ. ಪ್ರ., ಭಾಗ 5, ಪು. 36).

ಅನ್ನಮಯ್ಯ ಆಂಧ್ರದ ಹಲವು ಹಬ್ಬಗಳನ್ನು ಉಲ್ಲೇಖಿಸಿದ್ದಾರೆ. ಯುಗಾದಿ (17-184), ಗೌರಿನೋಂಪಿ (12-127), ದಿವ್ವೆಲ ಪಂಡುಗಲು (ದೀಪದ ಹಬ್ಬಗಳು, 15-88), ಲಕ್ಷ್ಮೀದೇವಿಹಬ್ಬ(17-184)ಮುಂತಾದುವನ್ನು ಹೆಸರಿಸಿದ್ದು ಮಾತ್ರವಲ್ಲದೆ

ವ್ರತಾದಿಗಳ ಬಗೆಗೆ ಜನರಲ್ಲಿ ಬಳಕೆಯಲ್ಲಿರುವ ಗಾದೆ, ನುಡಿಗಟ್ಟು, ನಂಬಿಕೆಗಳನ್ನೂ ಕೀರ್ತನೆಗಳಲ್ಲಿ ಹೇಳಿದ್ದಾರೆ. ವ್ರತ, ನೋಂಪಿ ಮಾಡುವಾಗ ಹೇಳುವ ನುಡಿಗಳಿಗಿಂತ ಮಾಡುವವಿಧಾನ, ಭಕ್ತಿ ಶ್ರದ್ಧೆಗಳು ಮುಖ್ಯವಾಗುತ್ತವೆ. ಈ ಅಭಿಪ್ರಾಯವನ್ನು ಬೇರೆ ಸಂದರ್ಭದಲ್ಲಿ ಬಳಸಿಕೊಂಡು ಅನ್ನಮಯ್ಯ ಹೀಗೆ ಬರೆದಿದ್ದಾರೆ: "ಕೇಳಿ ಬಾರೆ ಪತಿ ಆದಕ್ಕೆ ಏನನ್ನುವನೋ, ಬಿಡೆನೆಂಬ ಮಾತುಕೊಟ್ಟಿರುವನು, ನುಡಿಗಳು ತಪ್ಪಿದರೂ ನೋಂಪಿಯ ಫಲತಪ್ಪದು, ಈಗಾದರೂ ಬಳಿಗೆ ಬಾ‍್ಲವೆಂದು ಬರಹೇಳಿ."[1]

ಅಂದೂ ಇಂದೂ ಆಚರಣೆಯಲ್ಲಿರುವ ಕೃಷ್ಣಜನ್ಮಾಷ್ಟಮಿಯನ್ನು ಒಂದು ಕೀರ್ತನೆಯಲ್ಲಿ ಅನ್ನಮಯ್ಯ ಹೇಳಿದ್ದಾರೆ. "ಗೋವಿಂದ ಜನಿಸಿದ ಗೋಕುಲಾಷ್ಟಮಿ ಇಂದು"[2] ಎಂದಿದ್ದಾರೆ. ಜನ್ಮಾಷ್ಟಮಿಯ ಸಂದರ್ಭದಲ್ಲಿ "ನಲುವು ಹಬ್ಬ" ಎಂಬುದನ್ನು ಆಂಧ್ರದಲ್ಲಿ ಆಚರಿಸುತ್ತಾರೆ. ನೆಲುವಿನಲ್ಲಿಟ್ಟ ಹಾಲು ಮೊಸರನ್ನು ಕದ್ದ ಬಾಲಕೃಷ್ಣನ ಚೇಷ್ಟೆಗಳ ನೆನಪಿಗಾಗಿ ಬೀದಿಯಲ್ಲಿ ನೆಲುವು ನೇತುಹಾಕಿ ಕೋಲಿನಿಂದ ಹೊಡೆಯುವ ವಿನೋದ ಇದು. ದೇವಾಲಯೋತ್ಸವಗಳಿಗೆ ಅನುಬಂಧವಾಗಿ ಈ ನೆಲುವಿನ ಹಬ್ಬವನ್ನು ಪ್ರಾರಂಭಿಸಿದವರು ತಾಳ್ಳಪಾಕ ಅನ್ನಮಾಚಾರ್ಯರು. ಇದು ಅನಂತರ ಆಂಧ್ರದ ಇತರೆಡೆಗಳಿಗೂ ಹರಡಿತು. ಈ ಹಬ್ಬದ ಪ್ರಸ್ತಾಪ ತಿರುಪತಿಯ ಅನೇಕ ಶಾಸನಗಳಲ್ಲಿದೆ. ಆಚಾರ್ಯರೂ ಕೆಲವು ಕೀರ್ತನೆಗಳಲ್ಲಿ ನೆಲುವಿನ ಹಬ್ಬ (ಉಟ್ಲಪಂಡುಗ) ವೈಭವದಿಂದ ನಡೆಯುತ್ತಿತ್ತೆಂಬುದನ್ನು ಸೂಚಿಸಿದ್ದಾರೆ.

"ನೋಡಿ ಇಂದು ನೆಲುವಿನ ಹಬ್ಬ, ಅಲ್ಲಿ ಗೊಲ್ಲತಿಯರಿಗೆ ಆನಂದ ಇಂದು, ಆದಿ ಕಾಲದಲ್ಲಿ ಕೃಷ್ಣನು ಅವತರಿಸಿದ ಶ್ರಾವಣ ಬಹುಳಾಷ್ಟಮಿ, ರೋಹಿಣಿ ನಕ್ಷತ್ರಕೂಡಿದ ರಾತ್ರಿ ಲೋಕಕ್ಕೆಲ್ಲ ಜಯಂತಿ" (8-161) ಎಂದಿದ್ದಾರೆ. ವೈಷ್ಣವರಿಗೆ ಮುಖ್ಯವಾದ ನಾರಸಿಂಹ ಜಯಂತಿಯನ್ನೂ ಆಚಾರ್ಯರು ವರ್ಣಿಸಿದ್ದಾರೆ (11-14). ವಿಜಯನಗರ ಕಾಲದಲ್ಲಿ ವಿಜಯದಶಮಿ ನಾಡಹಬ್ಬವಾಗಿ ಅತ್ಯಂತ ವೈಭವದಿಂದ ಆಚರಿಸಲ್ಪಡುತ್ತಿತ್ತು. ಕಾಳಿಕಾಪುರಾಣದಲ್ಲಿ ವಿಜಯದಶಮಿಯನ್ನು ರಾಮಾಯಣದೊಂದಿಗೆ ಸಂಬಂಧ ಕಲ್ಪಿಸಿ ಹೇಳಲಾಗಿದೆ. ಮಹಾನವಮಿಯಂದು ರಾವಣ ನಿಧನನಾದನೆಂದೂ ದೇವತೆಗಳು ರಾಮನಿಗೆ ಕೃತಜ್ಞತೆ ತೋರಿಸಲು ವಿಶೇಷ ಪೂಜೆಮಾಡಿದರೆಂದೂ ಹೇಳಲಾಗಿದೆ. ಅನ್ನಮಾಚಾರ್ಯರು ಕಾಳಿಕಾಪುರಾಣದ ಕಥೆಯನ್ನು ಅನುಸರಿಸಿದ್ದಾರೆ (9-183).

---

[1] ಅಡಿಗಿರಾವೆ ವಿಭುಡುಮುಕೇಮನೀನೊ
ಯೆಡಯನಿ ಬಾಸ ನೀಕಿಚ್ಚಿನಾಡು
ನಡುಗುಲು ದಪ್ಪಿನಾನು ನೋಮುಫಲಮುದಪ್ಪದು
ತಡವಿಯಿಂಟತಟನ್ನೈನ ದಗ್ಗರಿ ರಮ್ಮನವೇ (15-22).

[2] ಗೋವಿಂದುಡು ಜನಿಂಚೆ ಗೋಕುಲಾಷ್ಟಮಿದೇ ನೇಡು (10-20).

ಅನ್ನಮಾಚಾರ್ಯರು ವೇಂಕಟೇಶ್ವರನ ಭಕ್ತರಾದುದರಿಂದ ತಿರುಪತಿಯಲ್ಲಿ ನಡೆಯುತ್ತಿದ್ದ ಹಲವು ಉತ್ಸವಗಳನ್ನು ವರ್ಣಿಸಿದ್ದಾರೆ. ಒಂಬತ್ತನೆಯ ಶತಮಾನ ದಿಂದಲೇ ಉತ್ಸವಗಳು ನಡೆಯುತ್ತಿದ್ದುವೆಂದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ. ಶ. 830ರ ಪಲ್ಲವ ದಂತಿವರ್ಮ ತಿರುಮಲೆಯ ವೇಂಕಟೇಶ್ವರನ ಮೂಲಮೂರ್ತಿಗೆ ಒಂದು ಉತ್ಸವಮೂರ್ತಿ ಮಾಡಿಸಿಕೊಟ್ಟ. ಅಂದಿನಿಂದ ಶ್ರೀನಿವಾಸನಿಗೆ ಹಲವಾರು ಉತ್ಸವಗಳು ನಡೆಯುತ್ತಿವೆ. ಇವುಗಳಿಗೆ ಮಕುಟಪ್ರಾಯವಾಗಿ ಬ್ರಹ್ಮೋತ್ಸವ ಜರುಗುತ್ತದೆ. ಇದನ್ನು ಅನ್ನಮಯ್ಯ ವರ್ಣಿಸಿದ್ದಾರೆ. "ನಾನಾ ದಿಕ್ಕುಗಳಿಂದ ನರರು ಮಳೆಗಾಲದಲ್ಲಿ ಹೊರಟು ಬರುವರು. ಸತಿಯರು, ಸುತರು, ಅಕ್ಕಪಕ್ಕದವರು, ನೆಂಟರು ಇಷ್ಟರು ಎಲ್ಲರೂ ಶತ ಸಹಸ್ರಯೋಜನಗಳಿಂದಲೂ ವಿವಿಧ ವ್ರತಗಳೊಡನೆ ಹೊರಟುಬರುವರು." [1]

ವೇಂಕಟೇಶ್ವರ ಬೀದಿಯಲ್ಲಿ ಮೆರವಣಿಗೆ ಬರುವಾಗ ಒಂದೊಂದುದಿನ ಒಂದೊಂದ ವಾಹನದ ಮೇಲೇರುವುದನ್ನು ಅನ್ನಮಾಚಾರ್ಯರು ವರ್ಣಿಸಿದ್ದಾರೆ. ಇದರಂತೆ ತಿರು ವೀಧಿಗಳಲ್ಲಿ ಶ್ರೀನಿವಾಸ ಮೊದಲನೆಯ ದಿನ ತಿರುದಂಡೆ (ಪಲ್ಲಕ್ಕಿ), ಎರಡನೆಯದಿನ ಶೇಷ, ಮೂರನೆಯ ದಿನ ಮುತ್ತಿನ ಚಪ್ಪರ, ನಾಲ್ಕನೆಯ ದಿನ ಹೂವಿನ ಕೋಗಿಲೆ, ಐದನೆಯ ದಿನ ಗರುಡ, ಆರನೆಯ ದಿನ ಆನೆ, ಏಳನೆಯ ದಿನ ಸೂರ್ಯಪ್ರಭೆ, ಎಂಟನೆಯ ದಿನ ರಥ ಕುದುರೆ, ಒಂಬತ್ತನೆಯ ದಿನ ಚಿನ್ನದ ಪಲ್ಲಕ್ಕಿ, ಹತ್ತನೆಯ ದಿನ ವಿವಾಹಪೀಠ ಏರುತ್ತಾನೆ(13-192). ಈ ಹಲವು ಉತ್ಸವಗಳಲ್ಲಿ ರಥೋತ್ಸವ ಮತ್ತು ಗರುಡೋತ್ಸವ ಭಕ್ತರನ್ನು ವಿಶೇಷವಾಗಿ ಆಕರ್ಷಿಸುವಂಥವು. ಇವೆರಡನ್ನು ವರ್ಣಿಸುವ ಅನ್ನಮಾಚಾರ್ಯರ ಕೀರ್ತನೆಗಳು ಲೆಕ್ಕವಿಲ್ಲದಷ್ಟಿವೆ. "ಇಲ್ಲಿ ಗರುಡನ ಮೇಲೆ ನೀನು ಹತ್ತಿದ ಕ್ಷಣ ಛಟಛಟ ಎಂದು ದಿಕ್ಕುಗಳು ಬಿರಿದವು"[2] ಎಂದಿದ್ದಾರೆ. ರಥೋತ್ಸವದ ವೈಭವವನ್ನು ವರ್ಣಿಸುವ ಕೀರ್ತನೆಗಳು ಹಲವು. "ದೇವದೇವನೇರಿದ ದಿವ್ಯರಥ ನಮ್ಮಂಥವರಿಗೆ ಮನೋರಥ"[3] ಎಂಬ ಕೀರ್ತನೆಯಲ್ಲಿ ವಿವಿಧ ಅವತಾರಗಳಲ್ಲಿ ವಿಷ್ಣು

---

[1] ನಾನಾ ದಿಕ್ಕುಲ ನರುಲೆಲ್ಲ
ವಾನಲಲೋನನೆ ವತ್ತುರುಗದಲಿ
ಸತುಲು ಸುತುಲು ಪರಿಸರುಲು ಬಂಧುವುಲು
ಹಿತುಲು ಗೊಲುವಗ ನಿಂದರುನು
ಶತಸಹಸ್ರ ಯೋಜನ ವಾಸುಲುನು
ವ್ರತಮುಲ ತೋಡನೆ ವತ್ತುರುಗದಲಿ (2-331),

[2] ಇಟು ಗರುಡನಿ ನೀ ವೆಕ್ಕಿನನು
ವಟ ವಟ ದಿಕ್ಕುಲು ಖಗ್ಗನ ಪಗಿಲೆ (2-92).

[3] ದೇವದೇವುಡೆಕ್ಕೆನದೆ ದಿವ್ಯರಥಮು
ಮಾವಂಟಿವಾರಿಕೆಲ್ಲ ಮನೋರಥಮು (5-225).

ಏರಿದ ರಥವನ್ನು ವರ್ಣಿಸಲಾಗಿದೆ. ರಾವಣನ ಮೇಲೆ ಕೋಪಗೊಂಡು ನಡೆಸಿದ ರಥ, ಪರರನ್ನು ಗೆದ್ದು ರುಕ್ಮಿಣಿಯು ಕರೆತಂದ ರಥ, ಶ್ರೀವೇಂಕಟಾದ್ರಿಯಲ್ಲಿ ಅಲಮೇಲು ಮಂಗೆಯು ಕೂಡಿ ಕಲಿಕಾಲದಲ್ಲಿ ಹೊರಟ ರಥವೆಂದು ಅದನ್ನು ವರ್ಣಿಸಿದ್ದಾರೆ.

ತಿರುಪತಿಯ ಬ್ರಹ್ಮೋತ್ಸವ ತುಂಬ ಪ್ರಸಿದ್ಧಿ ಪಡೆದಿದೆ. ಶ್ರೀನಿವಾಸ ಬ್ರಹ್ಮಪ್ರತಿಷ್ಠಿತನಾದನೆಂದು ಪ್ರಸಿದ್ಧಿ. ಆದುದರಿಂದ ಬ್ರಹ್ಮೋತ್ಸವ ವಿಜೃಂಭಣೆಯಿಂದ ನಡೆಯುತ್ತದೆ. ಆಗ ಶ್ರೀನಿವಾಸ ಕಲ್ಯಾಣೋತ್ಸವ ನಡೆಯುವುದು. ಇದನ್ನು ಆರಂಭಿಸಿ ದವರೂ ಅನ್ನಮಾಚಾರ್ಯರೇ. ಅಂತೆಯೇ ಅವರು ಸ್ವಾಮಿಯ ಕಲ್ಯಾಣವನ್ನು ಅನೇಕ ಕೀರ್ತನೆಗಳಲ್ಲಿ ವರ್ಣಿಸಿದ್ದಾರೆ.

ಈ ಉತ್ಸವಗಳಲ್ಲದೆ ತಿರುಪತಿಯ ವೇಂಕಟೇಶ್ವರನ ದೇವಾಲಯದಲ್ಲಿ ಪ್ರತಿದಿನ ಹಲವು ಸೇವೆಗಳು ನಡೆಯುತ್ತವೆ. ವಿಶ್ವರೂಪದರ್ಶನ, ತೋಮಾಲಸೇವೆ, ಸಹಸ್ರ ನಾಮಾರ್ಚನೆ, ನೈವೇದ್ಯ, ಧರ್ಮದರ್ಶನ, ಆರ್ಜಿತ ಉತ್ಸವಗಳು, ಏಕಾಂತಸೇವೆ ಮುಂತಾದ ಸೇವಾಕ್ರಮ ವೈಖಾನಸಾಗಮಗಳಲ್ಲಿ ಹೇಳಲಾಗಿರುವ ಮಂತ್ರಾಸನ, ಸ್ನಾನಾಸನ ಅಲಂಕಾರಾಸನಾದಿ ವಿವಿಧ ಸೇವೆಗಳಿಗೆ ಅನುಗುಣವಾಗಿದೆ.

ಸ್ವಾಮಿ ಪುಷ್ಕರಣಿಯಲ್ಲಿ ನಡೆಯುವ ತೆಪ್ಪೋತ್ಸವವನ್ನೂ ವರ್ಣಿಸಿದ್ದಾರೆ. ಈ ತೆಪ್ಪ ತಿರುನಾಳ್ಳು ವೇಂಕಟೇಶ್ವರನಿಗೆ ತುಂಬ ಪ್ರಿಯವಾದುದೆಂದು ಹೇಳುತ್ತಾ ಅದನ್ನು ಶೃಂಗಾರಕ್ಕೆ ಅನ್ವಯಿಸಿ ಹೀಗೆಂದಿದ್ದಾರೆ: "ಆಗ ಹದಿನಾರು ಸಾವಿರ ಅಂಗನೆಯರ ಬೆವರಲ್ಲಿ ತೆಪ್ಪದ ಮೇಲೆ ತೇಲಾಡಿದ ತೆಪ್ಪೋತ್ಸವ, ಶ್ರೀವೇಂಕಟಾದ್ರಿಯ ಕೊಳದಲ್ಲಿ ಈಗ ಪ್ರತಿ ವರ್ಷ ತೆಪ್ಪೋತ್ಸವ."[1]

ಹೀಗೆ ಅನ್ನಮಯ್ಯನ ಕೀರ್ತನೆಗಳಿಂದ ಆಗ ನಡೆಯುತ್ತಿದ್ದ ಅನೇಕ ಉತ್ಸವಗಳ ವಿಷಯ ತಿಳಿಯುವುದಲ್ಲದೆ ತಿರುಪತಿಯ ಸಾಂಸ್ಕೃತಿಕ ಮತ್ತು ಧಾರ್ಮಿಕ ಪ್ರಾಧಾನ್ಯ ಅಂದಿನಿಂದಲೇ ಇತ್ತೆಂಬುದೂ ತಿಳಿಯುತ್ತದೆ.

## ನಂಬಿಕೆ

ಮಾನವನಿಗೆ ಸಮಾಜದಿಂದ ಲಭಿಸುವ ಸಾಂಸ್ಕೃತಿಕ ಅಂಶಗಳಲ್ಲಿ ನಂಬಿಕೆಯೂ ಒಂದು. ಆದಿಮಾನವನಿಂದ ಹಿಡಿದು ಆಧುನಿಕ ಮಾನವನವರೆಗೂ ನಂಬಿಕೆಗಳು ಜೀವನದ ಅನಿವಾರ್ಯ ಅಂಶವಾಗಿವೆ. ವೈಯಕ್ತಿಕ ಭಯವೇ ನಂಬಿಕೆಗಳಿಗೆ ಸ್ವಲ್ಪಮಟ್ಟಿನ ಕಾರಣ ವಾದರೂ ಇವು ಸಮಾಜದ ಕೊಡುಗೆಯೇ ಎನ್ನಬಹುದು. ಉಕ್ತಿ, ವಸ್ತು ಅಥವಾ

[1] ಅಪ್ಪುಡು ಪದಾರು ವೇಲು ಅಂಗನಲ ಚೆಮಟಲ
ತೆಪ್ಪಲ ದೇಲಿನ ತೆಪ್ಪತಿರುನಾಳ್ಳು
ಮೊಪ್ಪಗ ಶ್ರೀ ವೇಂಕಟಾದ್ರಿನುನ್ನತಿ ಗೋನೇಟಿಲೋನ
ತೆಪ್ಪರಿಲ್ಲೆ ನೇಟ ನೇಟ ತೆಪ್ಪ ತಿರುನಾಳ್ಳು (ಅಧ್ಯಾ. ಸಂ., 2, ಪು. 96).

ಪರಿಸ್ಥಿತಿಯನ್ನು ಕುರಿತಂತೆ ಸಮ್ಮತಿ ಸೂಚಿಸುವ ಮಾನಸಿಕ ಸ್ಥಿತಿಯನ್ನು ನಂಬಿಕೆ ಎನ್ನಬಹುದು. ಕೆಲವು ನಂಬಿಕೆಗಳಲ್ಲಿ ವೈಜ್ಞಾನಿಕ ಸತ್ಯ ಅಡಗಿರಬಹುದು. ಸಾಮಾನ್ಯ ಜನರಲ್ಲಿ ಪ್ರಚಲಿತವಿರುವ ಹಲವು ನಂಬಿಕೆಗಳಿಗೆ ಭಯವೇ ಮೂಲ. ಪುರಾಣ, ಐತಿಹ್ಯ, ಇತಿಹಾಸ ಮುಂತಾದವು ನಂಬಿಕೆಗಳಿಗೆ ಕಾರಣವಾಗಬಹುದು. ಸಾಮಾನ್ಯವಾಗಿ ನಂಬಿಕೆಯಲ್ಲಿ ಭಾವನೆ ಮತ್ತು ಕ್ರಿಯೆ ಎಂಬ ಎರಡು ಭಾಗಗಳಿರುತ್ತವೆ. ಬೆಕ್ಕನ್ನು ನೋಡಿದಾಗ ಏನಾದರೂ ಕೆಟ್ಟದ್ದಾಗಬಹುದೆಂಬುದು ಭಾವನೆಯಾದರೆ ಹೊರಗೆ ಹೋಗದೆ ಹಿಂದಿರುಗುವುದು ಕ್ರಿಯೆ.

ಭಾಷೆ ಉಗಮವಾದ ಕಾಲದಿಂದ ನಂಬಿಕೆಗಳು ಒಬ್ಬನಿಂದ ಇನ್ನೊಬ್ಬನಿಗೆ ಪ್ರಸಾರವಾದುವು. ಮಿಂಚು, ಗುಡುಗು, ಮಳೆ, ಮಹಾಪೂರದಂಥ ಪ್ರಕೃತಿ ವಿಕೋಪಗಳು ನಂಬಿಕೆಗಳ ಉಗಮಕ್ಕೆ ಕಾರಣವಾದುವು. ನಾಗರಿಕ ಪ್ರಪಂಚದಲ್ಲೂ ನಂಬಿಕೆಗಳಿಗೇನೂ ಕೊರತೆಯಿಲ್ಲ. ಮುಹೂರ್ತ, ಶಕುನ, ಭವಿಷ್ಯ, ದೆವ್ವ, ಭೂತ ಮುಂತಾದವುಗಳಿಗೆ ಸಂಬಂಧಿಸಿದ ನಂಬಿಕೆಗಳು ಇನ್ನೂ ಮುಂದುವರಿಯುತ್ತಲೇ ಇವೆ. ಯಜ್ಞಯಾಗಾದಿಗಳು ಜಾತ್ರೆ, ವ್ರತ, ಪೂಜೆ ಮೊದಲಾದವು ಧಾರ್ಮಿಕ ಸಂಬಂಧದ ನಂಬಿಕೆಗಳಿಗೆ ಕ್ರಿಯೆಗಳಾಗುತ್ತವೆ. ಕೆಲವು ನಂಬಿಕೆಗಳು ಸಾಂಸ್ಕೃತಿಕ ಕಾರಣಗಳಿಂದ ಉಗಮಗೊಳ್ಳುತ್ತವೆ. ಉದಾಹರಣೆಗೆ ಮಾತೃಪ್ರವೃತ್ತಿ ಪ್ರಾಣಿ ಸಹಜಗುಣ. ಆದರೆ 'ಬಂಜೆಯ ಆಶೀರ್ವಾದ ಪಡೆಯಬಾರದು' ಇತ್ಯಾದಿ ನಂಬಿಕೆಗಳು ಸಾಂಸ್ಕೃತಿಕ ಕಾರಣಗಳಿಂದ ಏರ್ಪಡುವಂಥವು.

ನಂಬಿಕೆಗಳನ್ನು ವೈಜ್ಞಾನಿಕ, ಅವೈಜ್ಞಾನಿಕ ಎಂದು ಕೆಲವರು ವಿಭಜನೆ ಮಾಡುತ್ತಾರೆ. ಗೃಹವೈದ್ಯಕ್ಕೆ ಸಂಬಂಧಿಸಿದ ನಂಬಿಕೆಗಳನ್ನು ವೈಜ್ಞಾನಿಕ ನಂಬಿಕೆಗಳ ಗುಂಪಿಗೆ ಸೇರಿಸಲಾಗಿದೆ. ಲೋಕದ ಪರಿಶೀಲನೆಯಿಂದ ಉಗಮಗೊಂಡ, ವಾತಾವರಣಕ್ಕೆ ಸಂಬಂಧಿಸಿದ, ಪಶುಪಕ್ಷ್ಯಾದಿಗಳಿಗೆ ಸಂಬಂಧಿಸಿದ ನಂಬಿಕೆಗಳು ಕೂಡ ಈ ಗುಂಪಿಗೆ ಸೇರುತ್ತವೆ. ಅತಿಮಾನುಷ ಶಕ್ತಿಗಳಿಗೆ ಸಂಬಂಧಿಸಿದವು ಮತ್ತು ಲೌಕಿಕ ಜೀವನಕ್ಕೆ ಸಂಬಂಧಿಸಿದವು ಎಂಬ ಎರಡು ವಿಭಾಗಗಳಲ್ಲೂ ನಂಬಿಕೆಗಳನ್ನು ಪರಿಶೀಲಿಸಬಹುದು. ದೆವ್ವ, ಭೂತ, ಸಿಡಿ, ಬಾಯಿಬೀಗ, ಜೋಗತಿಪದ್ಧತಿ, ಪ್ರಾಣಿಬಲಿ ಮುಂತಾದ ಆಚಾರಗಳು ಬಲವಾದ ನಂಬಿಕೆಗಳ ಹಿನ್ನೆಲೆಯಲ್ಲೇ ಉಗಮಗೊಂಡಿವೆ. ನಂಬಿಕೆಗಳ ಬಗೆಗೆ ಒಂದು ಮಾತನ್ನು ಹೇಳಬಹುದು : ಮನುಷ್ಯರನ್ನು ಮೂಢನಂಬಿಕೆ ಇರುವವರು ಮತ್ತು ವಿವೇಕವಂತರು ಎಂದು ಎರಡು ಪಂಗಡ ಮಾಡಲು ಸಾಧ್ಯವಿಲ್ಲ. ಹೆಚ್ಚು ಮೂಢನಂಬಿಕೆ ಇರುವವರು, ಕಡಿಮೆ ಮೂಢನಂಬಿಕೆ ಇರುವವರು ಎಂದು ಮಾತ್ರ ಹೇಳಬಹುದು. ಅಷ್ಟರಮಟ್ಟಿಗೆ ಈ ನಂಬಿಕೆಗಳು ಬೇರೂರಿಬಿಟ್ಟಿವೆ.

ಪುರಂದರದಾಸರ ಕೀರ್ತನೆಗಳಲ್ಲಿ ನಂಬಿಕೆಗಳನ್ನು ಉಲ್ಲೇಖಿಸಿರುವ ಸಂದರ್ಭಗಳು ಹಲವಿವೆ. ಇವುಗಳಲ್ಲಿ ಕೆಲವು ಆಚಾರಗಳಿಗೆ ಸಂಬಂಧಿಸಿದವಾಗಿರುತ್ತವೆ, ಕೆಲವು ಧರ್ಮಕ್ಕೆ ಸಂಬಂಧಿಸಿದವಾಗಿರುತ್ತವೆ. ಆದುದರಿಂದ ಸ್ಪಷ್ಟವಾಗಿ ಗೆರೆಎಳೆದು ಇವನ್ನು ಇಲ್ಲಿಲ್ಲೇ ಸೇರಿಸಬೇಕೆಂಬ ನಿಯಮ ಮಾಡಿಕೊಳ್ಳಲು ಸಾಧ್ಯವಿಲ್ಲ.

ಕೆಲವು ನಂಬಿಕೆಗಳು ಭಾರತೀಯ ಸಾಂಸ್ಕೃತಿಕ ಜೀವನ ಪ್ರವಾಹದಲ್ಲಿ ಸಾವಿರಾರು ವರ್ಷಗಳಿಂದ ಹರಿದು ಬಂದಂಥವು. "ಸಾವಿರ ವಿಪ್ರರ ಜೀವಹತ್ಯೆ ಮಾಡಿದ ಪಾಪ" ಮತ್ತು "ಗೋವಕೊಂದ ಪಾಪ"ದ(3-78) ಬಗೆಗೆ ಧಾರ್ಮಿಕ ಗ್ರಂಥಗಳೂ ಹೇಳುತ್ತವೆ. "ಎನಗೂ ಆಣೆ ರಂಗ ನಿನಗೂ ಆಣೆ" (ಉ. ಪ್ರ., ಭಾಗ 2, ಪು. 62) ಎಂದು ಆಣೆ ಇಡುವಂಥವು ಸಾಮಾನ್ಯ ಜನರ ಜೀವನದಿಂದ ಮೂಡಿಬಂದವಾಗಿವೆ. ಗ್ರಹಣಾದಿ ಪ್ರಕೃತಿ ಪರಿಣಾಮಗಳಿಗೆ ಸಂಬಂಧಿಸಿದಂತೆ ನಮ್ಮಲ್ಲಿ ನೂರಾರು ನಂಬಿಕೆಗಳಿವೆ. "ಮಹಾಲಯ ಪುಣ್ಯದಿವಸದಿ, ಬಲ್ಲಿದ ಏಕಾದಶಿ ಪರ್ವಣಿ, ಅಮಾವಾಸ್ಯೆಯಲಿ, ರವಿಶಶಿ ಗ್ರಹಣದಲಿ ಸಲ್ಲದಯ್ಯ ದಂತಕಾಷ್ಠ ಮಲಿನಗಳಿಗೆ ಗಲ್ಲಿಸಿ ನೀರ ಮುಕ್ಕಳಿಸೆ ಹನ್ನೆರಡು ಬಲ್ಲ ಬುಧರಿಗೆ ಪುರಂದರವಿಠಲ ಒಲಿವ ಇವನಾಚರಿಸೆ" (5-40) ಎಂದು ಜನಸಾಮಾನ್ಯರ ನಂಬಿಕೆಯನ್ನೇ ಪುರಂದರದಾಸರೂ ಹೇಳಿದ್ದಾರೆ.

ಸಮಾಜದಲ್ಲಿ ಬಲವಾಗಿ ಬೇರೂರಿರುವ ನಂಬಿಕೆಗಳಲ್ಲಿ ಶಕುನಫಲ ಒಂದು. ಸಾವಿರಾರು ವರ್ಷಗಳಿಂದ ಭಾರತೀಯರು ಒಳ್ಳೆಯ ಮತ್ತು ಕೆಟ್ಟ ಶಕುನಗಳೆಂದು ನಂಬಲಾಗಿರುವ ಕೆಲವನ್ನು ಪುರಂದರದಾಸರೂ ಪಟ್ಟಿಮಾಡಿದ್ದಾರೆ.

ಒಳ್ಳಿತೀ ಶಕುಸ ಫಲವಿಂದೆಮಗೆ
ಜಲಜಾಕ್ಷನೊಲುಮೆಯಾಗುವುದು ಕೇಳ್ ಕೆಳದಿ

ವಾಮಗರುಡನ ನೋಡು ವಾಯಸ ಬಲನೋಡು
ಕೋಮಲಾಂಗನೇರ ಉದಕುಂಭನೋಡು
ಸಾಮಾನ್ಯವಲ್ಲ ಗೌಳಿ ಬಲಕೆ ನುಡಿಯುತಿದೆ
ಪ್ರೇಮದಿ ಮಧುರ ವಚನ ಕೇಳಿ ಕೆಳದಿ

ಭೇರಿ ಶಂಖವು ಘಂಟಾವಾದ್ಯವಾಗುತಲಿದೆ
ಕ್ಷೀರ ಘೃತ ಫಲ ಪುಷ್ಪ ಎದುರಾದುವು
ಭಾರದ್ವಾಜಪಕ್ಷಿ ಎಡವಾಗುವುದು ಕಂಡ್ಯ
ತೋರುತಿವೆ ಶುಭಶಕುನಂಗಳಿದಕೊ

ನೋಡು ವಿಪ್ರದ್ವಯರು ಎದುರಾಗುತೈದಾರೆ
ಕೊಡುವುದು ಮನದ ವಾಂಛಲ್ಯವೆಲ್ಲ
ಬೇಡಿದೊರಗಳ ಕೊಡುವ ಪುರಂದರವಿಠಲನ
ಕೂಡಿ ಇಹಪರ ಸುಖದಿಂದಿರು ರಮಣಿ (ಉ. ಪ್ರ., ಭಾಗ 5, ಪು. 36).

ಕೆಟ್ಟಕಣ್ಣಿನ ಪ್ರಭಾವದಿಂದಾಗುವ ದೃಷ್ಟಿಯನ್ನು ಕುರಿತ ನಂಬಿಕೆ ಇಂದಿಗೂ ಜಾನಪದರಲ್ಲಿ ಪ್ರಚಲಿತವಿದೆ. ಗುಮ್ಮ ಬರುವನೆಂದು ಮಕ್ಕಳನ್ನು ಹೆದರಿಸುವುದು ಕೂಡ ಇನ್ನೊಂದು ನಂಬಿಕೆ. ಒಂದೆಡೆ ಕೆಟ್ಟ ಕಣ್ಣಿಗೆ ಹೆದರಿ ದೃಷ್ಟಿತೆಗೆಯುವುದು, ಇನ್ನೊಂದೆಡೆ ಗುಮ್ಮ ಮುಂತಾದ ಹೆಸರುಗಳನ್ನು ಹೇಳಿ ಹದರಿಸುವುದು ಇವೆರಡನ್ನೂ ಜನ

ಮಾಡುತ್ತಾರೆ. "ದೃಷ್ಟಿ ತಾಕೀತೆಂದಿಟ್ಟು ವಿಭೂತಿಯ ತಟ್ಟೆಯೊಳಾರತಿಗಳ ಬೆಳಗಿ ಥಟ್ಟನೆ ಉಪ್ಪುಬೇವು ನಿವಾಳಿಸಿ....ಎನ್ನಯ್ಯರನ್ನನೆ ಸುಮ್ಮನಿರೊ ದೊಡ್ಡ ಗುಮ್ಮನು ಬರುವನು ಅಳಬೇಡ" (ಹ. ಕೀ. ತ., ಪು. 246) ಎಂದು ರಚ್ಚೆಮಾಡುವ ಮಗುವನ್ನು ಸಂತೈಸಿ "ರಕ್ಷೆಬೊಟ್ಟು"ಇಡುವ ಗೋಪಿಯ (3-134) ಭಾಗ್ಯವನ್ನು ಪುರಂದರದಾಸರು ವರ್ಣಿಸಿದ್ದಾರೆ.

ಕುಂದದ ದೀಪವ ನಂದಿಪನಿಗೆ
ಕೂಷ್ಮಾಂಡ ಒಡೆವಳಿಗೆ
ಎಂದೂ ಆಪೋಶನವ ತನ್ನ ಕೈ
ಯಿಂದ ತಾನೆ ಎರೆದುಕೊಂಡು ಕುಡಿವಂಗೆ
ಇವರು ಮೂವರಿಗೆ ಕುಲನಾಶನ.... (5-63)

ಎಂಬ ನಂಬಿಕೆಗಳು ಇಂದಿಗೂ ಇರುವಂಥವೇ. "ಸತ್ತ ಕರುವಿನ ತಾಯ ಹಾಲ ಕರೆವವ ಮೂರ್ಖ" (5-116) ಎಂಬ ನಂಬಿಕೆ ಆರ್ಥಿಕವಾಗಿ ನಷ್ಟ ಉಂಟುಮಾಡುವುದರಿಂದ ಇದನ್ನು ಯಾರೂ ಅಷ್ಟಾಗಿ ಗಮನಿಸುವುದಿಲ್ಲ.

ತುಳಸಿಮಣಿಮಾಲೆ ಧರಿಸುವುದು ವಿಷ್ಣುಭಕ್ತರ ಆಚಾರ. ಇದನ್ನು ಒಂದು ಕೀರ್ತನೆಯಲ್ಲಿ ಪುರಂದರದಾಸರು ಹೇಳಿದ್ದಾರೆ :

ತುಳಸೀಮಾಲೆಯ ಹಾಕುವುದಕ್ಕೆ
ಆಲಸಿಕೊಂಡು ನಡೆಯುತಲಿದ್ದೆ
ಜಲಜಾಕ್ಷಿಯು ಶ್ರೀಪುರಂದರವಿಠಲನ
ತುಳಸೀಮಾಲೆಯ ಹಾಕಿಸಿದಳು (6-111).

ಕೃಷ್ಣನ ಅಲಂಕಾರವನ್ನು ಹೇಳುವಲ್ಲಿಯೂ "....ಲೇಸಾಗಿ ತುಲಸಿಯ ಮಾಲೆಯ ಧರಿಸಿದ, ವಾಸುದೇವನು ಬಂದ ಕಾಣಿರೇನೆ" ಎಂದಿದ್ದಾರೆ (ಉ. ಪ್ರ., ಭಾಗ 1, ಪು.60). ಆದರೆ ತುಲಸಿಯನ್ನು ಯಾವಾಗ ಕೀಳಬಾರದೆಂಬುದು ಒಂದು ನಂಬಿಕೆಯಾಗಿದೆ. "ಆದಿವಾರದಲಿ ಸಂಜೆಯಲಿ ರಾತ್ರಿಯಲಿ ಅಂಗಾರಕ ಶುಕ್ರವಾರದಲಿ, ಆದಿತ್ಯ ಸೋಮ ಗ್ರಹಣ ಅಮಾವಾಸ್ಯೆ ಹುಣ್ಣಿಮೆ ದ್ವಾದಶಿಯಲಿ, ಸಾದರಾರ್ಚಿತ ಜಯಂತಿಗಳಲ್ಲಿ ವೈಧೃತಿ ವ್ಯತಿಪಾತ ಸಂಕ್ರಾಂತಿಗಳಲಿ ಶ್ರೀಪುರಂದರವಿಠಲ ಮುನಿವ ಶ್ರೀತುಲಸಿಯ ತೆಗೆದರೆ" (6-89) ಎಂದಿದ್ದಾರೆ ದಾಸರು.

ಸ್ವರ್ಗ ನರಕಗಳ ಕಲ್ಪನೆ ಪ್ರಪಂಚಾದ್ಯಂತ ಯಾವುದೋ ಒಂದು ರೂಪದಲ್ಲಿ ಇರುವಂಥದೇ. ಜನ ಸನ್ನಡತೆಯುಳ್ಳವರಾಗಬೇಕೆಂದು ಪ್ರೇರೇಪಿಸಲು ಪುರಂದರದಾಸರು ನರಕದ ವರ್ಣನೆ ಮಾಡಿದ್ದಾರೆ :

ಯಮನ ಶಾಸನ ಕೇಳೊ ಜೀವ ಇದು
ಸಂಶಯವಿಲ್ಲೆಂದು ಎಣಿಸು ಸ್ವಭಾವ
ಪರಸತಿಯ ನೋಡಿದವಗೆ ಪತ್ತು

ಕೊರಡು ಕೆಂಪಗೆ ಕಾಸಿ ಕುಕ್ಕಿ ಕಣ್ಣೊಳಗೆ
ಎರಡು ಗುಡ್ಡನು ಪಿಕೋರವಗೆ
ಕರಗಿಸಿ ಸೀಸವ ಪೊಯ್ಯುವರೊ ಅವನ ಕಿವಿಯೊಳಗೆ

ಅನ್ಯ ಸ್ತ್ರೀ ಪುರುಷರ ಸಂಗ
ತನ್ನವರ ಕುಲ ಅಳಿಸಿಟ್ಟು ಹಾಕುವ ರಂಗೆ
ನರಕಕ್ಕೆ ಗುರಿಮಾಡಿ ತುಂಗ ಕೆಂಡ
ಪುರಿವ ಉಕ್ಕಿನ ಕಂಭ ಕಟ್ಟಿಪ್ಪ ಭಂಗ (ಉ. ಪ್ರ., ಭಾಗ 5, ಪು. 28).

"ಸಿಡಿಯ ಮುಳ್ಳನೆ ತಂದು ನಡುಬೆನ್ನಲೂರಿಕೊಂಡು" (5-127), "ಹೆಮ್ಮೆಯ ಸಿಡಿಯೇರಿ ಬೇವಿನುಡುಗೆಯುಟ್ಟು, ಚಿಮ್ಮುತ ಚೀರುತ ಬೊಬ್ಬೆಯಿಟ್ಟು, ಕರ್ಮಕೆ ಗುರಿಯಾಗಿ ಪ್ರಾಣಿಹಿಂಸೆಯ ಮಾಳ್ಪ...." (2-143) ಸಿಡಿ ಆಡುವ ವಿಚಾರವನ್ನೂ ದಾಸರು ಹೇಳಿದ್ದಾರೆ. ಇದು ನಮ್ಮಲ್ಲಿ ಬಹಳ ಹಿಂದಿನಿಂದಿಲೂ ಮಾರಿಹಬ್ಬ ಆಚರಿಸುವ ಸಂದರ್ಭದಲ್ಲಿ ನಡೆದುಕೊಂಡು ಬಂದಿರುವ ಪದ್ಧತಿ.

ಮದ್ದಿಕ್ಕುವರೆಂಬ ನಂಬಿಕೆ ಜಾನಪದರಲ್ಲಿ ಆಳವಾಗಿ ಬೇರೂರಿದೆ. ಗೋಪಿಯರು ಮದ್ದಿಕ್ಕಿ ಕೃಷ್ಣನನ್ನು ಒಲಿಸಿಕೊಂಡರೆಂದು ಹೇಳುವ ಸಂದರ್ಭದಲ್ಲಿ ಪುರಂದರದಾಸರು ತಮ್ಮ ಕಾಲದಲ್ಲೂ ಇಂಥ ನಂಬಿಕೆ ಇತ್ತೆಂಬುದನ್ನು ಸೂಚಿಸಿದ್ದಾರೆ. "ಉಣಲೊಲ್ಲೆ ಯೇಕೋ ... ಅನುದಿನ ನಮ್ಮೆಲ್ಲರ ಅಗಲಬಾರದುಯೆಂದು ಮನಸೋತು ಗೋಪಿಯರು ಮದ್ದಿಕ್ಕಿದರೆ" (ಉ. ಪ್ರ., ಭಾಗ 1, ಪು. 37) ಎಂದಿದ್ದಾರೆ.

ಭೂತ, ಬೇತಾಳ, ಮಾರಿ, ಮಸಣಿ ಮುಂತಾದ ಕ್ಷುದ್ರ ಶಕ್ತಿಗಳ ಬಗೆಗಿನ ನಂಬಿಕೆ ಬಲು ದೊಡ್ಡ ಭಾಗ. "ಬೇತಾಳ" (3-15), "ರಟ್ಟುಭೂತ" (3-103), "ಮಾರಿ" (5-106), "ಮಿಂಡೆ, ಮೈಲಾರಿ, ಖಂಡೆರಾಯ" (5-127) ಇತ್ಯಾದಿ ಕ್ಷುದ್ರದೇವತೆಗಳ ಉಲ್ಲೇಖಗಳು ಹಲವು ಬರುತ್ತವೆ.

ಎಲ್ಲಮ್ಮ ಎಕಲಾತಿ ಉರಿಮಾರಿ ಉಡಚಮ್ಮ
ಖುಲ್ಲ ಮಹಿಷಾಸುರ ದೈವವೆಂದೆ
ಎಲ್ಲ ದೈವಗಳು ನಾಯಾಗಿ ಹರಿವಾಗ
ಕಳ್ಳ ದೇವರ ನೆಚ್ಚಿ ಕೆಡಬೇಡ ಮೂಳಿ (5-127)

ಎಂದು ಸಲಹೆ ನೀಡಿದ್ದಾರೆ. "ಮಾರಿ ಮನೆಯೊಳಗಿರಲು ಸಹಕಾರಿ ಎನಬಹುದೆ" (5-155) ಎಂದೂ ಪ್ರಶ್ನಿಸಿದ್ದಾರೆ. ಹರಿಯನ್ನು ಮಾತ್ರ ನೆನೆಯುವ ಹರಿದಾಸರಿಗೆ ಇಂಥ ಕ್ಷುದ್ರದೇವತೆಗಳನ್ನು ಕಂಡರೆ ಭಯವಿಲ್ಲವೆಂಬುದನ್ನು ಒತ್ತಿ ಹೇಳಿದ್ದಾರೆ. "ಮಾರಿಯಾ ಕೈಯಲ್ಲಿ ನೀರ ಹೊರಿಸುವರು, ಮಸಣಿಯ ಕೈಯ ಕಸ ಬಳಿಸುವರು.... ಬೊಮ್ಮಬೀರ ಬೇತಾಳ ಜಟ್ಟಿಂಗಳೆಲ್ಲ ಕರ್ಮದ ಕಡಲೊಳು ಮುಳುಗಿರಲು....ಜಕಣಿಯು

ಜಲದೇವರು ಮೊದಲಾದ ಭಿಕಾರಿ ದೈವಗಳ ಪೂಜಿಸರವರು...." (ಉ. ಪ್ರ., ಭಾಗ 1. ಪು. 62) ಎಂದಿದ್ದಾರೆ.

ಮೇಲೆ ಹೆಸರಿಸಿದ ನಂಬಿಕೆಗಳು ಬಲುಮಟ್ಟಿಗೆ ಕರ್ನಾಟಕ ಮತ್ತು ಆಂಧ್ರಪ್ರದೇಶ ಗಳಿಗೆ ಸಮಾನವಾದವು. ಆಣೆ ಇಡುವ ಸಂಪ್ರದಾಯವನ್ನು ಅನ್ನಮಾಚಾರ್ಯರೂ ಹೇಳಿದ್ದಾರೆ. "ಆಣೆ ಇಟ್ಟರೆ ಎಲ್ಲಿಗೆ ಬಾ ಎಂದರೆ ಅಲ್ಲಿಗೆ ಬರುತ್ತೀಯೆ"[1] ಎಂದು ವೇಂಕಟೇಶ್ವರ ಪ್ರಿಯೆಗೆ ಹೇಳುವ ಮಾತು.

ವಿವಿಧ ನಂಬಿಕೆ ಭಾರತೀಯರಿಗೆಲ್ಲ ಸಾಮಾನ್ಯವೇ. ಅದನ್ನು ಅವರವರಿಗೆ ತೋಚಿದ ರೀತಿಯಲ್ಲಿ ಅನ್ವಯಿಸಿಕೊಳ್ಳುತ್ತಾರೆ. "ದಕ್ಕಿದ್ದು ಧರ್ಮ, ತಪ್ಪಿದ್ದು ಭಾಗ್ಯ, ಲೆಕ್ಕಿಸಿದರೆ ಹಣೆ ಬರಹವೇ ಲಿಖಿತ"[2] ಎಂದು ಅನ್ನಮಾಚಾರ್ಯರು ವಿಧಿಯ ಬಗೆಗೆ ಹೇಳಿದ್ದಾರೆ. ಭಗವಂತ ಕೂಡ ಹಣೆಬರಹವನ್ನು ತಪ್ಪಿಸಲು ಸಾಧ್ಯವಿಲ್ಲವೆಂಬ ನಂಬಿಕೆಯನ್ನು "ಹಣೆಯಲ್ಲಿ ಬರೆದಿರುವುದನ್ನೇ ವೇಂಕಟೇಶ್ವರನೂ ಮಾಡಿಸುತ್ತಾನೆ"[3] ಎಂದು ಒಂದು ಕೀರ್ತನೆಯಲ್ಲಿ ಹೇಳಿದೆ.

ಎಲ್ಲ ಸಾಹಿತ್ಯ ಕೃತಿಗಳಲ್ಲಿಯೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ದೃಷ್ಟಿ ಆಗುವುದೆಂಬ ನಂಬಿಕೆಗಳ ಉಲ್ಲೇಖ ಇದ್ದೇ ಇರುತ್ತದೆ. ಅನ್ನಮಾಚಾರ್ಯರು ತಮ್ಮ ಇಷ್ಟದೈವವನ್ನು ಕುರಿತು ಹೇಳುವಾಗ "ಕರುಣಾಕರನೂ ಕರುಣಾದೃಷ್ಟಿಯುಳ್ಳವನೂ ಆದ ವೇಂಕಟೇಶ್ವರನು ನಮ್ಮೆಲ್ಲರಿಗೂ ದೃಷ್ಟಿಮಂತ್ರದ ರಕ್ಷೆ"[4] ಎಂದಿದ್ದಾರೆ.

ಭಾರತೀಯರಲ್ಲಿರುವ ಪ್ರಮುಖ ನಂಬಿಕೆಗಳಲ್ಲಿ ರಸವಾದ ಒಂದು. ಬೇರೆ ಬೇರೆ ಲೋಹಗಳಿಂದ ಚಿನ್ನ ಮಾಡುವುದು ಸಾಧ್ಯವೆಂದು ನಂಬಿರುವ ಯೋಗಿಗಳು ಅನೇಕರಿದ್ದರು. ನೂರಾರು ಜನ ಈ ತರಹದ ನಂಬಿಕೆಯಿಂದ ಪ್ರಯೋಗಗಳನ್ನು ಮಾಡಿದ್ದುಂಟು. ಇಂಥ ನಂಬಿಕೆ ಅನ್ನಮಾಚಾರ್ಯರ ಕಾಲದಲ್ಲೂ ಇತ್ತು. "ಲೋಹ ಯಾವುದಾದರೇನು ಚಿನ್ನ ವನ್ನು ಮಾಡುವುದು ಪರುಸವೊಂದೇ ಅಲ್ಲವೆ"[5] ಎಂದು ಭಗವಂತನನ್ನು ಕುರಿತು ಹೇಳುವಲ್ಲಿ

---

[1] ಆನವೆಟ್ಟಗಾ ವಿಚ್ಚೇಸೇವಮ್ಮ ಪಾದಲಮೀದನೇ
ಕಾನೀ ಕಾನೀಲೇ ಯೆಕ್ಕಡಿಕೋ ನೀವು (12-27).

[2] ದಕ್ಕಿನದಿ ಧರ್ಮಮು ತಪ್ಪಿನದಿ ಭಾಗ್ಯಮು
ಲೆಕ್ಕಿಂಚ ನುದುಟವ್ರಾಲೆ ಲಿಖಿತಮುಲು (7-259).

[3] ನೊಸಲ ವ್ರಾಯಿಂಚಿನವಿ ನೋಮಿಂಚುಗಾಕತ
ಡೆಸಗಿನ ಶ್ರೀ ವೇಂಕಟೇಶ್ವರುಡು (5-320).

[4] ಘಾತ ಕರುಣಾಕರುಡೈ ಕರುಣದೃಷ್ಟಿವಾಡೇ
ಮಾತರತರಮು ದ್ರಿಷ್ಟಿಮಂತ್ರಪು ರಕ್ಷ (10-54).

[5] ಪರುಸಮೊಕ್ಕಟೇ ಕಾದಾ ಪಯಿಡಿಗಾ ಜೇಸೇದಿ
ಅರಯ ಲೋಹಮೆಟ್ಟುನ್ನಾ ನಂದುಕೇಮಿ (ಅಧ್ಯಾ. ಸಂ., 1, ಪು. 249).

ಈ ನಂಬಿಕೆಯನ್ನು ಆಚಾರ್ಯರು ಪ್ರಸ್ತಾವಿಸಿದ್ದಾರೆ. ಇನ್ನೊಂದೆಡೆ ಭಗವಂತನ ಜೊತೆ ಸಂಭಾಷಣೆ ನಡೆಸುವ ಸಂದರ್ಭದಲ್ಲಿ "ಹಿತ್ತಾಳೆಯನ್ನು ಬಂಗಾರ ಮಾಡುವುದು ನಿನಗೆ ಗೊತ್ತಂತೆ. ಹೊಸ ಹೊಸದೆಲ್ಲ ಕಲಿತುಕೊಂಡಿದ್ದೀಯೆ"[1] ಎಂದಿದ್ದಾರೆ. "ಹತ್ತಿರವೇ ಪರುಸ ಕೈಯಲ್ಲಿ ಇರುವಾಗ ಬೇರೆ ಬೇರೆ ವಿದ್ಯೆಗಳ ದಾರಿ ನಮಗೇಕೆ"[2] ಎಂದು ಅಧ್ಯಾತ್ಮವಿದ್ಯೆಯನ್ನು ಹೇಳುವಾಗಲೂ ಈ ನಂಬಿಕೆಯನ್ನು ಬಳಸಿ ಕೊಂಡಿದ್ದಾರೆ.

ದೆವ್ವ, ಭೂತ ಮುಂತಾದ ಅತಿಮಾನುಷ ಶಕ್ತಿಗಳ ಬಗೆಗಿನ ನಂಬಿಕೆಗಳು, ಆಂಧ್ರದಲ್ಲೂ ಇವೆ. ಸುಳ್ಳು ಹೇಳಿದರೆಂಬ ಅನುಮಾನ ಬಂದಾಗ ಬಾಲಕೋವಿಲ (ಬಾಲದೇವಸ್ಥಾನ)ದಲ್ಲಿ ಭೂತವನ್ನು ಮಾತಾಡಿಸುವ ರೂಢಿ ಇತ್ತು. ಇಂದಿಗೂ ಕೆಲವು ದೇವಸ್ಥಾನಗಳಲ್ಲಿ ಭೂತವನ್ನು ಮಾತಾಡಿಸುವ ಪದ್ಧತಿಗಳಿವೆ. "ನನ್ನಮೇಲೆ ತಪ್ಪಿಲ್ಲದಂತೆ ಬಾಲದೇವಾಲಯದ ಭೂತವನ್ನು ಮಾತಾಡಿಸುವೆ"[3] ಎಂದು ಈ ನಂಬಿಕೆಯನ್ನು ಅನ್ನಮಯ್ಯ ಉಲ್ಲೇಖಿಸಿದ್ದಾರೆ. ಮಂತ್ರ ಹೇಳಿ ಭೂತ ದೆವ್ವ ಹಿಡಿದವರಿಂದ ಅವನ್ನು ಓಡಿಸುವ ವಿಷಯವನ್ನು ಕೂಡ "ನಾರಾಯಣ ನಿನ್ನ ನಾಮವ ಮಂತ್ರಿಸಿ ಈ ಪ್ರಾಣಿಗಳ ಭ್ರಮೆ ಬಿಡಿಸು" (9-205) ಎಂದು ಹೇಳಿದ್ದಾರೆ. "ಬಾವಿ ತೋಡಿದರೆ ಬೇತಾಳ ಹುಟ್ಟಿತು"[4] ಎಂದು ಬೇತಾಳದ ಬಗೆಗೂ ಹೇಳಿದ್ದಾರೆ.

ಪವಾಡಗಳನ್ನು ಕುರಿತ ನಂಬಿಕೆಗಳು ಕೂಡ ನಮ್ಮಲ್ಲಿ ಪ್ರಚಲಿತವಾಗಿವೆ. ಅನ್ನಮಾ ಚಾರ್ಯರಿಗೂ ಇಂಥ ಕಾಟ ತಪ್ಪಿದ್ದಲ್ಲ. ಚಿನ್ನನ್ನನ 'ಅನ್ನಮಾಚಾರ್ಯ ಚರಿತ್ರ'ದ ಪ್ರಕಾರ (ಪು. 43, 44) ಒಮ್ಮೆ ಅನ್ನಮಾಚಾರ್ಯರು ಹುಳಿ ಮಾವಿನ ಹಣ್ಣನ್ನು ಸಿಹಿಯಾಗಿಸಿದರಂತೆ! ಇನ್ನೊಮ್ಮೆ ಅವರು ವಧೂವರರನ್ನು ಆಶೀರ್ವದಿಸಿದರಂತೆ; ಇದರಿಂದ ಅವರಿಗೆ ಉನ್ನತಿ ಲಭಿಸಿದಂತೆ ಹೇಳಲಾಗಿದೆ. ಇವನ್ನೆಲ್ಲ ನೋಡಿದ ಜನ ತಮ್ಮ ಕೋರಿಕೆಗಳು ಈಡೇರುವಂತೆ ಆಶೀರ್ವದಿಸಬೇಕೆಂದು ಅನ್ನಮಾಚಾರ್ಯರನ್ನು ಒತ್ತಾಯಿಸುತ್ತಿದ್ದರಂತೆ. ಆಚಾರ್ಯರಿಗೆ ಇವು ಇಷ್ಟವಿಲ್ಲದವು. "ಗಂಡ ಬಿಟ್ಟರೂ ಮಾವ ಬಿಡದಂತೆ, ನನ್ನ ಮನಸ್ಸಿಗೆ ಬೇಸರವಾದರೂ ಜನ ಬಿಡರು, ಬಂದು ಬಂದು

---

[1] ಇತ್ತಡಿ ಬಂಗಾರು ಸೇಯ ನಿಂತಕು ನೇರುತುನಂಟಾ
ಕೊತ್ತ ಸೇತಲೆಲ್ಲ ದೊರಕೊಂಟಿಗಾ ನೀವು (ಅಧ್ಯಾ. ಸಂ., 1. ಪು. 241).

[2] ಚೆಂತಲ ಪರುಸವೇದಿ ಚೇತಿಲೋನೇ ವುಂಡಗಾನು
ದೊಂತರ ವಿದ್ಯಲ ತೋಡಿ ದೋವ ಮಾಕೇಲಾ (8-190).

[3] ನಾಲಾಯಿಂಚಿ ನೇನೈನಾ ನಾವಲ್ಲ ಕಲ್ಲಲೇಕುಂಡಾ
ಬಾಲಕೋವಿಲ ಭೂತಮು ಪಲಿಕಿಂಚೇಗಾನಿ (13-181).

[4] ನೂತುಲು ದವ್ವಗಬೋತೇ ಬೇತಾಳಮುಲು ಪುಟ್ಟು (6-8).

ತಮ್ಮ ದೈನ್ಯವನ್ನು ತೋರಿಸುತ್ತಾರೆ, ಕಾಟಾಚಾರಕ್ಕೆ ಹೋಗಿ ನಾನು ಮೋಸ ಹೋಗಲಾರೆ"[1] ಎಂದು ಹೇಳಿಕೊಂಡಿದ್ದಾರೆ.

ಪ್ರಯೋಗ, ಅನ್ವೇಷಣೆ, ಅನುಭವ ಗೃಹವೈದ್ಯಕ್ಕೆ ಅಗತ್ಯ. ಪ್ರಕೃತಿಯಲ್ಲಿರುವ ವಸ್ತುಗಳನ್ನು ಬಳಸಿಕೊಂಡು ಸಣ್ಣ ಪುಟ್ಟ ಕಾಯಿಲೆಗಳಿಗೆ ವೈದ್ಯಮಾಡುವುದು ಒಂದು ಬಗೆಯಾದರೆ; ಮಂತ್ರ-ತಂತ್ರ, ಧಾರ್ಮಿಕಕಾಂಡ ಮತ್ತು ಸಂಪ್ರದಾಯಗಳಿಂದ ವೈದ್ಯ ಮಾಡುವುದು ಇನ್ನೊಂದು ಬಗೆ. ಇಲ್ಲಿ ನಂಬಿಕೆಯೇ ಪ್ರಧಾನವಾಗಿರುತ್ತದೆ.

ಭಕ್ತಿ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಭವರೋಗದ ವಿಷಯದಲ್ಲಿ ವೈದ್ಯದ ಪ್ರಸಕ್ತಿ ಬರುತ್ತದೆ. ಮನುಷ್ಯನ ಬದುಕನ್ನು ಒಂದು ರೋಗಕ್ಕೆ ಹೋಲಿಸಿ, ಭಗವಂತನನ್ನು ಈ ರೋಗದಿಂದ ಪಾರುಮಾಡುವ ವೈದ್ಯನೆಂದು ಹೇಳುವುದು ಅನೇಕ ಕೀರ್ತನೆಗಳ ವಿಷಯ ವಾಗಿರುತ್ತದೆ. ಇದರ ಜೊತೆಗೆ ಬೇರೆ ಬೇರೆ ಸಂದರ್ಭಗಳಲ್ಲಿ ವ್ಯಾಧಿಗಳನ್ನೂ ಔಷಧಿ ಗಳನ್ನೂ ಹೆಸರಿಸಿದ್ದಾರೆ. "ಜ್ವರ ಬಂದಾಗಲು ಚಳಿ ಬಂದಾಗಲು" (2-22) ಆಗುವ ಮನುಷ್ಯನ ಬವಣೆಯನ್ನೂ, "ಅತಿಸಾರ" (2-7) ದಂಥ ಕಾಯಿಲೆಗಳನ್ನೂ, "ಮೆಂಚ್ಚು ಮದ್ದು ತಲೆಗೆ ಏರಿ" (2-127) ಸರಳುವವರನ್ನೂ ಪುರಂದರದಾಸರು ಉಲ್ಲೇಖಿಸಿದ್ದಾರೆ. "ಕಷಾಯ" (2-92) ಜಾನಪದರು ಸಾಮಾನ್ಯವಾಗಿ ಬಳಸುವ ದಿವ್ಯೌಷಧ. ವೇಂಕಟೇಶ್ವರನೇ ಭವರೋಗಕ್ಕೆ ವೈದ್ಯ ಎಂಬ ನಂಬಿಕೆಯನ್ನು (3-142) ದಾಸರು ನಮ್ಮ ಮುಂದಿಟ್ಟಿದ್ದಾರೆ. ವೈದ್ಯದಲ್ಲಿ ಬಳಸುವ ವಿವಿಧ ಔಷಧಗಳ ಬದಲಿಗೆ ದೇವರ ನಾಮಗಳನ್ನು ಬಳಸುವ ಉಲ್ಲೇಖವೂ ಇದೆ.

ಇದಕೊಳ್ಳಿ ಭವರೋಗಕೌಷಧವನು
ಇಂದ್ರಿಯವ ಜೈಸುವುದೆ ಇದಕೆ ಇಚ್ಛಾಪಥ್ಯ
ವಾಸುದೇವನ ನಾಮ ವಾತವಿಧ್ವಂಸಿನೀ
ಜನಾರ್ದನನ ನಾಮ ಜ್ವರಾಂಕುಶ
ಮಾಧವನ ನಾಮವೇ ಮನಗಂಡ ಮಂಡೂರ
ಮಂಗಳಾತ್ಮನ ನಾಮ ಮಾಲ್ಯವಸಂತ
ಚಿಂತಾಯಕನ ನಾಮ ತ್ರೈಲೋಕ್ಯ ಚಿಂತಾಮಣಿ
ಭುಜಗಶಯನನ ನಾಮ ಭೂಪತಿ ಮಾತ್ರೆ
ರಾಜೀವಲೋಚನನನಾಮ ರಸಕರ್ಪೂರ
ಸೀತಾಪತಿಯ ನಾಮ ದಿವ್ಯ ಸಿಂಧೂರ

---

[1] ಮಗಡು ವಿಡಿಚಿನಾ ಮಾಮು ವಿಡುವನಿಯಟ್ಲು
ನಗಿನಾ ಮನಸು ರೋಸಿನಾ ಲೋಕುಲು ಮಾನರು
ತಗಿಲೇರು ಪೊಗಿಲೇರು ದೈನ್ಯಮೇ ಚೂಪೇರು
ಮೊಗಮೋಟಲನು ನೇನು ಮೋಸಪೋವ ನೋಪನು (8-220).

ಎಂದು ಹೇಳುತ್ತಾ ತಾಮ್ರಭಸ್ಮ, ಲೋಹಭಸ್ಮ, ವಂಗಭಸ್ಮ, ಸ್ವರ್ಣಭಸ್ಮ, ವಸಂತ ಕುಸುಮಾಕರ, ಕರ್ಣಚೂರ್ಣ ಇತ್ಯಾದಿಗಳನ್ನು (ಉ. ಪ್ರ., ಭಾಗ 4, ಪು. 81) ಉಲ್ಲೇಖಿಸಿದ್ದಾರೆ.

ವಿಷ್ಣುನಾಮ ಸಂಕೀರ್ತನವೇ ಪರಮೌಷಧವೆಂದು ನಿರೂಪಿಸಿದ ಕೀರ್ತನೆಗಳು ಅನ್ನಮಾಚಾರ್ಯರಲ್ಲೂ ಇವೆ. "ಎಲ್ಲಕ್ಕೂ ಇದು ಪರಮೌಷಧ, ವಿಷ್ಣುನಾಮವೇ ವಿಮಲೌಷಧ....ಬಂಧ ವಿಮೋಚನಕ್ಕೆ ಚಿತ್ರಜ ಗುರುವೇ ಸಿದ್ಧೌಷಧ."[1] ಕಾಡು ಬೆಟ್ಟಗಳಿಂದ ಮೂಲಿಕೆಗಳನ್ನು ತಂದು ಮಾರುವವರು ಇದ್ದಾರೆ. ಇಂಥವರನ್ನು ನಾವು ಇಂದೂ ಕಾಣುತ್ತಿರುತ್ತೇವೆ. "ಆಡವಿಮದ್ದು, ಕಷಾಯ ಎಲ್ಲರೂ ಕೊಳ್ಳುತ್ತಿರಲಿ, ನಮಗೆ ಈ ಲೋಕದಲ್ಲಿ ಒಂದು ಔಷಧಿ ಸಿಕ್ಕಿತು, ಲಲಿತರಸ, ತೈಲ ಎಲ್ಲರೂ ಕೊಳ್ಳುತ್ತಿರಲಿ, ಚೆಲುವಾದ ಔಷಧಿಯೊಂದು ನಮಗೆ ಸಿಕ್ಕಿತು"[2] ಎಂದು ವೇಂಕಟೇಶ್ವರನ ದಿವ್ಯ ನಾಮವನ್ನು ಕೀರ್ತಿಸಿದ್ದಾರೆ. ಈ ಕೀರ್ತನೆಯಲ್ಲಿ ಆಡವಿಯ ಮದ್ದು, ಕಷಾಯ, ಲಲಿತ ರಸ, ತೈಲ ಇತ್ಯಾದಿ ವೈದ್ಯಕ್ಕೆ ಸಂಬಂಧಿಸಿದ ವಿಷಯವಿದೆ.

ವೈರಾಗ್ಯ ಭಾವನೆಯನ್ನು ಉಂಟುಮಾಡಲು ನೆತ್ತರು, ಕೀವು, ಹುಣ್ಣುಗಳಿಂದ ಕೂಡಿದ ದೇಹದ ಬಣ್ಣನೆಯನ್ನು ಹೇಳುವುದು ಸಂಪ್ರದಾಯ. ಇಂಥ ಶರೀರದ ರೋಗಗಳನ್ನು ಹೋಗಲಾಡಿಸಿ ಮುಕ್ತಿ ನೀಡು ಎಂದು ಭಗವಂತನನ್ನು ಕೀರ್ತಿಸುವುದುಂಟು. "ಜೀವಿಗಳಿಗೆ ಹುಣ್ಣು ಹುಟ್ಟದಿರದು, ಹುಣ್ಣುಮಾಗಲು ಔಷಧಿಕೊಡು. ನೆತ್ತರು ಎಲುಬು ತುಂಬಿದ ಹುಣ್ಣ ನಿತ್ಯ ಬಿಸಿನೀರಲ್ಲಿ ತೊಳೆದರೂ ಮತ್ತೆ ಉಬ್ಬುವುದು, ಆದು ವಾಸಿಯೇ ಆಗದು. ತಂಗಳು ಹಾಕಿ ಚೆನ್ನಾಗಿ ಕಟ್ಟಿದರೂ ಸೋರುವುದು ಕೀವು

---

[1] ಅನ್ನಿಟಿಕಿನಿದಿ ಪರಮೌಷಧಮು
ವೆನ್ನುನಿ ನಾಮಮೇ ವಿಮಲೌಷಧಮು....
ಬಂಧ ವಿಮೋಚನಂಬುನಕು ಚಿತ್ರಜ ಗುರುಡೇ ಸಿದ್ಧೌಷಧಮು
(ಅನ್ನ. ಸಂ., 2, ಪು. 19).

[2] ಆಡವಿ ಮಂದುಲು ಕಷಾಯಮುಲು ನೆಲ್ಲವಾರು
ಕಡಗಾನಕ ಕೊನಗಾನು
ತೊಡಿಬಡನೊಕ ಮಂದು ದೊರಕೆ ಮಾಕು....
ಲಲಿತ ರಸಮುಲು ತೈಲಮುಲು ನೆಲ್ಲವಾರು
ಕಲಕಾಲಮುಗೊನಗಾನು
ಚೆಲುವೈನ ದೊಕಮಂದು ಚೇರೆ ಮಾಕು ಭುವಿ.... (ಅಧ್ಯಾ. ಸಂ., 1, ಪು. 2).

ಒಂಬತ್ತು ತೂತುಗಳಿಂದ"[1] ಎಂದು ಭಯಂಕರವಾದ ದೇಹಬಾಧೆಯನ್ನು ಅನ್ನಮಾಚಾರ್ಯರು ನಿರೂಪಿಸಿದ್ದಾರೆ.

### ಧರ್ಮ

ಶೈವ, ವೈಷ್ಣವ, ಬೌದ್ಧ, ಜೈನ ಮುಂತಾದವನ್ನು ಧರ್ಮ ಎಂಬ ಹೆಸರಿನಲ್ಲಿ ಹೇಳುವುದುಂಟು. ಬೌದ್ಧಾದಿ ತಾತ್ತ್ವಿಕ ಚಿಂತನೆಗಳಿಗೆ ಹಿಂದಿನ ವಿದ್ವಾಂಸರು ದರ್ಶನವೆಂಬ ಹೆಸರಿಟ್ಟರು. ಶೈವ ವೈಷ್ಣವಾದಿ ಪಂಗಡಗಳನ್ನು ಮತ, ಪಂಥ, ದರ್ಶನ, ಧರ್ಮ ಎಂಬ ಹೆಸರುಗಳಿಂದಲೂ ಕರೆಯಲಾಗುತ್ತಿದೆ. ಧರ್ಮ ಎಂಬುದು ಇವೆಲ್ಲವನ್ನೂ ಮೀರಿ ಸಾರ್ವಕಾಲೀನ ಮತ್ತು ಸಾರ್ವಜನೀನ ಸೂತ್ರಗಳಿಂದ ಕೂಡಿದ ಶಾಶ್ವತ ಸತ್ಯ. ಆದರೆ ಈ ಎಲ್ಲ ಪಂಗಡಗಳೂ ಸರ್ವಮಾನವ ಸಮಾನ ಧರ್ಮಗಳನ್ನು ಕೂಡ ಹೇಳುವುದರಿಂದ ಕನ್ನಡದಲ್ಲಿ ಶೈವಧರ್ಮ, ವೈಷ್ಣವಧರ್ಮ ಮುಂತಾದ ಹೆಸರುಗಳು ರೂಢಿಗೆ ಬಂದಿವೆ. ಇಲ್ಲಿ ಮಾಧ್ವದರ್ಶನ, ವಿಶಿಷ್ಟಾದ್ವೈತ ದರ್ಶನ ಇತ್ಯಾದಿಗಳು ಹೇಳುವ ಕೆಲವು ಆಚಾರ, ನಂಬಿಕೆ, ಸಂಪ್ರದಾಯಗಳನ್ನು ಕುರಿತು ಹೇಳುವುದರ ಜೊತೆಗೆ ಸರ್ವರೂ ಒಪ್ಪುವ ಧರ್ಮಪ್ರಬೋಧವನ್ನೂ ಸೇರಿಸಲಾಗಿದೆ.

ಪ್ರಪಂಚದಲ್ಲಿ ಪ್ರಾಚೀನ, ಜಾನಪದೀಯ ಹಾಗೂ ನಾಗರಿಕ ಧರ್ಮಗಳು ಐದು ಸಾವಿರಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿವೆ. ಇವು ಬೇರೆಬೇರೆ ನಂಬಿಕೆ, ಆಚಾರ, ಸಂಪ್ರದಾಯ, ವಿಧಿನಿಷೇಧಗಳಿಂದ ಕೂಡಿವೆ. ಧಾರ್ಮಿಕ ಆಚರಣೆಗಳಲ್ಲಿ ಕೆಲವು ಸ್ವಭಾವಗಳ ಅಭಿವ್ಯಕ್ತಿಯನ್ನು, ಪವಿತ್ರೀಕರಣ ಪದ್ಧತಿಗಳನ್ನು, ನಿಷೇಧ, ಮಂತ್ರತಂತ್ರಾದಿಗಳನ್ನು ಕಾಣುತ್ತೇವೆ. ಇವುಗಳಲ್ಲಿ ಮತ್ತೆ ಉಪವಿಭಾಗಗಳೂ ಇರುತ್ತವೆ: ಮುಡಿಪು, ಸ್ತುತಿ, ಪೂಜೆ, ತೀರ್ಥಯಾತ್ರೆ, ಪವಿತ್ರಸ್ನಾನ, ವಿಭೂತಿ, ನಾಮ, ಗಂಧಪುಷ್ಪಾದಿಗಳ ಧಾರಣೆ ಇತ್ಯಾದಿ.

ಪರಮಾರ್ಥಪ್ರಾಪ್ತಿಗೆ ಸಾಧನಗಳಾದ ಹಲವು ವಿಧಾನಗಳಲ್ಲಿ ತುಂಬ ಮುಖ್ಯವಾದವು ಭಕ್ತಿ, ಕರ್ಮ ಮತ್ತು ಜ್ಞಾನ. ಇವು ಪುರಂದರದಾಸರಲ್ಲೂ ಅನ್ನಮಾಚಾರ್ಯ

[1] ಪುಂಡು ಜೀವುಲಕೆಲ್ಲ ಬುಟ್ಟಕ ಮಾನದು
ಪುಂಡು ಮಾನ ಮಂದು ವೋಯುಗದಯ್ಯ
ನೆತ್ತರು ನೆಮ್ಮುಲು ನಿಂಡಿನ ಪುಂಟಿಕ
ತಿತ್ತಿಲೋ ಸೋದಿಂಚನೇರಾ
ನಿತ್ತೆಮೂ ವೇ ನೀಳ್ಳ ಗಡಗಿನಾನು
ಮತ್ತಿಲಿ ಪುಬ್ಬು ಮಾನದೇಲಯಾ
ಚೆಲ್ಲಕೂಡು ಪೆಟ್ಟಿ ಚೆಲ್ಲಗಾ ಪೊತ್ತು
ಲೆಲ್ಲಬೆಟ್ಟಿ ಬಿಗಿಯಿಂಚಗಾನು
ಕಲ್ಲಗಾದು ಚೀಮುಗಾರು ತೊಮ್ಮಿದಿಗಂಡ್ಲ
ಪಿಲ್ಲಲಾಜಾಲ ಚೆಟ್ಟಗದಯ್ಯಾ (ಅಧ್ಯಾ. ಸಂ., 1, ಪು. 172).

ರಲ್ಲೂ ಸ್ಥಾನಪಡೆದಿವೆ. ಆದರೆ ಭಕ್ತಿ ಮತ್ತು ಜ್ಞಾನಮಾರ್ಗಗಳಿಗೆ ಅವರು ಹೆಚ್ಚಿನ ಪ್ರಾಧಾನ್ಯ ನೀಡಿರುವುದನ್ನು ಗಮನಿಸಬಹುದು. ಧರ್ಮದಲ್ಲಿ ವಿಶ್ವಾಸ ಮತ್ತು ಆಚರಣೆ ಎಂಬ ಎರಡು ಭಾಗಗಳಿರುತ್ತವೆ. ಒಂದು ಸಿದ್ಧಾಂತ ಭಾಗವಾದರೆ ಇನ್ನೊಂದು ಕ್ರಿಯಾತ್ಮಕ ಭಾಗ. ಇವುಗಳ ಪೈಕಿ ಎರಡನೆಯದೇ ಮುಖ್ಯವೆಂದು ಕೆಲವು ಧರ್ಮಶಾಸ್ತ್ರಜ್ಞರ ಅಭಿಪ್ರಾಯ. ಆದುದರಿಂದ ಭಕ್ತಿ ಮತ್ತು ಜ್ಞಾನಗಳಿಗೆ ಹೆಚ್ಚಿನ ಪ್ರಾಧಾನ್ಯ ನೀಡಿದರೂ ಧಾರ್ಮಿಕ ಅಸ್ತಿತ್ವಕ್ಕೆ ಬೇಕಾದ ಆಚರಣೆಗಳನ್ನು ಕುರಿತು ಕೂಡ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಅಲ್ಲಲ್ಲಿ ಪ್ರಸ್ತಾವಿಸಿದ್ದಾರೆ.

ಕರ್ನಾಟಕದ ಪ್ರಮುಖ ಧಾರ್ಮಿಕ ಚಟುವಟಿಕೆಗಳಲ್ಲಿ ಒಂದಾದ ಹರಿದಾಸಪಂಥದ ಮೂಲಸ್ತಂಭಗಳಲ್ಲಿ ಪುರಂದರದಾಸರೂ ಒಬ್ಬರು. ದೀಕ್ಷಾಸ್ವೀಕಾರ, ಮತಪ್ರಚಾರ, ಧಾರ್ಮಿಕ ಚಳವಳಿಯ ನಾಯಕತ್ವ ಮುಂತಾದವುಗಳ ದೃಷ್ಟಿಯಿಂದ ಪುರಂದರದಾಸರು ಅನ್ನಮಾಚಾರ್ಯರಿಗಿಂತ ಭಿನ್ನವಾಗಿ ಕಾಣುತ್ತಾರೆ. ದಾಸರು ಒಂದು ಪಂಥದ ಒಟ್ಟು ಅಭಿಪ್ರಾಯಗಳನ್ನು ವ್ಯಕ್ತಮಾಡಿದವರು. ಆಚಾರ್ಯರು ತಮ್ಮವೇ ಆದ ಭಾವಗಳನ್ನು ಕೀರ್ತನೆಗಳ ಮೂಲಕ ಅಭಿವ್ಯಕ್ತಗೊಳಿಸುವುದೇ ಜೀವನದ ಗುರಿ ಎಂಬಂತೆ ಸಾರಸ್ವತ ಸೃಷ್ಟಿಮಾಡಿದವರು. ಇವರಿಬ್ಬರ ದರ್ಶನದಲ್ಲೂ ವ್ಯತ್ಯಾಸವಿದೆ. ಒಬ್ಬರಿಗೆ ಮಾಧ್ವಮತ ದಲ್ಲಿ ಅಗಾಧ ವಿಶ್ವಾಸವಾದರೆ, ಇನ್ನೊಬ್ಬರಿಗೆ ವಿಶಿಷ್ಟಾದ್ವೈತ. ಈ ಹಿನ್ನೆಲೆಯಲ್ಲಿ ಇವರ ಧಾರ್ಮಿಕ ದೃಷ್ಟಿಯನ್ನು ಪರಿಶೀಲಿಸಬೇಕಾಗಿದೆ.

ದ್ವೈತ ಸಂಪ್ರದಾಯದ ಗುರುಪರಂಪರೆ ಮಧ್ವಾಚಾರ್ಯರಿಗಿಂತಲೂ (ಕ್ರಿ. ಶ. 1119-1276) ಹಿಂದೆ ಅಂದರೆ ಸುಮಾರು ನಾನೂರು ವರ್ಷಗಳ ಹಿಂದಿನಿಂದಲೂ ಇತ್ತು. ಇದಕ್ಕೆ ಕೃಷ್ಣಭಕ್ತಿ ಸೇರಿ ಹರಿದಾಸಪಂಥ ಕರ್ನಾಟಕದಲ್ಲಿ ಒಂದು ಪ್ರಭಾವಶಾಲಿ ಭಕ್ತಿ ಪಂಥವಾಗಿ ಬೆಳೆದುಬಂದಿತು. ಶ್ರೀಹರಿಯೇ ಸರ್ವೋತ್ತಮ ಎಂಬ ದೃಢ ವಿಶ್ವಾಸ ಇವರದು.

## ಹರಿದಾಸ

"ಹರಿದಾಸ" ಎಂಬುದು ಪಾರಿಭಾಷಿಕ ಶಬ್ದವಾಗಿ ಕರ್ನಾಟಕದಲ್ಲಿ ವಿಶಿಷ್ಟ ಅರ್ಥ ವನ್ನು ಪಡೆದುಕೊಂಡಿದೆ. ಶ್ರುತಿ ಸ್ಮೃತಿ ಪುರಾಣ ಇತಿಹಾಸಗಳಲ್ಲಿ ನಂಬಿಕೆ ಇಡುವುದು, ಹರಿಸೇವೆಗೆ ಜೀವನ ಮೀಸಲಾಗಿಡುವುದು, ಗುರುಗಳಿಂದ ಅಂಕಿತ ಸ್ವೀಕರಿಸುವುದು ಮುಂತಾದವನ್ನು ಹರಿದಾಸಲಕ್ಷಣಗಳೆಂದು ಹೇಳಬಹುದು.

ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ ದಾಸಕೂಟ ಮತ್ತು ವ್ಯಾಸಕೂಟಗಳು ವಿಶಿಷ್ಟಾರ್ಥ ಪಡೆದಿವೆ. ದಾಸಕೂಟ ಮಧ್ವಾಚಾರ್ಯರ ಕಾಲಕ್ಕಿಂತ ಮೊದಲೇ ಇತ್ತೆಂಬ ಅಭಿಪ್ರಾಯವಿದ್ದರೂ ಶ್ರೀಪಾದರಾಯರು ಇದಕ್ಕೆ ಒಂದು ಸ್ಥಿರರೂಪ ಕೊಟ್ಟರೆಂದೂ ಹೇಳಬಹುದು. ಮಧ್ವಾಚಾರ್ಯರ ಕಾಲದಿಂದ ಶ್ರೀಪಾದರಾಯರ ಕಾಲದ ತನಕದ ಸುಮಾರು ಇನ್ನೂರು ವರ್ಷಗಳಲ್ಲಿ ದಾಸಕೂಟ ಸ್ಥಾಪನೆಗೆ ಬೇಕಾದ ಪರಿಸ್ಥಿತಿಗಳು

ಅನುಕೂಲವಾಗುತ್ತಾ ಬಂದುವು. 13ನೆಯ ಶತಮಾನ ಭಾರತದ ಭಕ್ತಿಪಂಥದ ಕಾಲ. ಪಂಡಿತರಿಗೆ ವೇದ್ಯವಾಗಿದ್ದ ಸಂಸ್ಕೃತದ ಧಾರ್ಮಿಕ ಸಾಹಿತ್ಯವನ್ನು ದೇಶೀಯ ಭಾಷೆಗಳಿಗೆ ಪರಿವರ್ತಿಸುವ ಪ್ರಯತ್ನಗಳೂ ಆಗ ನಡೆದುವು. ಅಂದಿನಿಂದ ಸುಮಾರು ಎರಡು ಶತಮಾನ ಪರ್ಯಂತ ವೀರಶೈವ, ಅದ್ವೈತ, ವಿಶಿಷ್ಟಾದ್ವೈತ ಮುಂತಾದ ಅನೇಕ ಪಂಥಗಳು ತಮ್ಮವೇ ಆದ ಪ್ರಭಾವವನ್ನು ಬೀರಲು ಸರ್ವ ಪ್ರಯತ್ನಗಳನ್ನೂ ನಡೆಸು ತ್ತಿದ್ದುವು. ಈ ಹಿನ್ನೆಲೆಯಲ್ಲಿ ಶ್ರೀಪಾದರಾಯರು ದಾಸಕೂಟಕ್ಕೆ ಸ್ಥಿರವಾದ ನೆಲೆ ತಂದುಕೊಟ್ಟರು. ಅದನ್ನು ಉನ್ನತಿಗೇರಿಸಿದ ದಾಸವರೇಣ್ಯರಲ್ಲಿ ಪುರಂದರದಾಸರೂ ಒಬ್ಬರು.

ಹರಿದಾಸಕೂಟದ ಕೆಲವು ಆದ್ಯರನ್ನು ವಿಜಯದಾಸರು ಉಲ್ಲೇಖಿಸಿದ್ದಾರೆ. ಈ ಆದ್ಯರು ಭಾಗವತ ಸಂಪ್ರದಾಯದ ಸ್ಮಾರ್ತಭಕ್ತರೆನ್ನಲಾಗಿದೆ. ಇವರ ಬಗೆಗೆ ಒಂದು ಐತಿಹ್ಯವಿದೆ. ಶಿವಭಕ್ತರಾದ 72 ಮಂದಿ ಆದ್ಯರು ವಿಷ್ಣುದೇವಾಲಯವನ್ನೇ ನೋಡ ಬಾರದೆಂದು ಪ್ರತಿಜ್ಞೆಮಾಡಿ ಕಾಶೀಯಾತ್ರೆಮಾಡುತ್ತಾ ಪಂಢರಾಪುರಕ್ಕೆ ಬಂದರು. ಪಾಂಡುರಂಗನ ದರ್ಶನವಾಗಬಾರದೆಂದು ಕಣ್ಣುಕಟ್ಟಿಕೊಂಡು ಸ್ನಾನ ಮಾಡುತ್ತಿದ್ದರಂತೆ! ಅವರು ಸ್ನಾನ ಮುಗಿಸಿ ಎದ್ದಾಗ ಎದುರಿಗೆ ಪಾಂಡುರಂಗ ಮೂರ್ತಿ ಪ್ರತ್ಯಕ್ಷವಾಯಿತಂತೆ! ಅಂದಿನಿಂದ ಅವರು ವೈಷ್ಣವರಾಗಿ ವಿಠಲಭಕ್ತರಾದರು. ಇವೆಲ್ಲ ಮತಪ್ರಚಾರದ ಉದ್ದೇಶದಿಂದ ಕಟ್ಟಿದ ಕಥೆಗಳಂತೆ ಕಾಣುತ್ತವೆ. ಇಂಥ ಐತಿಹ್ಯಗಳು ಚಕ್ರಪಾಣಿ ರಂಗನಾಥನಂಥ ಭಕ್ತರ ಬಗೆಗೂ ಪ್ರಚಾರದಲ್ಲಿವೆ.[1] ಹರಿದಾಸ ಪರಂಪರೆಯಲ್ಲಿ ಆದ್ಯರಿದ್ದ ರೆಂಬ ವಿಷಯ ಅನ್ನಮಾಚಾರ್ಯರ ಮೊಮ್ಮಗನಾದ ಚಿನ್ನನ್ನನಿಗೂ ತಿಳಿದಿತ್ತೆಂಬುದನ್ನು ಇಲ್ಲಿ ಪ್ರಸ್ತಾವಿಸಬಹುದು.[2]

ಹರಿದಾಸರ ವೇಷಭೂಷಣ, ಆಚಾರ ಸಂಪ್ರದಾಯ, ಭಜನೆ ಕೀರ್ತನಾದಿಗಳನ್ನು ಕುರಿತಂತೆ ಪುರಂದರದಾಸರು ತಮ್ಮ ಅನೇಕ ಕೀರ್ತನೆಗಳಲ್ಲಿ ಪ್ರಸ್ತಾವಿಸಿದ್ದಾರೆ. ಪ್ರಾರಂಭ ಕಾಲದಲ್ಲಿ ದಾಸರ ವೇಷಭೂಷಣಗಳಿಗೆ ಒಗ್ಗದೆ ಅನಂತರ ಹರಿಭಕ್ತಿವಾಹಿನಿಯಲ್ಲಿ ಮಿಂದು ಅವನ್ನೆಲ್ಲ ಅಳವಡಿಸಿಕೊಂಡ ದಾಸರ ಚಿತ್ರ ಕೀರ್ತನೆಯಲ್ಲಿ ಕಾಣುತ್ತದೆ :

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ತಗ್ಗಿಸಿ ನಾಚುತಲಿದ್ದೆ....
ಗೋಪಾಳಬುಟ್ಟಿ ಹಿಡಿಯುವುದಕ್ಕೆ
ಭೂಪತಿಯಂತೆ ನಾಚುತಲಿದ್ದೆ....

---

[1] ಶ್ರೀಶೈಲ ಮಲ್ಲಿಕಾರ್ಜುನನನ್ನು ನೋಡಲಿಚ್ಛಿಸದೆ ಕುರುಡನಾಗಿ, ಮತ್ತೆ ಶಿವಸ್ತುತಿ ಮಾಡಿ ಕಣ್ಣು ಪಡೆದ ಐತಿಹ್ಯ.

[2] ಗದ್ಯಪದ್ಯಗಳಿಂದ 72 ಜನ ಆದ್ಯರಿಂದ ಹೊಗಳಿಸಿಕೊಂಡ ರಸಿಕನಾದ ಶ್ರೀಪಂಡರಂಗ ವಿಠಲನನ್ನು ಚಿನ್ನನ್ನನ 'ಅನ್ನಮಾಚಾರ್ಯ ಚರಿತ್ರಮು' ಉಲ್ಲೇಖಿಸಿದೆ.

ತುಳಸೀಮಾಲೆ ಹಾಕುವುದಕ್ಕೆ
ಅಲಸಿಕೊಂಡು ನಡೆಯುತಲಿದ್ದೆ....(6-111).

ಪುರಂದರದಾಸರ ಆತ್ಮಾಭಿವ್ಯಕ್ತಿಯ ಚಿತ್ರದೊಂದಿಗೆ ಹರಿದಾಸರ ವೇಷದ ಚಿತ್ರವನ್ನೂ ಈ ಕೀರ್ತನೆ ನೀಡುತ್ತದೆ. ಹರಿದಾಸ ಪರಂಪರೆಯಲ್ಲಿ ಬಾಹ್ಯಾಲಂಕಾರ, ಆಚಾರ ಮತ್ತು ಅಂತರಂಗಶುದ್ಧಿ ಇತ್ಯಾದಿಗಳ ಪ್ರಾಧಾನ್ಯವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪುರಂದರದಾಸರು ಹಲವಿಡೆ ಪ್ರಸ್ತಾವಿಸಿದ್ದಾರೆ. "ಊರ್ಧ್ವ ಪುಂಡ್ರವಿಲ್ಲದ ಮುಖವ ತಿದ್ದಿ ನೋಡಲೇಕೋ, ಶುದ್ಧ ಸಾತ್ವಿಕವಿಲ್ಲದವನ ಬುದ್ಧಿ ಏತಕೊ....ಮೃತ್ತಿಕೆ ಶೌಚವಿಲ್ಲದವಗೆ ಮತ್ತೆ ಸ್ನಾನ ಜಪವೇಕೋ, ಹಸ್ತಕಟ್ಟಲರಿಯ ದವಗೆ ಅಗ್ನಿಹೋತ್ರವೇಕೋ....ಕರ್ತೃಕೃಷ್ಣನ ನೆನೆಯದವನ ಉತ್ತಮತನವೇಕೊ" (2-100) ಎಂಬಲ್ಲಿ ವೇಷ, ಅಂತರಂಗಶುದ್ಧಿ, ಶಾಸ್ತ್ರಜ್ಞಾನ, ಆಚಾರ ಮತ್ತು ಕೃಷ್ಣ ಭಕ್ತಿಗಳಿಂದ ಕೂಡಿದ ಹರಿದಾಸರ ಲಕ್ಷಣವನ್ನು ಹೇಳಲಾಗಿದೆ.

ಬಾಹ್ಯಾಡಂಬರಗಳಿಗೆ ಪುರಂದರದಾಸರು ಪ್ರಾಧಾನ್ಯ ಕೊಡುವವರಲ್ಲ ಎಂಬುದು ಅನೇಕ ಕೀರ್ತನೆಗಳಿಂದ ವ್ಯಕ್ತವಾಗುತ್ತದೆ. ಬರಿ ವೇಷದಿಂದ ಮೋಸಮಾಡುವ ವ್ಯಕ್ತಿ ಗಳನ್ನು ಅವರು ತಿರಸ್ಕರಿಸಿ ಅಂಥವರು ದಾಸರೆಂತಾಗುವರು ಎಂದು ಪ್ರಶ್ನಿಸಿದ್ದಾರೆ: "ಗೂಟನಾಮವ ಹೊಡೆದು ಗುಂಡು ತುಂಬಿಗೆ ಹಿಡಿದು ಗೋಟುಂಚು ದೋತರ ಮುಡಿಯ ನುಟ್ಟು....ದಾಸನೆಂತಾಗುವನು" (ಹ. ಕೀ. ತ., ಪು. 320).

## ಮಧ್ವದರ್ಶನ

"ಮತದೊಳಗೆ ಒಳ್ಳೆಮತ ಮಧ್ವಮತವು ರಘುಪತಿ ಪೂಜಾವಿಧಾನಕೆ ಪಾವನ ಮತವು" (3-37) ಎಂದು ತಾವು ನಂಬಿದ ಮತದ ಹಿರಿಮೆಯನ್ನು ಪುರಂದರದಾಸರು ಸಾರಿದ್ದಾರೆ. "ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಡಬೇಡಿ, ಹರಿ ಸರ್ವೋತ್ತಮನೆಂದೆಂಬ ಜ್ಞಾನವ ತಾರತಮ್ಯದಲಿ ತಿಳಿವ ಮಾರ್ಗವಿದು (3-35) ಎಂಬಲ್ಲಿ ಮಧ್ವದರ್ಶನದ ತಿರುಳನ್ನು ಸಂಗ್ರಹಿಸಿ ಹೇಳಿದ್ದಾರೆ.

ಮಧ್ವಾಚಾರ್ಯರಿಂದ ಪ್ರತಿಪಾದಿತವಾಗಿ ಪ್ರಚಾರಕ್ಕೆ ಬಂದ ಮಧ್ವಮತದ ಪ್ರಕಾರ ಜೀವಾತ್ಮ ಪರಮಾತ್ಮಗಳಿಗೆ ಪ್ರತ್ಯೇಕ ಅಸ್ತಿತ್ವವಿದೆ. ಇವೆರಡಕ್ಕೂ ಈಶ ದಾಸ ಭಾವವಿದೆ. ಪರಮಾತ್ಮನಾದ ಹರಿ ಸರ್ವೋತ್ತಮ, ನಿಖಿಲರಕ್ಷಕ, ವಿಶ್ವವ್ಯಾಪಕ. ಜೀವಾತ್ಮ ಸಂಸಾರದಲ್ಲಿದ್ದುಕೊಂಡು ಪ್ರಕೃತಿಗೆ ಬದ್ಧನಾಗುತ್ತಾನೆ. ದೇವ, ಋಷಿ, ಪಿತೃ, ಚಕ್ರವರ್ತಿ ಮತ್ತು ನರ ಎಂಬ ಹೆಸರಿನ ಐದು ತರಹದ ಸಾತ್ವಿಕ ಜೀವಗಳಿವೆ. ಇವಲ್ಲದೆ ರಜಸ್ಸು ಮತ್ತು ತಮಸ್ಸುಗಳಿಗೆ ಸಂಬಂಧಿಸಿದ ಮಧ್ಯಮ ಹಾಗೂ ಅಧಮ ಜೀವಿಗಳೂ ಇರುತ್ತವೆ. ಸೃಷ್ಟಿ ಎಂಬುದು ಸತ್ಯ, ಸೃಷ್ಟಿಯ ವಿವಿಧ ಅಂಗಗಳ ನಡುವಿನ ವ್ಯತ್ಯಾಸವೂ ಸತ್ಯ. ಭಕ್ತಿ ಮತ್ತು ಶ್ರೀಹರಿಪ್ರಸಾದ ಇಲ್ಲದೆ ಮುಕ್ತಿ ಪಡೆಯಲು ಸಾಧ್ಯವಿಲ್ಲ.

ಪುರಂದರದಾಸರ ಮಧ್ವದರ್ಶನ ಕೇವಲ ಆಧ್ಯಾತ್ಮಿಕ ಮನೋಭಾವದಿಂದ ಮೂಡಿ ಬಂದದ್ದಲ್ಲ. ವೇದೋಪನಿಷತ್ತುಗಳ ಸಾರವನ್ನು ಅರಗಿಸಿಕೊಂಡು, ವಿಚಾರಮಂಥನಮಾಡಿ ಆಧ್ಯಾತ್ಮಿಕ ಅಭಿವ್ಯಕ್ತಿಗೆ ನೀತಿಯ ದೃಷ್ಟಿಯನ್ನು ಕೊಟ್ಟಿರುವುದು ಕಂಡುಬರುತ್ತದೆ.

ಗುರುಮಧ್ವರನ್ನು ಕುರಿತು ಪುರಂದರದಾಸರಲ್ಲಿ ಹಲವಾರು ಕೀರ್ತನೆಗಳಿವೆ. ಮಧ್ವರ ಕೃಪೆಯಿಂದ "ಚಿಂತೆಯಿಲ್ಲದೆ ಅತಿ ಸುಲಭದಿಂದಲಿ ಶ್ರೀಕಾಂತನ ಕಾಣಲಿಕ್ಕಾಯಿತುಪಾಯು" (1-7) ಎಂದು ಕೃತಜ್ಞರಾಗಿ ಮಧ್ವಾಚಾರ್ಯರನ್ನು ಸ್ಮರಿಸಿಕೊಂಡಿದ್ದಾರೆ.

ಮಧ್ವಮತದ ಪ್ರಾಶಸ್ತ್ಯವನ್ನು ಹೇಳಲು ಭಿನ್ನಮತಗಳ ಸಾರವನ್ನು ಕೂಡ ಹೇಳಿದ್ದಾರೆ. ಅದ್ವೈತವನ್ನು ಕುರಿತು ಹೇಳುತ್ತಾ–

ಜಗತು ಸತ್ಯವು ಅಲ್ಲ ಜಡಜೀವ ಭೇದವಲ್ಲ
ಅಗುಣನು ಪರಬೊಮ್ಮನು
ಹೀಗೆ ನುಡಿವ ಜನರ ನಿಗಮಶಾಸ್ತ್ರದಿ ಗೆದ್ದು
ಜಗ ಸತ್ಯ ಸಗುಣಬ್ರಹ್ಮ ಎಂದು ಪೇಳುವ
ಹರಿ ಸರ್ವೋತ್ತಮನಿತ್ಯ ...
ಈ ಪರಿ ತಾರತಮ್ಯ ಜಪಧ್ಯಾನಾರ್ಚನೆಯಿಂದ
ಅಪವರ್ಗದ ಸೇವೆಯ ಮಾಡಿರೊ....
ಇಂದಿರಾರಮಣ ಗೋವಿಂದನೇ ದೈವ (1-31)

ಎಂದಿದ್ದಾರೆ. ಮಧ್ವಮತದ ಪ್ರಕಾರ "ಸತ್ಯ ಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ ಕೃತ್ಯತಿಳಿದು ತಾರತಮ್ಯದಿ ಕೃಷ್ಣನಧಿಕ" (1-5). ಕೆಲವು ಕಡೆ ಬೇರೆ ಮತವನ್ನು ಸ್ವಲ್ಪಕಟುವಾಗಿ ಟೀಕಿಸಿದ್ದೂ ಉಂಟು :

ಜೀವೇಶರೈಕ್ಯವು ಜಗತು ಮಿಥ್ಯವೆಂದು
ಈ ವಿಧ ಪೇಳುವ ಮಾಯಿಗಳನಳಿಯೆಂದು
ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇಯೆಂಬ
ಕ್ಷುಲ್ಲಕರನು ಹಿಡಿದು ಹಲ್ಗಳ ಮುರಿಯೆಂದು. (1-25).

ಪುರಂದರದಾಸರು ಕೆಲವು ಕಡೆ ವಿಶಿಷ್ಟಾದ್ವೈತ ಮತದ ಬಗೆಗೆ ಸಂಗ್ರಹವಾಗಿ ಹೇಳಿದರೆ ಇನ್ನು ಕೆಲವು ಕಡೆ "ಸುಮ್ಮನೆ ವೈಷ್ಣವನೆಂದಿರಿ ಪರಬ್ರಹ್ಮ ಸುಜ್ಞಾನವನರಿಯಂದ ಮನುಜನ ಮುಖವ ತೊಳೆದು ನಾಮವಿಟ್ಟವನಲ್ಲದೆ ವಿಂಕಶಾಸ್ತ್ರಂಗಳ ನೋಡಿದನೆ" (5-73) ಎಂದು ಟೀಕಿಸಿದ್ದಾರೆ.

ಪುರಂದರದಾಸರ ಕಾಲಕ್ಕೆ ವೈದಿಕ ಮತದಲ್ಲಿ ಅನೇಕ ಪಂಗಡಗಳೇರ್ಪಟ್ಟಿದ್ದವು. ಅಂಥವುಗಳಾದ ಶೈವವೈಷ್ಣವಾದಿಗಳಲ್ಲೂ ಒಳಪ್ರಭೇದಗಳುಂಟಾಗಿ ಒಬ್ಬರಿಗೊಬ್ಬರಿಗೆ ಒಳಜಗಳಗಳಾಗುತ್ತಿದ್ದವು. "ಪಾಷಂಡರ ಕೂಡೆ ಕಾಳೆಗ, ವಿಷ್ಣುದ್ವೇಷಿಗಳ ಕೂಡೆ ಕಾಳೆಗ ಕಾಳೆಗ ಕಾಳೆಗ ನಾಸ್ತಿಕರ ಕೂಡೆ, ಕಾಳೆಗ ಹರಿಡಂಭಕರ ಕೂಡೆ, ಪುರಂದರವಿಠಲ ಮೆಚ್ಚಿ

ಕಾದಿಸಿ ಕಾದಿಸಿ ನಮ್ಮನೆ ಗೆಲಿಸುವ" (5-151) ಎಂದು ತಮ್ಮ ಮಂತದಲ್ಲಿ ಗಾಢ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ.

ವಿಷ್ಣು ಸರ್ವೋತ್ತಮನೆಂದು ಸಾರುವಾಗ ಅದನ್ನು ದಾಸರು ಮೂರು ಹಂತಗಳಲ್ಲಿ ಪ್ರತಿಪಾದಿಸಿರುವುದನ್ನು ಗಮನಿಸಬಹುದು. ಕೆಲವು ಕೀರ್ತನೆಗಳಲ್ಲಿ ಸಗುಣತ್ವ, ಕೆಲವು ಕೀರ್ತನೆಗಳಲ್ಲಿ ಸಗುಣತ್ವ-ನಿರ್ಗುಣತ್ವ, ಕೆಲವು ಕೀರ್ತನೆಗಳಲ್ಲಿ ನಿರ್ಗುಣತ್ವ ಕಂಡು ಬರುತ್ತವೆ. ಸಾಕಾರಮೂರ್ತಿಯನ್ನು ವರ್ಣಿಸುವಾಗ–

ಮೂರುತಿಯನೆ ನಿಲ್ಲಿಸೊ ಮಾಧವ ನಿನ್ನ
ಎಳೆತುಳಸಿಯ ವನಮಾಲೆಯ ಕೊರಳೊಳು
ಹೊಳೆವ ಪೀತಾಂಬರದುಡೆಯುಲೊಪ್ಪುವ ನಿನ್ನ....
ಮುತ್ತಿನಹಾರ ನವರತ್ನದುಂಗುರ ಬೆರಳ
ಮುತ್ತೆ ಶ್ರೀಲಕುಮಿಯ ಉರದಲೊಪ್ಪುವ ನಿನ್ನ.... (1-58)

ಎಂದು ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿರುವಂತೆ ಬರೆದಿದ್ದಾರೆ. "ಸಗುಣನಾಗಬಲ್ಲ ನಿರ್ಗುಣನಾಗಬಲ್ಲ ಸಗುಣನಿರ್ಗುಣ ಎರಡೊಂದಾಗಬಲ್ಲ" (3-140) ಎಂದಾಗ ಸಗುಣ ನಿರ್ಗುಣಗಳ ಸಂಯೋಗ ಕಂಡುಬರುತ್ತದೆ. ದ್ವೈತ ಸಂಪ್ರದಾಯದಂತೆ ನಿರ್ಗುಣ ಶಬ್ದಕ್ಕೆ ಪ್ರಾಕೃತ ದೇಹರಹಿತ ಎಂದರ್ಥ. "ಜ್ಞಾನ ವಿಜ್ಞಾನ ಸುಗಂಧ ಸುಖದೇಹ ಆನಂದಮಯ ಮಯ್ಯ ಪುರಂದರವಿಠಲನ ಅವಯವಗಳೆಲ್ಲ"(3-137) ಎಂಬಲ್ಲಿ ಪರಮಾತ್ಮನ ಅಪ್ರಾಕೃತ ಸೌಂದರ್ಯವನ್ನು ಹೇಳಿದಂತಾಯಿತು. "ಮೋದದಕ್ಷಿಣಪಕ್ಷ, ಪ್ರಮೋದ ಉತ್ತರಪಕ್ಷ ಆನಂದ ಆತುಮ ಆನಖ ಪಾದ, ಪುರಂದರವಿಠಲ ಅಪ್ರಾಕೃತ ವಿಗ್ರಹ" (3-140) ಎಂದಿದ್ದಾರೆ.

## ಭಕ್ತಿ

ಪರಮಾರ್ಥ ಪ್ರಾಪ್ತಿಯ ಸಾಧನಗಳಲ್ಲಿ ಭಕ್ತಿ ಅತಿಮುಖ್ಯವಾದುದು. ಇದು ಜ್ಞಾನ, ಕರ್ಮಗಳನ್ನು ಒಳಗೊಳ್ಳುತ್ತದೆ. ಈ ಮೂರೂ ಪರಸ್ಪರಾವಲಂಬಿಗಳೇ. ಭಕ್ತಿ ಸರಳವೂ ಸುಲಭವೂ ಆದ ಮಾರ್ಗ. ಪರಮಾತ್ಮನನ್ನು ನವವಿಧಭಕ್ತಿಗಳಿಂದ ಸ್ತುತಿಸಿ [1] ತಮಗೆ ಆ ಮಾರ್ಗದ ಮೇಲಿರುವ ಒಲವನ್ನು ತೋರಿಸಿಕೊಟ್ಟಿದ್ದಾರೆ. ಕಾವ್ಯದಲ್ಲಿ ಬರುವ ಮುಖ್ಯರಸಗಳಲ್ಲಿ ಭಕ್ತಿಯೂ ಸೇರುತ್ತದೆಂದು ಕೆಲವರ ಅಭಿಪ್ರಾಯ. ಭಕ್ತಿರಸ ಅತ್ಯಂತ ಶ್ರೇಷ್ಠವಾದುದೆಂದೂ ಇದನ್ನು ಸಮರಸ ಎಂದು ಹೇಳಬೇಕೆಂದೂ ಭಕ್ತಿರಸ ಪ್ರತಿಪಾದಕರು ಭಾವಿಸಿದ್ದಾರೆ. ಸರ್ವಸಮರ್ಪಣ ಮನೋವೃತ್ತಿ ಈ ರಸದಲ್ಲಿ ಕಂಡು

---

[1] ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮ ನಿವೇದನ ಎಂಬ ಒಂಬತ್ತುಭಕ್ತಿಯನ್ನು ಒಂದು ಕೀರ್ತನೆಯಲ್ಲಿ ಅಳವಡಿಸಿ ದಾಸರು ಹೇಳಿದ್ದಾರೆ (3-1).

ಬರುತ್ತದೆ. ಇವರಲ್ಲಿರುವ ಹನ್ನೊಂದು ಭಾವಗಳನ್ನು ಪುರಂದರದಾಸರು ಅಲ್ಲಲ್ಲಿ ಹೇಳಿದ್ದಾರೆ. ಅವೆಂದರೆ: ರೂಪ, ಪೂಜಾ, ದಾಸ್ಯ, ಸ್ಮರಣ, ಸಖ್ಯ, ಶಾಂತ, ವಾತ್ಸಲ್ಯ, ಮಾಧುರ್ಯ, ಆತ್ಮನಿವೇದನ, ತನ್ಮಯ ಮತ್ತು ವಿರಹ. ಇವುಗಳ ಪೈಕಿ ದಾಸ್ಯ, ಸಖ್ಯ, ಶಾಂತ, ವಾತ್ಸಲ್ಯ ಮತ್ತು ಮಾಧುರ್ಯ ತುಂಬ ಪ್ರಮುಖವಾದವು. ಮೇಲಿನ ಹನ್ನೊಂದು ಭಾವಗಳ ಪೈಕಿ ಕೆಲವು ನವವಿಧ ಭಕ್ತಿಗಳಲ್ಲೂ ಸೇರಿವೆ.

ವಿಷ್ಣುನಾಮ ಸಂಕೀರ್ತನವೇ ಪುರಂದರದಾಸರ ಪರಮಗುರಿ. ಆದರೂ ಬೇರೆ ಬೇರೆ ದೇವತೆಗಳನ್ನು ಸ್ತುತಿಸಿರುವ ಕೀರ್ತನೆಗಳೂ ಹೇರಳವಾಗಿ ಸಿಗುತ್ತವೆ. ಗಣಪತಿ ಯಿಂದ ಹಿಡಿದು ಹಲವಾರು ದೇವತೆಗಳನ್ನು ಸ್ತುತಿಮಾಡಿ ಆಯಾ ದೇವತೆಗಳ ಸ್ವರೂಪಾಧಿಕಾರಗಳನ್ನು ನಿರೂಪಿಸಿದ್ದಾರೆ.

ಆದಿಯಲಿ ಗಜಮುಖನ ಅರ್ಚಿಸಿ ಆರಂಭಿಸಲು
ಆವ ಬಗೆಯ ಕಾರ್ಯತತಿ ಸಿದ್ಧಿಗೊಳಿಸಿ
ಮೋದದಿಂ ಸಲಿಸುವ ಮನದಿಷ್ಟವ
ಸಾಧು ಜನರೆಲ್ಲ ಕೇಳಿ ಸಕಲಸುರರಿಂಗೆ
ಮಾಧವನೆ ನೇಮಿಸಿಪ್ಪ ಈ ಅಧಿಕಾರವ (1-8)

ಎಂದು ಹೇಳುವಾಗ ಅವರ ಕಾಲದಲ್ಲೂ ಪೂಜಾವಿಧಾನಕ್ಕೆ ಮೊದಲು ಗಣಪತಿಯನ್ನು ಸೇವಿಸುವ ಸಂಪ್ರದಾಯವಿತ್ತು ಎಂಬುದನ್ನು ಸೂಚಿಸಿದ್ದಾರೆ.

ಮಧ್ವ ಸಂಪ್ರದಾಯಕ್ಕೆ ಅನುಸಾರವಾಗಿ ಹನುಮಂತನನ್ನು ಸ್ತುತಿಸುವ ಕೀರ್ತನೆಗಳು ಪುರಂದರದಾಸರಲ್ಲಿ ಹಲವಿವೆ. ''ಹೇಮಕುಂಡಲ ಹೇಮಯಜ್ಞೋಪವೀತಖಿಳ ಹೇಮ ಕಟಿಸೂತ್ರ ಕೌಪೀನಧಾರೀ, ಹನುಮಂತದೇವ ನಮೋ''(1-24) ಎಂದು ಹನುಮಂತನಿಗೆ ನಮನ ಸಲ್ಲಿಸಿದ್ದಾರೆ. ಮಾಧ್ವರಿಗೆ ಆರಾಧ್ಯರಾದ ಹನುಮಭೀಮಮಧ್ವರನ್ನು ಒಂದು ಕೀರ್ತನೆಯಲ್ಲಿ ಹೀಗೆ ವರ್ಣಿಸಿದ್ದಾರೆ:

ಕೂಸನು ಕಂಡಿರಾ ಮುಖ್ಯ ಪ್ರಾಣನ ಕಂಡಿರಾ
ಅಂಜನೆಯುದರದಿ ಹುಟ್ಟಿತು ಕೂಸು
ರಾಮನ ಪಾದಕ್ಕೆರಗಿತು ಕೂಸು
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು
ಬಕನ ಪ್ರಾಣವ ಕೊಂದಿತು ಕೂಸು
ವಿಷದ ಲಡ್ಡುಗೆ ಮೆದ್ದಿತು ಕೂಸು
ಮಡದಿಗೆ ಪುಷ್ಪವ ತಂದಿತು ಕೂಸು
ಮಾಯಾವಾದಿಗಳ ಗೆದ್ದಿತು ಕೂಸು
ಮಧ್ವಮತವನುದ್ಧರಿಸಿತು ಕೂಸು
ಮುದ್ದು ಶ್ರೀ ಪುರಂದರವಿಠಲನ ದಯದಿಂದ

ಉಡುಪಿಯಲ್ಲಿ ಬಂದು ನಿಂತಿತು ಕೂಸು (1-35).

ಹರಿಸರ್ವೋತ್ತಮನೆಂದು ಸಾರಿದ ಪುರಂದರದಾಸರು ಹರನನ್ನೂ ಸ್ತುತಿಸಿ ಕೀರ್ತನೆಗಳನ್ನು ಬರೆದಿದ್ದಾರೆ. "ಚಂದ್ರಚೂಡ ಶಿವಶಂಕರ ಪಾರ್ವತೀ ರಮಣಾ ನಿನಗೆ ನಮೋ ನಮೋ ಸುಂದರ ಮೃಗಧರ ಪಿನಾಕಧರಹರ ಗಂಗಾಧರ ಗಜಚರ್ಮಾಂಬರಧರ...." (1-12) ಎಂದು ಹಾಡಿದ್ದಾರೆ. ಶಿವನನ್ನು ಕರುಣಾನಿಧಿಯೆಂದು "ಕಂಡೆ ಕರುಣ ನಿಧಿಯ ಗಂಗೆಯ ಮಂಡೆಯೊಳಿಟ್ಟ ದೊರೆಯ ರುಂಡಮಾಲೆ ಸಿರಿಯ ನೊಸಲಿನೊಳು ಕೆಂಡಗಣ್ಣಿನ ಬಗೆಯ ಹರನ" (1-13) ಸ್ತುತಿಸಿದ್ದಾರೆ.

ಪುರಂದರದಾಸರು ವಿವಿಧ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿ ನೆಲಸಿರುವ ದೇವತೆಗಳನ್ನು ವರ್ಣಿಸಿ ಹೊಗಳಿ ಹಾಡಿರುವುದನ್ನೂ ಇಲ್ಲಿ ಪ್ರಸ್ತಾವಿಸಬಹುದು. ಇಂಥ ವರ್ಣನೆಗಳಿಂದ ಅವರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಕ್ಷೇತ್ರಗಳ ಮತ್ತು ಅವರಿಗೆ ಇಷ್ಟವಾದ ದೇವತಾ ವಿಗ್ರಹಗಳ ಬಗೆಗೆ ಕೆಲವು ವಿಷಯಗಳು ತಿಳಿದುಬರುತ್ತವೆ. ಇದರಿಂದ ಸಮಕಾಲೀನ ಸಂಸ್ಕೃತಿಯ ಪರಿಚಯವೂ ನಮಗಾಗುತ್ತದೆ. ಪುರಂದರದಾಸರು ಸಂದರ್ಶಿಸಿದ ಕ್ಷೇತ್ರಗಳಲ್ಲಿ ಅರುಣಗಿರಿ, ಅಹೋಬಲ, ಉಡುಪಿ, ಕಾಶಿ, ತಿರುಪತಿ, ಪಂಢರಾಪುರ, ಭದ್ರಾಚಲ, ಶ್ರೀರಂಗ ಮುಂತಾದವು ಸೇರಿವೆ.

ಅನ್ನಮಾಚಾರ್ಯರಿಗೆ ನೆಲೆಯಾಗಿದ್ದು ಸಾವಿರಾರು ಸಂಕೀರ್ತನೆಗಳ ಆವಿರ್ಭಾವಕ್ಕೆ ಕಾರಣವಾದ ಪದಕವಿತಾ ಕ್ಷೇತ್ರ ತಿರುಪತಿ. ವ್ಯಾಸತೀರ್ಥರು ಹನ್ನೆರಡು ವರ್ಷಗಳ ಕಾಲ ವೇಂಕಟೇಶ್ವರನ ಸನ್ನಿಧಿಯಲ್ಲಿ ಇದ್ದು ನಿತ್ಯಾರ್ಚನೆ ನಡೆಸುತ್ತಿದ್ದರೆಂದು ಪ್ರತೀತಿ. ವಿಜಯನಗರದ ಶ್ರೀಕೃಷ್ಣದೇವನಿಗೆ ಇಷ್ಟದೈವವಾದ ವೇಂಕಟೇಶ್ವರನಿಗೆ ಕರ್ಣಾಟಕ ರಾಜ್ಯದ ಸೇವೆಗಳೂ ಸಲ್ಲುತ್ತಿದ್ದುವು. ಪುರಂದರದಾಸರೂ ಹಲವು ಬಾರಿ ತಿರುಪತಿಯನ್ನು ಸಂದರ್ಶಿಸಿ ಕೀರ್ತನೆಗಳನ್ನು ಬರೆದಿದ್ದಾರೆ : "ಕಂಡೆ ಕಂಡೆ ಸ್ವಾಮಿಯ" (ಪು. ಸಾ. ದ., 1, ಪು. 267) ಎಂದು ಹೇಳುತ್ತಾ,

> ನಿನ್ನ ದಿವ್ಯ ಮೂರುತಿಯ ಕಣ್ಣುದಣಿಯ ನೋಡಿ
> ಧನ್ಯನಾದೆನೋ ಧರೆಯೊಳು
> ಇನ್ನು ಈ ಭವ ಭಯಕೆ ಅಂಜಲೇತಕೊ
> ಚೆನ್ನ ಸಿರಿ ವೆಂಕಟೇಶ ಶ್ರೀಶಾ (ಪು. ಸಾ. ದ., 1, ಪು. 313)

ಎಂದು ವೇಂಕಟೇಶ್ವರನನ್ನು ವರ್ಣಿಸಿದ್ದಾರೆ.

ವಿಷ್ಣುಭಕ್ತಿಯ ಅಭಿವ್ಯಕ್ತಿಗಳಲ್ಲಿ ದಶಾವತಾರದ ವರ್ಣನೆ ಒಂದು. ಇದನ್ನು ವೈಷ್ಣವ ಕವಿಗಳು ತಪ್ಪದೆ ವಿವರಿಸುತ್ತಾರೆ. ಪುರಂದರದಾಸರೂ ದಶಾವತಾರದ ಬಗೆಗೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. 'ಬಾರೆ ಗೋಪಮ್ಮ ನಿನ್ನ ಬಾಲಯ್ಯನಳುತಾನೆ' ಎಂಬ ಕೀರ್ತನೆಯಲ್ಲಿ (4-24) ಕೃಷ್ಣನನ್ನು ವರ್ಣಿಸುತ್ತಾ ಆತನ ಅವತಾರಗಳನ್ನೂ ಹೇಳಿದ್ದಾರೆ :

ನೀರೊಳಗಾಡಿ ಮೈಯೊರಸೆಂದಳುತಾನೆ–ಬಾರೆ
ಮೇರುವ ಹೊತ್ತು ಮೈಭಾರವೆಂದಳುತಾನೆ–ಬಾರೆ
ಧರೆಯ ನೆಗಹಿ ತನ್ನದಾಡೆನೊಂದಳುತಾನೆ–ಬಾರೆ
ದುರುಳ ರಕ್ಕಸನ ಕರುಳ ಕಂಡಳುತಾನೆ–ಬಾರೆ

ನೆಲವನಳೆದು ಪುಟ್ಟ ಚರಣನೊಂದಳುತಾನೆ–ಬಾರೆ
ಛಲದಿಂದ ಕೊಡಲಿಯ ಹಿಡಿವೆನೆಂದಳುತಾನೆ-ಬಾರೆ
ಬಲುಕಪಿಪಳ ಕಂಡಂಜಿಕೊಂಡಳುತಾನೆ–ಬಾರೆ
ನೆಲುವಿನ ಬೆಣ್ಣೆ ಕೈನಿಲುಕದೆಂದಳುತಾನೆ–ಬಾರೆ

ಬಟ್ಟ ಬತ್ತಲೆನಿಂತು ಎತ್ತಿಕೊಯೆಂದಳುತಾನೆ–ಬಾರೆ
ಶ್ರೇಷ್ಠ ತೇಜಿಯನ್ನು ಹತ್ತಿಸೆಂದಳುತಾನೆ-ಬಾರೆ.

"ನಾರಾಯಣ ತೇ ನಮೋ ನಮೋ ಭವ ನಾರದ ಸನ್ನುತ ನಮೋ ನಮೋ" ಎಂಬ ಕೀರ್ತನೆ ಪುರಂದರದಾಸರದೆಂದು (ಪು. ಸಾ. ದ., 1, ಪು. 293) ಹೇಳಲಾಗಿದೆ ಯಾದರೂ ಇದು ಅನ್ನಮಾಚಾರ್ಯರ ಕೀರ್ತನೆ. ಇದನ್ನು ಪುರಂದರದಾಸರು ಅನ್ನಮಾ ಚಾರ್ಯರ ಕೀರ್ತನೆಯ ಪ್ರಭಾವದಿಂದ ಬರೆದಿರಬಹುದು ಅಥವಾ ಇದು ಪ್ರಕ್ಷಿಪ್ತ ವಾಗಿರಬಹುದು.

ಗೋದಾವರೀ ತೀರದ ಭದ್ರಾಚಲರಾಮ ದೇವಾಲಯ ಪ್ರಸಿದ್ಧವಾದುದು. ಇದು ಪುರಂದರದಾಸರ ಕಾಲದಲ್ಲೇ ಪ್ರಸಿದ್ಧಿ ಪಡೆದಿತ್ತೆಂಬುದನ್ನು ಅವರ ಒಂದು ಕೀರ್ತನೆ (ಪು. ಸಾ. ದ., 1, ಪು. 369)ಯಿಂದ ತಿಳಿದುಬರುತ್ತದೆ.

## ಅನ್ನಮಾಚಾರ್ಯರ ಧಾರ್ಮಿಕ ನಿಷ್ಠೆ

ಪುರಂದರದಾಸರ ಧಾರ್ಮಿಕ ಹಿನ್ನೆಲೆ ವಿಸ್ತೃತವಾದುದು. ಹರಿದಾಸಕೂಟಕ್ಕೆ ಸೇರಿದ ನೂರಾರು ಮಂದಿ ಭಕ್ತರು, ವಿದ್ವಾಂಸರು, ಕೀರ್ತನಕಾರರು, ತಾತ್ತ್ವಿಕರು ನಿಷ್ಠೆಯಿಂದ ಬೆಳೆಸಿದ ಜನಪ್ರಿಯ ಪಂಥದ ನೇತಾರರ ಪೈಕಿ ಒಬ್ಬರಾಗಿ ಪುರಂದರದಾಸರು ಪ್ರಾಧಾನ್ಯವನ್ನು ಪಡೆದಿದ್ದಾರೆ. ಆದರೆ ಅನ್ನಮಾಚಾರ್ಯರು ತಮ್ಮದೇ ಆದ ಮಾರ್ಗ ದಲ್ಲಿ ಭಕ್ತಿಸಾಧನೆಗೆ ತೊಡಗಿದವರು. ಮತ ಪ್ರಚಾರಕ್ಕಾಗಿ ಅವರು ಮಾಡಿದ ಪ್ರತ್ಯೇಕ ಸೇವೆ ಏನೂ ಇಲ್ಲ. ಅವರಲ್ಲಿ ಕಾಣುವ ಧಾರ್ಮಿಕನಿಷ್ಠೆ ಪರಂಪರೆಯಿಂದ ಬಂದದ್ದು: ಅದು ಭಕ್ತಿಯ ಅಭಿವ್ಯಕ್ತಿಗೆ ಒಂದು ನೇಪಥ್ಯ ಮಾತ್ರ. ಅವರ ಧಾರ್ಮಿಕ ಪರಂಪರೆ ಮತ್ತು ಕಾವ್ಯಪರಂಪರೆ ಎರಡನ್ನೂ ಅವರ ಕುಟುಂಬದವರೆಲ್ಲರೂ ಅನುಸರಿಸಿದರು.

ತಾಳ್ಳಪಾಕ ಅನ್ನಮಾಚಾರ್ಯರು ಹುಟ್ಟು ವೈಷ್ಣವರಲ್ಲ. ತಿರುಪತಿಗೆ ಬಂದಮೇಲೆ ವಿಶಿಷ್ಟಾದ್ವೈತ ದೀಕ್ಷೆ ಪಡೆದರು. ಅವರ ಕೀರ್ತನೆಗಳಲ್ಲಿ ವಿಶಿಷ್ಟಾದ್ವೈತ ಮತಕ್ಕೆ ಆಶ್ರಯ ಸಿಕ್ಕಿತು. ಮಧುರವಾದ ಸಂಕೀರ್ತನೆ ಮತ ಪ್ರಚಾರಕ್ಕೆ ಶಕ್ತಿಯುತ ಆಯುಧ. ಆದರೆ

ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಭಕ್ತಿ ಮತ್ತು ವೈರಾಗ್ಯಗಳೇ ಎದ್ದು ಕಾಣುತ್ತಿದ್ದು, ಮತಪ್ರಚಾರಕ್ಕೆ ಅನುವಾಗಿರುವ ಅಂಶಗಳು ಅಷ್ಟೇನೂ ಪ್ರಾಧಾನ್ಯ ಪಡೆದಿಲ್ಲ.

ಕಾವ್ಯತ್ವ ಮತ್ತು ಭಕ್ತಿ ಅನ್ನಮಾಚಾರ್ಯ ಸಂಕೀರ್ತನವೆಂಬ ನಾಣ್ಯದ ಎರಡು ಮುಖಗಳು. ವಿಷ್ಣುಭಕ್ತಿಯನ್ನು ಸಂಕೀರ್ತನ ರೂಪದಲ್ಲಿ ಸಮರ್ಪಿಸುವ ವೇಳೆಯಲ್ಲಿ ಅನ್ನಮಾಚಾರ್ಯರ ಅಭಿವ್ಯಕ್ತಿ ಹಲವೆಡೆ ವಿಶಿಷ್ಟ ಕಾವ್ಯವಾಗಿ ಮೂಡಿಬಂದಿದೆ :

ನಿನ್ನ ಪಾದಕೆ ನಾನು ಮಾಡಿದ ಈ ಪೂಜೆಯನ್ನು ಭದ್ರವಾಗಿಟ್ಟುಕೋ
ಹೂಬಿಟ್ಟ ನಿನ್ನ ಕೀರ್ತಿರೂಪ ಪುಷ್ಪಗಳಿವು
ಒಂದು ಸಂಕೀರ್ತನೆ ಸಾಕು ನಮ್ಮನ್ನು ರಕ್ಷಿಸಲು
ಉಳಿದವು ಭಂಡಾರದಲ್ಲಿ ಭದ್ರವಾಗಿರಲಿ
ನಿನ್ನ ನಾಮದ ಬೆಲೆ ಸುಲಭ, ಫಲ ಅಧಿಕ
ದಿಕ್ಕಾಗಿ ಆಳಿದೆ ನನ್ನನ್ನು, ನಿನ್ನ ಸಂಕೀರ್ತನಗಳೇ ತೀರದ ಧನವೆನಗಯ್ಯಾ....[1]

ವೈಷ್ಣವದ ಆಧಿಕ್ಯವನ್ನು ಕೆಲವು ಕೀರ್ತನೆಗಳಲ್ಲಿ ಅನ್ನಮಾಚಾರ್ಯರು ಹೊಗಳಿ ಹಾಡಿದ್ದಾರೆ. "ಎಲ್ಲದರಲ್ಲೂ ಹರಿದಾಸರು ಅಧಿಕರು, ಕಮಲಜಾದಿಗಳಿಗೆ ಕಣ್ಣಿನಂಥ ವರು[2] ಎಂದು ಹೇಳುವಲ್ಲಿ ಕರ್ನಾಟಕದ ಹರಿದಾಸರು ಅನ್ನಮಾಚಾರ್ಯರ ಮನಸ್ಸಿನಲ್ಲಿ ದ್ದಿರಬಹುದು. ಎಲ್ಲ ಮತಗಳು ಒಂದೇ ಎಂದು ಹೇಳುವುದು ಸಾಧ್ಯವೇ ? ಸ್ವರ್ಣಟಂಕ ಎಲ್ಲೆಡೆಯೂ ಚಲಾವಣೆ ಆಗುವಂತೆ ತೊಗಲು ಸಲ್ಲುವವೇ[3] ಎಂದು ಕೇಳುತ್ತಾರೆ. ರಾಮಾನುಜ ಮತದಂತೆ ಮುದ್ರೆಗಳನ್ನು ಒತ್ತಿಸಿಕೊಂಡ ಆಚಾರ್ಯರು ದೀಕ್ಷಾಸ್ವೀಕಾರದ ಪಾವಿತ್ರ್ಯವನ್ನು ಒಂದೆರಡು ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. "ಎರಡೂ ಕಡೆ ನೀನು ಹಾಕಿದ ಮುದ್ರೆ ಧರಿಸುವುದೇ ನನ್ನ ಸ್ನಾನ, ಧರೆಯಲ್ಲಿ ನಿನ್ನ ನಿಜದಾಸರ ದಾಸರ ಚರಣ

---

[1] ದಾಚುಕೋ ನೀ ಪಾದಾಲಕು ತಗನೇ ಜೇಸಿನ ಪೂಜಲಿವಿ
ಪೂಚಿ ನೀ ಕೀರಿತಿ ರೂಪ ಪುಷ್ಪ ಮುಲಿವಿಯಯ್ಯಾ
ವೊಕ್ಕ ಸಂಕೀರ್ತನೇ ಚಾಲು ವೊದ್ದಿಕೈಮುಮ್ಮು ರಕ್ಷಿಂಚಗ
ತಕ್ಕಿನವಿ ಭಂಡಾರಾನ ದಾಚಿ ವುಂಡನೀ
ವೆಕ್ಕಸಮುಗು ನೀ ನಾಮಮು ವೆಲ ಸುಲಭಮು ಫಲಮಧಿಕಮು
ದಿಕ್ಕೈ ನನ್ನೇಲಿತಿವಿಕನವಿ ತೀರನಿ ನಾ ಧನಮಯ್ಯಾ...
(ಅಧ್ಯಾ. ಸಂ., 2, ಪು. 225).

[2] ಅನ್ನಿಟಾನು ಹರಿದಾಸುಲಧಿಕುಲು
ಕನ್ನುಲವಂಟಿವಾರು ಕಮಲಜಾದುಲಕು (ಅಧ್ಯಾ. ಸಂ., 2, ಪು. 114).

[3] ಅದೇ ಕೀರ್ತನೆ.

ಧೂಳಿ ನನ್ನ ಸ್ನಾನ''[1] ಎಂದಿದ್ದಾರೆ. ಭೌತಿಕ ದೇಹದ ಮಲಿನವೆಂಥದಾದರೂ ಧಾರ್ಮಿಕ ಚಿಹ್ನೆಗಳಿಂದ ಅದು ಅಳಿದು ಹೋಗುವುದೆಂಬುದು ಮತೀಯರ ವಿಶ್ವಾಸ. ಇದನ್ನೇ ಪ್ರತಿಬಿಂಬಿಸುತ್ತಾ ''ಚೆನ್ನಾಗಿ ಮುದ್ರೆಗಳು ತೋಳಿಗಿದ್ದರೆ ಸಾಕು ತನುವೆಷ್ಟು ಹೇಯ ವಾದರೇನು ಶ್ರೀಕಾಂತನ ನಾಮ ನಾಲಗೆ ಮೇಲಿದ್ದರೆ ಸಾಕು ಯಾವ ಕುಲಜನಾದರೇನು''[2] ಎಂದು ಅನ್ನಮಾಚಾರ್ಯರು ಕೇಳುತ್ತಾರೆ.

ವೈಷ್ಣವ ಭಾಗವತೋತ್ತಮರಾಗಿ ತಾವು ನಡೆಸಿದ ಜೀವನವನ್ನು ಒಂದು ಕೀರ್ತನೆ ಯಲ್ಲಿ ವಿಶದೀಕರಿಸಿದ್ದಾರೆ : ''ಸಹಜ ವೈಷ್ಣವಾಚಾರ ವರ್ತನೆಗಳ ಸಹವಾಸವೇ ನಮ್ಮ ಸಂಧ್ಯೆ (ಸಂಧ್ಯಾವಂದನ), ಅತಿಶಯವಾದ ಶ್ರೀಹರಿ ಸಂಕೀರ್ತನ ಸತತವೂ ನಮ್ಮ ಸಂಧ್ಯೆ, ಮತಿ ರಾಮಾನುಜಮತವೇ ನಮಗೆ ಚತುರತೆ ಮೆರೆದ ಸಂಧ್ಯೆ, ಪರಮ ಭಾಗವತ ಸೇವನೆಯೇ ನಮ್ಮ ಸಂಧ್ಯೆ.... ತಿರುಮಂತ್ರ ಪಠನವೇ ಸಂತತ ನಮ್ಮ ಸಂಧ್ಯೆ.''[3]

ವಿಶಿಷ್ಟಾದ್ವೈತ ಸಂಪ್ರದಾಯದಂತೆ ವಿಷ್ಣುವಿನ ಕರುಣಾ ಸ್ವರೂಪ ಪರಾವ್ಯೂಹ ವಿಭವಾಂತರ್ಯಾಮ್ಯರ್ಚಾ ರೂಪಗಳೆಂಬ ಐದು ರೀತಿಗಳಲ್ಲಿ ಪ್ರತ್ಯಕ್ಷವಾಗುವ ವಿಷಯ ವನ್ನು ಹತ್ತಾರು ಕೀರ್ತನೆಗಳಲ್ಲಿ ಅನ್ನಮಾಚಾರ್ಯರು ನಿರೂಪಿಸಿದ್ದಾರೆ. 'ಪರಾ' ಎನ್ನುವುದು ಪರಮಪದದ ಪರಂಜ್ಯೋತಿ ಸ್ವರೂಪ. 'ವ್ಯೂಹಗಳೆಂದರೆ ಪರಮಾತ್ಮನ

---

[1] ಇರುವಂಕಲ ನೀ ಯೇಚಿನ ಮುದ್ರಲು
ಧರಿಯಿಂಚುಟೆ ನಾ ಸ್ನಾನಮು
ಧರಪೈ ನೀ ನಿಜ ದಾಸುಲ ದಾಸುಲ
ಚರಣಧೂಳಿ ನಾ ಸ್ನಾನಮು (ಅಧ್ಯಾ. ಸಂ., 1, ಪು. 34).

[2] ಮೊನಸಿ ಮುದ್ರಲು ಭುಜಮುಲ ನುಂಡಿತೇ ಚಾಲು
ತನುವೆಂತ ಹೇಯಮೈನಾ ದಾನಿಕೇಮಿ
ಶ್ರೀಕಾಂತು ನಾಮಮು ಜಿಹ್ವ ದಗಿಲಿತೇ ಚಾಲು
ಯೇ ಕುಲಜುಂಡೈನಾನು ಹೀನಮೇಮಿ (ಅಧ್ಯಾ. ಸಂ., 1, ಪು. 250).

[3] ಸಹಜ ವೈಷ್ಣವಾಚಾರ ವರ್ತನುಲ
ಸಹವಾಸಮೆ ಮಾ ಸಂಧ್ಯ
ಅತಿಶಯಮುಗು ಶ್ರೀಹರಿ ಸಂಕೀರ್ತನ
ಸತತಂಬುನು ಮಾ ಸಂಧ್ಯ
ಮತಿರಾಮಾನುಜ ಮತಮೇ ಮಾಕುನು
ಚತುರತ ಮೆಱಸಿನ ಸಂಧ್ಯ
ಪರಮ ಭಾಗವತ ಪದ ಸೇವನಮೇ
ಸರವಿನೆನ್ನ ಮಾ ಸಂಧ್ಯ....
ತಿರುಮಂತ್ರ ಪಠನಮೇ ಸಂತತಮು ಮಾ ಸಂಧ್ಯ (ಅಧ್ಯಾ. ಸಂ., 1, ಪು. 7).

ವಿಶೇಷ ರೂಪಗಳು. ಪರಾ ವಾಸುದೇವನೇ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳನ್ನು ಪಡೆಯುತ್ತಾನೆ. ಇವೇ ಚತುರ್ವ್ಯೂಹಗಳು, ಲೋಕೋದ್ಧಾರಕ್ಕಾಗಿ ಪ್ರತಿಯೊಂದು ಯುಗದಲ್ಲಿ ಅವತರಿಸುವ ಪರಮಪುರುಷನ ಕರುಣಾಸ್ವರೂಪವೇ 'ವಿಭವ'. ಇದರಲ್ಲಿ ದಶಾವತಾರದ ವರ್ಣನೆಗಳು ಅನೇಕ ಕೀರ್ತನೆಗಳಲ್ಲಿ ಬರುತ್ತವೆ. ದಶಾವತಾರ ಗಳಲ್ಲಿ ಕೆಲವು ಅವತಾರಗಳನ್ನು ವಿಶೇಷವಾಗಿ ಕೀರ್ತಿಸಲಾಗಿದೆ. ಇವುಗಳ ಜೊತೆಗೆ ಅಂತರ್ಯಾಮಿ ಸ್ವರೂಪವನ್ನೂ ಆಚಾರ್ಯರು ವರ್ಣಿಸಿದ್ದಾರೆ. ವೆಂಕಟಾಚಲದಲ್ಲಿ ಭಕ್ತರ ಪೂಜೆಗಳಿಗೆ ಪಾತ್ರನಾದ ವೇಂಕಟೇಶ್ವರನ ದಿವ್ಯಮಂಗಳರೂಪ ಅರ್ಚಾಮೂರ್ತಿ ಯಾಗಿದೆ. ಅನ್ನಮಾಚಾರ್ಯರ ನೂರಾರು ಕೀರ್ತನೆಗಳಲ್ಲಿ ಅರ್ಚಾಮೂರ್ತಿಯ ವರ್ಣನೆ ಯನ್ನು ಕಾಣಬಹುದು.

ಪರಮಾತ್ಮನ ಕರುಣಾಸ್ವರೂಪದ ವರ್ಣನೆಯಲ್ಲಿ ಕಂಡುಬರುವ ಪರಾವ್ಯೂಹಾದಿ ಭೇದಗಳನ್ನು ಮಾತ್ರವಲ್ಲದೆ ವೈಷ್ಣವ ಸಂಪ್ರದಾಯದ ಪಂಚಾಯುಧಗಳನ್ನೂ ಆಚಾರ್ಯರು ಉಲ್ಲೇಖಿಸಿದ್ದಾರೆ. ಪಂಚಾಯುಧಗಳ ವರ್ಣನೆ ಜಗತ್ಕಲ್ಯಾಣಾರ್ಥವಾಗಿ ಪರಮಾತ್ಮನ ಕರುಣಾಸ್ವರೂಪದ ನಿರೂಪಣೆಗೆ ಪೋಷಕವಾಗುತ್ತದೆ. ವೈಷ್ಣವ ಸಂಪ್ರದಾಯದಲ್ಲಿ ಇನ್ನೂ ಕೆಲವು ವರ್ಣನೆಗಳು ಬರುತ್ತವೆ: ವೇಂಕಟೇಶ್ವರನ ಶ್ರೀಪಾದ, ಅಭಯಹಸ್ತ, ಕಿರೀಟ, ಕೌಸ್ತುಭ, ಪೀತಾಂಬರ ಇತ್ಯಾದಿ.

ಅನ್ನಮಾಚಾರ್ಯರು ಕೆಲವು ಕಡೆ ಅನ್ಯಮತಗಳ ಬಗೆಗೆ ವ್ಯಂಗ್ಯದ ನುಡಿಗಳನ್ನು ಆಡಿದ್ದಾರೆ. "ಲಿಂಗ ಕಟ್ಟಿಕೊಂಡು ಅದನ್ನು ನಂಬಲಾರದೆ ಪರ್ವತಕ್ಕೆ ಹೋದ ಭಕ್ತ" ರನ್ನು ಟೀಕಿಸಿದ್ದಾರೆ.[1] ಅದ್ವೈತ ತತ್ತ್ವ ಪುರಂದರದಾಸರ ಮತ್ತು ಅನ್ನಮಾಚಾರ್ಯರ ಟೀಕೆಗೆ ಗುರಿಯಾಯಿತು. ಅದ್ವೈತದ ಪ್ರಕಾರ ಆಚಾರಾದಿಗಳನ್ನು, ವಿವಿಧ ಕರ್ಮಕಾಂಡ ಗಳನ್ನು ಅನ್ವಯಿಸುವ ಸಾಧ್ಯತೆಯೇ ಇಲ್ಲವೆಂದು ಅನ್ನಮಾಚಾರ್ಯರು ಹೇಳುತ್ತಾರೆ. "ಜೀವಿಗಳಿಗೆಲ್ಲಾ ಅಭೇದವಾದರೆ ಗುರುವಿಲ್ಲ, ಶಿಷ್ಯನಿಲ್ಲ. ಸಹಜಲೀಲಾ ವಿಭೂತಿಯೆಲ್ಲಾ ಮಿಥ್ಯೆಯಾದರೆ ಬಹುಯಾಗಾದಿ ಕರ್ಮಗಳಿಗೆ ಬೆಲೆಯಿಲ್ಲ, ಭುವಿಯಲಿ ಜನನ ಮರಣಗಳು ಮಾಯೆಯಾದರೆ ವಿಹಿತಾಚಾರಗಳನು ಮಾಡುವ ವಿಧಿ ಇಲ್ಲ, ಬ್ರಹ್ಮನಿರಾಕಾರವಾದರೆ

---

[1] ಅರುತ ಲಿಂಗಮು ಗಟ್ಟಿಯುದಿ ನಮ್ಮ ಜಾಲಕ
ಪರುವತ ಮೇಗಿನ ಬತ್ತುಡನ್ನೈತಿ (ಅಧ್ಯಾ. ಸಂ., 1, ಪು. 13).

ಪುರುಷ ಸೂಕ್ತಾದಿಗಳನ್ನು ಪಠಿಸುವುದೇಕೆ, ಶ್ರೀವೇಂಕಟೇಶನ ದಾಸ್ಯವೇ ಬೇಡವೆಂದರೆ ಅದು ಬರಿ ರಾಕ್ಷಸ ಮತವಾಗುವುದು."[1]

"ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್" ಎಂಬ ಒಂಬತ್ತು ಬಗೆಯ ಭಕ್ತಿವಿಧಾನಗಳನ್ನು ಭಾಗವತ ಪುರಾಣದಲ್ಲಿ ಹೇಳಲಾಗಿದೆ. ನವವಿಧ ಭಕ್ತಿಗಳಿಗೆ ಅನ್ನಮಾಚಾರ್ಯರಲ್ಲಿ ನೂರಾರು ಉದಾಹರಣೆಗಳು ಸಿಕ್ಕುತ್ತವೆ. "ಕೇಳಿ ಭಾಗ್ಯವು ವಿಷ್ಣುಕಥೆ"[2] ಎಂಬ ಕೀರ್ತನೆಯಲ್ಲಿ "ಅದು ನಮಗೆ ದೊಡ್ಡ ಬಲ, ಆದಿಯಿಂದ ಸಂಧ್ಯಾದಿ ವಿಧಿಗಳಲ್ಲಿ ವೇದ ವಾದುದು ವಿಷ್ಣುಕಥೆ, ನಾರದಾದಿಗಳಿಂದ ಬೀದಿಬೀದಿಗಳಲ್ಲಿ ನಾದವಾಯಿತು ವಿಷ್ಣುಕಥೆ" ಎನ್ನಲಾಗಿದೆ. ಹರಿಯನ್ನು ಕೀರ್ತಿಸುವ ತಮ್ಮ ಮಾತುಗಳನ್ನು ಕುರಿತು ಹೇಳುತ್ತಾ "ಅಷ್ಟೆಲ್ಲ ಮಾತುಗಳನ್ನು ನನಗೆ ನಾನೇ ಹೇಳಿಕೊಳ್ಳುತ್ತಾ ಇರಬಾರದು. ನಿನಗೆ ಹಿತ ವಾದಾಗ ನನ್ನ ಮಾತನ್ನು ನೀನೇ ಆಯ್ದುಕೊ"[3] ಎಂದಿದ್ದಾರೆ. "ಶ್ರೀವಿಷ್ಣುನಾಮ ವೊಂದೇ ಕೈಗೆ ನೀಡಿತು ವೈಕುಂಠ"[4] ಎಂದು ಆ ನಾಮವನ್ನು ಸ್ಮರಿಸುತ್ತಾರೆ

---

[1] ಅರಯ ಜೀವುಲಕೆಲ್ಲಾ ನಭೇದಮೈತೇ
ಗುರುಡು ಶಿಷ್ಯುಡು ಲೇಡು ಕೂಡದರ್ಥಮು
ಸಹಜಲೀಲಾ ವಿಭೂತಿ ಸರ್ವಮು ಮಿಥ್ಯಯೈತೇ
ಬಹುಯಾಗಾದಿ ಕರ್ಮಾಲ ಪಸಲೇದು
ಮಹಿಲೋನಿ ಜನನಾಲು ಮರಣಾಲು ಮಾಯಯೈತೇ
ವಿಹಿತಾಚಾರಾಲು ಸೇಯ ವಿಧೇಲೇದು
ಘಟನಬ್ರಹ್ಮಮು ನಿರಾಕಾರಮೈತೇ ಬರಿಯಿಂಪ
ಯಿಟು ಪುರುಷಸೂಕ್ತಾದುಲಿವಿ ಮರೇಲ
ಅಟು ಶ್ರೀವೇಂಕಟೇಶು ದಾಸ್ಯಮುಲೇಕ ಬಗಿಸಿತೇ
ಸಟ ಲಾಡುಕೊನೆಡಿ ರಾಕ್ಷಸಮತಮವುನು (ಅಧ್ಯಾ. ಸಂ., 2. ಪು. 81).

[2] ವಿನರೋ ಭಾಗ್ಯಮು ವಿಷ್ಣುಕಥ
ಪೆನುಬಲಮಿದಿವೋ ವಿಷ್ಣುಕಥ
ಆದಿನುಂಡಿ ಸಂಧ್ಯಾದಿ ವಿಧುಲಲೋ
ವೇದಂಬಯಿನದಿ ವಿಷ್ಣುಕಥ
ನಾದಂಬೈನದೆ ನಾರದಾದುಲಚೆ
ವೀಧಿವೀಧುಲನೆ ವಿಷ್ಣುಕಥ....(9-66).

[3] ಅನ್ನೇಸಿ ನಾಕು ನಾಕೇ ಆಡುಕೋರಾದು
ಯೆನ್ನುಕೊಮ್ಮೀ ನಾಮಾಟಲಿತವೈನಯಪುಡು (14-93).

[4] ಶ್ರೀವಿಷ್ಣುನಾಮಮೊಕಟೇ ಚೇತಿಕಿಚ್ಚೆ ವೈಕುಂಠಮು (9-8).

ವೇಂಕಟೇಶ್ವರನ ಶ್ರೀಪಾದ ವರ್ಣನೆಯನ್ನು ಅತ್ಯಂತ ಮನೋಹರವಾಗಿ ಆಚಾರ್ಯರು ವರ್ಣಿಸಿದ್ದಾರೆ. "ಈ ಪಾದವೇ ಅಲ್ಲವೇ ಇಳೆಯೆಲ್ಲ ಸೇವಿಸಿದ್ದು, ಈ ಪಾದವೇ ಅಲ್ಲವೆ ಇಹಪರಗಳನು ನೀಡುವುದು"[1] ಅದು "ಬ್ರಹ್ಮ ತೊಳೆದ ಪಾದ, ಬ್ರಹ್ಮವೇ ಆದ ಪಾದ."[2]

ಹೀಗೆ ಶ್ರವಣ ಕೀರ್ತನಾದಿ ವಿವಿಧ ಭಕ್ತಿಗಳನ್ನು ತೋರುತ್ತಾ, ವೇಂಕಟೇಶ್ವರನ ಸ್ತುತಿಯಲ್ಲೇ ನಿರತರಾಗಿದ್ದ ಆಚಾರ್ಯರು ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದ್ದರು. ದಕ್ಷಿಣಭಾರತದ ಹಲವು ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ದೇವತೆಗಳನ್ನು ಹಾಡಿ ಹೊಗಳಿದ್ದಾರೆ.

ಪುರಂದರದಾಸರು ವೇಂಕಟೇಶ್ವರನನ್ನು ಕೀರ್ತಿಸಿದಂತೆ ಅನ್ನಮಾಚಾರ್ಯರು ವಿಟ್ಠಲನನ್ನು ಭಕ್ತಿಯಿಂದ ಸ್ಮರಿಸಿದ್ದಾರೆ. ವಿಟ್ಠಲನನ್ನು ಕುರಿತ ಅನೇಕ ಪೌರಾಣಿಕ ಪ್ರಸಂಗ ಗಳನ್ನು ತಮ್ಮ ಕೀರ್ತನೆಯಲ್ಲಿ ಪ್ರಸ್ತಾವಿಸಿದ್ದಾರೆ. "ನೋಡಲು ಚಿಕ್ಕವನಂತಿರುವವನು ಎಲ್ಲ ವಿದ್ಯೆಗಳನ್ನೂ ಕಲಿತವನು ವಿಟ್ಠಲನು. ನೂರ ಎಪ್ಪತ್ತೇಳು ಜನರಿಂದ ಇಂದು ಹಾಡಿಸಿಕೊಂಡನು. ಭಕ್ತಿಯಿಂದ ತನ್ನ ಬಗೆಗೆ ಹಾಡುಗಳನ್ನು ಹೇಳಲು ಈ ಕಡೆ ಮುಖ ತಿರುಗಿಸಿದನು, ತನ್ನನ್ನು ತಿರಸ್ಕರಿಸಿದವರಿಗೆ ಪಾದವೆತ್ತಿ ಎಲ್ಲ ದೇವರುಗಳನ್ನೂ ತೋರಿಸಿದನು, ಪುಂಡರೀಕ ಬೇಡಿಕೊಳ್ಳಲು ಇಟ್ಟಿಗೆಯ ಮೇಲೆ ನಿಂತನು, ವೇಂಕಟಾದ್ರಿ ಯಲ್ಲಾಗಲೀ ಪಾಂಡುರಂಗದಲ್ಲಾಗಲೀ ಹೇಗೆ ಸೇವಿಸಿದರೂ ವರಗಳನು ಕೊಡುವವನು ವಿಟ್ಠಲನು."[3] ಅನ್ನಮಾಚಾರ್ಯರ ಕಾಲಕ್ಕೆ ದಕ್ಷಿಣ ಭಾರತದ ಅನೇಕ ಸ್ಥಳಗಳಲ್ಲಿ

---

[1] ಈ ಪಾದಮೇ ಕದಾ ಯಿಲಯೆಲ್ಲ ಗೊಲಿಚಿನದಿ....
ಈ ಪಾದಮೇ ಕದಾ ಯಿಹಪರಮುಲೊಸಗೆಡಿದಿ (5-66).

[2] ಬ್ರಹ್ಮ ಗಡಿಗಿನ ಪಾದಮು
ಬ್ರಹ್ಮಮು ತಾನೇ ನೀ ಪಾದಮು (2-180).

[3] ವಸುಧಜೂಡ ಚಿನ್ನವಾಸಿವಲೆ ನುನ್ನವಾಡು
ವೆಸನನ್ನಿ ವಿದ್ಯಲಾಸು ವೆಲಸೆ ವಿಟ್ಠಲುಡು
ಪರಗನೇಡುನೂಟ ಡೆಬ್ಬದಿಯೇಡು ಗುರಿ ಜೇತ
ನಿರವೈ ಪಾಡಿಂಚುಕೊನ್ನಾಡೀ ವಿಟ್ಠಲುಡು....
ಬತ್ತಿತೋಡ ತನಮೀದಿ ಪಾಟಲು ಪಾಡಿತೇನು
ಯಿತ್ತಲಮೋವೈ ತಿರಿಗೆ ನೀ ವಿಟ್ಠಲುಡು
ಹತ್ತಿ ತನ್ನೊಲ್ಲಕ ಪೋಗಾನಂದರಿ ಮೇಡ ದೇವಳ್ಳ
ಯೆತ್ತಿ ಪಾದಾಲಂದು ಜೂಪೆ ನೀತಡೇ ವಿಟ್ಠಲುಡು
ಗಟ್ಟಿಗಾ ಪುಂಡರೀಕುಡು ಕಡುವೇಡಿಕಬೆಟ್ಟಿನ
ಯಿಟ್ಟಿಕ ಪೀಟಪೈನುನ್ನಾಡೀ ವಿಟ್ಠಲುಡು
ಆಟ್ಟಿತಾನೇ ಶ್ರೀ ವೇಂಕಟಾದ್ರಿ ಪಾಂಡುರಂಗಮುನ
ಯೆಟ್ಟುಗೊಲ್ಚಿನಾ ವರಮುಲಿಚ್ಚೇ ವಿಟ್ಠಲುಡು (ಅಧ್ಯಾ. ಸಂ., 2, ಪು. 145).

ವಿಠಲಾಲಯಗಳು ನಿರ್ಮಿತವಾಗಿ ವಿಠಲ ಸಂಪ್ರದಾಯ ವ್ಯಾಪ್ತಿ ಪಡೆದಿತ್ತು. ಅನ್ನಮಾಚಾರ್ಯರು ಮತ್ತು ಅವರ ವಂಶಸ್ಥರು ತಿರುಪತಿ, ವಿಜಯನಗರ, ಹಂಪೆ, ಕೋಯಿಲ ಕುಂಟ್ಲ ಮುಂತಾದೆಡೆಗಳಲ್ಲಿ ನೆಲಸಿರುವ ವಿಠಲೇಶ್ವರನನ್ನು ಸ್ತುತಿಸಿದ್ದಾರೆ.

ಅಹೋಬಲ ಕ್ಷೇತ್ರದಲ್ಲಿ ಬೆಟ್ಟದ ಮೇಲಿರುವ ದೇವರಿಗೆ ಲಕ್ಷ್ಮೀನೃಸಿಂಹನೆಂದೂ ಕೆಳಗಿರುವ ದೇವರಿಗೆ ಉಗ್ರನರಸಿಂಹನೆಂದೂ ಹೆಸರು. ಅನ್ನಮಾಚಾರ್ಯರು ಈ ಇಬ್ಬರು ದೇವತೆಗಳ ಬಗೆಗೂ ಹತ್ತಾರು ಕೀರ್ತನೆಗಳನ್ನು ಬರೆದಿದ್ದಾರೆ. ಸ್ತಂಭದಲ್ಲಿ ನರಸಿಂಹನ ಆವಿರ್ಭಾವ, ಹಿರಣ್ಯಕಶಿಪನವಧೆ, ಪ್ರಹ್ಲಾದ ಭಕ್ತಿ ಮುಂತಾದವನ್ನು (2-127 ; 6-93 ; 10-29 ; 11-202) ಕೀರ್ತನೆಗಳಲ್ಲಿ ನಿರೂಪಿಸಲಾಗಿದೆ. ಆಂಧ್ರಪ್ರದೇಶದಲ್ಲಿ ಅಹೋಬಲವಲ್ಲದೆ ಇನ್ನೂ ಅನೇಕ ನಾರಸಿಂಹ ಕ್ಷೇತ್ರಗಳಿವೆ. ಇವುಗಳಲ್ಲಿ ಮುಖ್ಯವಾದವನ್ನು ನವನಾರಸಿಂಹ ಕ್ಷೇತ್ರಗಳೆಂದು ಕರೆಯಲಾಗಿದೆ. ಈಗ ಹೇಳುವ ನಾರಸಿಂಹ ಕ್ಷೇತ್ರಗಳು: ಅಹೋಬಲಂ, ಸಿಂಹಾಚಲಂ, ಮಂಗಳಗಿರಿ, ವೇದಾದ್ರಿ, ಯಾದವಾದ್ರಿ, ಅಂತರ್ವೇದಿ, ಖಾದ್ರಿ, ಆಕಿರಿಪಲ್ಲಿ ಮತ್ತು ನಗರಿ. ಅನ್ನಮಯ್ಯ ತಮ್ಮ ಊರಿಗೆ ಹತ್ತಿರವಾಗಿದ್ದ ನಾರಸಿಂಹ ಕ್ಷೇತ್ರಗಳನ್ನೇ ನವನಾರಸಿಂಹ ಕ್ಷೇತ್ರಗಳೆಂದು ಕರೆದು ಅವುಗಳನ್ನು ಕುರಿತು ಕೀರ್ತನೆಗಳನ್ನು ಬರೆದಿದ್ದಾರೆ (5-278, 10-182).[1] ಕಂಚಿಯ ವರದರಾಜಸ್ವಾಮಿ ವೈಷ್ಣವರಿಗೆ ಮುಖ್ಯ ದೇವತೆ. ಈ ದೇವತೆಯನ್ನೂ ತಮ್ಮ ಕೀರ್ತನೆಯಲ್ಲಿ ಆಚಾರ್ಯರು ಉಲ್ಲೇಖಿಸಿದ್ದಾರೆ.

ಶ್ರೀರಂಗದ ರಂಗನಾಥ ವಿಗ್ರಹ ಸ್ವಲ್ಪಕಾಲ ತಿರುಮಲೆಯಲ್ಲಿದ್ದು ಅನಂತರ ಮತ್ತೆ ಶ್ರೀರಂಗಕ್ಕೆ ಸೇರಿಸಲ್ಪಟ್ಟಿತೆಂದು ಹೇಳುತ್ತಾರೆ. ಈ ಘಟನೆ ಅನ್ನಮಾಚಾರ್ಯರ ಕಾಲಕ್ಕೆ ಮೊದಲೇ ನಡೆಯಿತು. ಅನ್ನಮಾಚಾರ್ಯರು ತೀರ್ಥಯಾತ್ರೆಯ ಕಾಲದಲ್ಲಿ ಶ್ರೀರಂಗಕ್ಕೆ ಹೋಗಿದ್ದರು. "ಕಾವೇರಿ ಮಧ್ಯರಂಗ ಕ್ಷೇತ್ರವಗೋ, ಶ್ರೀವಿಮಾನವಿಗೋ, ಶೇಷ ಪರ್ಯಂಕವಿದೇ, ದೇವರಗೋ ಅವನೇ, ದೇವಿ ಶ್ರೀಲಕ್ಷ್ಮಿ ಅವಳೇ"[2] ಎಂದು ರಂಗನಾಥ ಕ್ಷೇತ್ರವನ್ನು ವರ್ಣಿಸಿದ್ದಾರೆ.

ಒಟ್ಟಿನಲ್ಲಿ ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಕಂಡು ಬರುವ ಆಚಾರ, ನಂಬಿಕೆ ಮತ್ತು ಧರ್ಮದ ಸ್ವರೂಪ ಸಾಂಸ್ಕೃತಿಕ ಅಧ್ಯಯನದಲ್ಲಿ ಬಹು ಮುಖ್ಯ ಭಾಗ. ಇವರು ಪ್ರತಿಬಿಂಬಿಸುವ ಆಚಾರಗಳು ವೈದಿಕ ಸಂಪ್ರದಾಯದ ಹಿನ್ನೆಲೆ

---

[1] ಅನ್ನಮಾಚಾರ್ಯರು ಕೊಟ್ಟಿರುವ ನಾರಸಿಂಹ ಕ್ಷೇತ್ರಗಳು : ಅಹೋಬಲಂ, ಕದರಿ, ವೇಂಕಟಾದ್ರಿ, ವೇದಾದ್ರಿ, ಭಾರ್ಗವುಟು, ಮಟ್ಟೆಮಳ್ಳ, ಕಾನುಗಮಾನಿ, ಬೊಮ್ಮಿರೆಡ್ಡಿ ಚೆರ್ಲ, ನಗರಿ.

[2] ಕಾವೇರೀ ಮಧ್ಯರಂಗಕ್ಷೇತ್ರಮಲ್ಲದಿಗೋ
ಶ್ರೀವಿಮಾನಮದಿಗೋ ಶೇಷಪರ್ಯಂಕಮಿದೇ
ದೇವುಂಡಲ್ಲದೇ ವಾಡೇ ದೇವಿ ಶ್ರೀಲಕ್ಷ್ಮಿಯದೇ (2-131).

ಯಲ್ಲೇ ಮೂಡಿಬಂದಂಥವು. ಪುರಂದರದಾಸರು ಮಧ್ವ ಸಂಪ್ರದಾಯಕ್ಕೂ ಅನ್ನಮಾಚಾರ್ಯರು ವಿಶಿಷ್ಟಾದ್ವೈತ ಸಂಪ್ರದಾಯಕ್ಕೂ ಸೇರಿದವರಾದುದರಿಂದ ಆಯಾ ಮತಗಳಿಗೆ ಸಂಬಂಧಿಸಿದಂತೆ ಆಚಾರ ಮತ್ತು ನಂಬಿಕೆಗಳು ಕೀರ್ತನೆಗಳಲ್ಲಿ ಸ್ಥಾನ ಪಡೆದಿವೆ. ಧಾರ್ಮಿಕ ನಿಷ್ಠೆಯ ವಿಷಯದಲ್ಲಿ ಇವರಿಬ್ಬರೂ ಬೇರೆ ಬೇರೆ ಮಾರ್ಗಗಳಿಗೆ ಸೇರುತ್ತಾರೆ. ಮಧ್ವಮತವನ್ನು ಸರ್ವೋನ್ನತ ಮತವೆಂದು ಸಾರಲು ಅನೇಕ ಕೀರ್ತನೆಗಳನ್ನು ಪುರಂದರದಾಸರು ಮೀಸಲಿಟ್ಟರು, ವಿಶಿಷ್ಟಾದ್ವೈತದ ವೈಶಿಷ್ಟ್ಯವನ್ನು ಪ್ರಕಟಿಸಲು ಆಚಾರ್ಯರು ಹಲವು ಕೀರ್ತನೆಗಳನ್ನು ರಚಿಸಿದರು. ಇವರಿಬ್ಬರೂ ಹರಿಯೇ ಸರ್ವೋತ್ತಮನೆಂದು ನಂಬಿದವರಾದುದರಿಂದ ಅನೇಕ ವಿಷಯಗಳಲ್ಲಿ ಏಕಾಭಿಪ್ರಾಯ ಸಾಧ್ಯವಾಯಿತು. ಈ ದೃಷ್ಟಿಯಿಂದ ನೋಡಿದಾಗ ಪುರಂದರದಾಸರು ಅನ್ನಮಯ್ಯನನ್ನು ಕಂಡಾಗ ವಿಷ್ಣುವೆಂದೇ ಭಾವಿಸಿ ಕೀರ್ತಿಸಿದ್ದು, ಅನ್ನಮಾಚಾರ್ಯರು ಪುರಂದರದಾಸರನ್ನು ವಿಟ್ಠಲನ ಪ್ರತಿರೂಪವೆಂದು ಹೊಗಳಿದ್ದು ಅಸಹಜವೇನಲ್ಲ. ಭಿನ್ನಮತದವರಾದರೂ ವಿಷ್ಣುಭಕ್ತಿ ಇಬ್ಬರನ್ನೂ ಒಟ್ಟುಗೂಡಿಸಿತು.

# ಕಲಾತ್ಮಕ ರೂಪಗಳು

ಕಲೆ ಎಂಬುದನ್ನು ವಿಸ್ತೃತಾರ್ಥದಲ್ಲಿ ಬಳಸಲಾಗುತ್ತಿದೆ. ಅರುವತ್ತುನಾಲ್ಕು ಕಲೆಗಳೆಂದು ಹಿಂದಿನವರು ಪಟ್ಟಿ ಮಾಡಿರುವ ವಿಷಯಗಳಿಗೆ ಆಧುನಿಕ ಕಾಲದಲ್ಲಿ ಇನ್ನೂ ಹಲವು ಸೇರ್ಪಡೆಯಾಗಿವೆ. ಕಾವ್ಯ, ಸಂಗೀತ, ಚಿತ್ರಲೇಖನ, ಶಿಲ್ಪ ಮತ್ತು ನಾಟ್ಯ ಎಂಬವನ್ನು ಲಲಿತಕಲೆಗಳು ಎಂದು ಹೇಳಲಾಗಿದೆ. ಇದುವರೆಗೆ ಅಧ್ಯಯನ ಮಾಡಿರುವ ಬೇರೆ ಬೇರೆ ವಿಷಯಗಳಲ್ಲೂ ಕಲಾತ್ಮಕ ರೂಪಗಳಿಲ್ಲದಿಲ್ಲ. ಲಲಿತಕಲೆಗಳ ಪೈಕಿ ಚಿತ್ರಕಲೆ ಮತ್ತು ಶಿಲ್ಪಗಳನ್ನು ವಸ್ತುಸಂಸ್ಕೃತಿಯಲ್ಲಿ ಸೇರಿಸಲಾಗಿದೆ. ಹಬ್ಬ, ವಿನೋದ ಮುಂತಾದ ಸಂದರ್ಭಗಳಲ್ಲೂ ಸಂಗೀತ, ನೃತ್ಯ, ನಾಟಕ ಇರುತ್ತವೆ. ಹೀಗೆ ಕಲಾತ್ಮಕ ವಿಷಯಗಳು ಮಾನವ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತಿರುತ್ತವೆ. ಜೀವನದ ಒಂದೊಂದು ಹಂತವೂ ಯಾವುದಾದರೊಂದು ಕಲಾತ್ಮಕರೂಪದೊಂದಿಗೆ ಸಂಬಂಧ ಹೊಂದಿರುತ್ತದೆ. ಈ ಅಧ್ಯಾಯದಲ್ಲಿ ಕೀರ್ತನೆಗಳಲ್ಲಿ ಬರುವ ಸಂಗೀತ, ನೃತ್ಯ, ಕಾವ್ಯ, ಗಾದೆ ಮುಂತಾದವನ್ನು ಪರಿಶೀಲಿಸಲಾಗುವುದು.

## ಸಂಗೀತ

ಅರುವತ್ತುನಾಲ್ಕು ಕಲೆಗಳಲ್ಲಿ ಸಂಗೀತವೆ ಮೊದಲನೆಯದೆಂದೂ ಉತ್ತಮವಾದುದೆಂದೂ ಹೇಳುತ್ತಾರೆ. 'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನರಸಂ ಫಣೀ' ಎಂಬುದು ಜನಪ್ರಿಯ ಮಾತು. ಸಂಗೀತಕ್ಕೆ ಹೃದಯವನ್ನು ಆರ್ದ್ರಗೊಳಿಸುವ ಗುಣವಿದೆ.

ಸಂಗೀತದಲ್ಲಿ ವಾದ್ಯಸಂಗೀತ ಪ್ರತ್ಯೇಕವಾಗಿರಬಹುದು ಅಥವಾ ಗಾನಕ್ಕೆ ಸಹಕಾರಿಯಾಗಿರಬಹುದು. ಗಾನ ಮತ್ತು ಸಾಹಿತ್ಯ (ಸಂಗೀತಕ್ಕೆ ಸಂಬಂಧಿಸಿದಂತೆ) ಕುರಿತು ಕೀರ್ತನೆಗಳಲ್ಲಿ ನೇರವಾದ ಉಲ್ಲೇಖಗಳು ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕುವುದಿಲ್ಲ. ವಾದ್ಯಗಳ ಉಲ್ಲೇಖಗಳು ಹಲವು ಕಂಡುಬರುತ್ತದೆ. ವೀಣಾ ವೇಣು ಮೃದಂಗಗಳನ್ನು ವಾದ್ಯತ್ರಯ ಎನ್ನಲಾಗಿದೆ. ತಂತ್ರೀವಾದ್ಯ, ಲೋಹವಾದ್ಯ, ಚರ್ಮವಾದ್ಯ ಮತ್ತು ವಾಯುವಾದ್ಯಗಳಿವೆ. ಮೇಳವಾದ್ಯ, ರಣವಾದ್ಯ ಮತ್ತು ಜನಪದ ವಾದ್ಯವೆಂಬ ವಿಭಾಗವೂ ಕಂಡುಬರುತ್ತದೆ. ತಂಬುರ, ಮೃದಂಗ, ವೀಣೆ, ನಾದಸ್ವರ ಮುಂತಾದವು ಮೇಳವಾದ್ಯಗಳು. ತಂತಾರ, ಮುಖವೀಣೆ, ಶಂಖ, ಗಂಟೆ, ನಗಾರಿ ಮುಂತಾದವು ದೇವಾಲಯ ವಾದ್ಯಗಳು. ಭೇರಿ, ದುಂದುಂಭಿಯಂಥವು ರಣವಾದ್ಯಗಳು. ಏಕನಾದ, ತಂಬುರ, ಕೊಂಬು ಮುಂತಾದವು ಜನಪದ ವಾದ್ಯಗಳು.

ಅನ್ನಮಾಚಾರ್ಯರು ಮತ್ತು ಪುರಂದರದಾಸರು ದೇಶಿ ಹಾಗೂ ಮಾರ್ಗ ಎಂಬ ಎರಡು ಸಂಗೀತ ಪದ್ಧತಿಗಳಲ್ಲೂ ಕೃತಿಗಳನ್ನು ರಚಿಸಿದ್ದಾರೆ. ದೇಶಿಗಾನ ಮತ್ತು ರಚನಾ ಪದ್ಧತಿಗಳಿಂದ ಇವರಿಬ್ಬರೂ ಅನೇಕ ವಿಷಯಗಳನ್ನು ಸ್ವೀಕರಿಸಿದ್ದಾರೆ. ಲಾಲಿ, ಜೋಗುಳ, ಒನಕೆ ಹಾಡು, ಬೀಸುವ ಕಲ್ಲಿನ ಹಾಡು, ಆರತಿ, ಶೋಭನ ಪದ ಮುಂತಾದ ಹಾಡುಗಳ ಮಟ್ಟು, ಪಲ್ಲವಿ ಮತ್ತು ರಚನಾರೀತಿಗಳನ್ನು ಇವರು ಬಳಸಿಕೊಂಡಿದ್ದಾರೆ. ದಕ್ಷಿಣ ಭಾರತದ ದೇಶಿಗಾನವನ್ನು ಕುರಿತ ಅನೇಕ ವಿಷಯಗಳನ್ನು ಬೃಹದ್ದೇಶಿ, ಸಂಗೀತ ಚೂಡಾಮಣಿ, ಅಭಿಲಷಿತಾರ್ಥ ಚಿಂತಾಮಣಿ, ಸಂಗೀತ ರತ್ನಾಕರ ಮುಂತಾದ ಗ್ರಂಥ ಗಳಿಂದ ತಿಳಿಯಬಹುದು.

ಪುರಂದರದಾಸರ ದೇವರನಾಮಗಳು ಮತ್ತು ಅನ್ನಮಾಚಾರ್ಯರ ಪದಗಳು ಸ್ಥೂಲದೃಷ್ಟಿಗೆ ಭಜನಕೀರ್ತನೆಗಳಂತೆ ಕಾಣಿಸಿದರೂ ಅವುಗಳಲ್ಲಿ ರಾಗತಾಳಗಳ ವೈವಿಧ್ಯವಿದೆ. ತಾಮ್ರಪತ್ರಗಳಲ್ಲಿ ಕೆತ್ತಲಾಗಿರುವ ಅನ್ನಮಾಚಾರ್ಯರ ಎಲ್ಲ ಕೀರ್ತನೆಗಳಿಗೂ ರಾಗ ನಿರ್ದೇಶವಿದೆ. ಕೆಲವು ಕಡೆ ತಾಳ ನಿರ್ದೇಶವೂ ಇದೆ. ಸಾಹಿತ್ಯದ ವಿಷಯದಲ್ಲೂ ಇವರಿಬ್ಬರ ಕೊಡುಗೆ ಗಮನಾರ್ಹವಾಗಿದೆ. ಇವರು ಬಳಸಿರುವ ಭಾವ, ಪದಬಂಧಗಳು, ಕಾವ್ಯಾತ್ಮಕ ಅಭಿವ್ಯಕ್ತಿ, ಜನರ ನಾಡಿಯಂತಿರುವ ನಾಣ್ನುಡಿಗಳು, ಗಾದೆ ಇತ್ಯಾದಿಗಳ ಬಳಕೆ ಪರಿಶೀಲನಾರ್ಹವಾಗಿವೆ.

ಸಂಗೀತ ವಾದ್ಯಗಳನ್ನು ಕುರಿತಂತೆ ಪುರಂದರದಾಸರಲ್ಲಿ ಹಲವು ಉಲ್ಲೇಖಗಳಿವೆ. ದೇವರಪೂಜೆ ಮಾಡುವಾಗ "ವಿಮಲ ಘಂಟೆ ಪಂಚವಾದ್ಯ"(1-125) ಇರಬೇಕೆನ್ನುತ್ತಾರೆ ದಾಸರು. ವಾದ್ಯಗಳಲ್ಲಿ ಕೆಲವು ಕೇವಲ ಸ್ಥೂಲ ಶಬ್ದವನ್ನು ಮಾತ್ರ ಕೊಡುವಂಥವು. ಕಹಳೆ, ನಗಾರಿ, ಶಂಖ ಮುಂತಾದವನ್ನು ಈ ವಿಭಾಗದಲ್ಲಿ ಸೇರಿಸಬಹುದು. ಸಂಗೀತಕ್ಕೆ ಉಪಯೋಗವಾಗುವ ವಾದ್ಯಗಳು ಸೂಕ್ಷ್ಮ ನಾದವನ್ನು ನೀಡಿ ರಂಜಿಸಬಲ್ಲವು. ವೀಣೆ ಯಂಥ ವಾದ್ಯಗಳು ನಾದದ ಸೌಕುಮಾರ್ಯದಿಂದ, ಗಮಕಗಳ ಸ್ಫೂರ್ತಿಯಿಂದ, ಸೂಕ್ಷ್ಮ ಸ್ವರ ನಿರ್ಮಾಣ ಶಕ್ತಿಯಿಂದ ವಿಶೇಷ ವಾದ್ಯಗಳ ಶ್ರೇಣಿಗೆ ಸೇರುತ್ತವೆ. ಆನದ್ಧವಾದ್ಯ ಗಳಾದ ಮೃದಂಗ (6-122), ಮದ್ದಲೆ (ಉ. ಪ್ರ., ಭಾಗ 4, ಪು. 66) ಮುಂತಾದವು; ಘನ ವಾದ್ಯಗಳಾದ ಜಾಗಟೆ (2-154), ತಾಳ (6-83) ಮುಂತಾದವು; ಸುಷಿರ ವಾದ್ಯ ಗಳಾದ ಶಂಖ (ಉ. ಪ್ರ., ಭಾಗ 4, ಪು. 136), ತುತ್ತೂರಿ (6-122) ಮುಂತಾದವು ಅಂದಿಗೂ ಇಂದಿಗೂ ಜನಪ್ರಿಯವಾಗಿರುವ ವಾದ್ಯಗಳೇ ಆಗಿವೆ. "ಕೋಣನಿದಿರಲಿ ಕಿನ್ನರಿಯ ಮೀಟಿದಂತೆ" (6-121) ಮುಂತಾದ ಗಾದೆಗಳಲ್ಲಿಯೂ ಪುರಂದರದಾಸರು ವಾದ್ಯಗಳನ್ನು ಉಲ್ಲೇಖಿಸಿದ್ದಾರೆ. ಕೆಲವು ವಾದ್ಯಗಳ ನಾದಗಳು ಹೇಗಿರುತ್ತವೆಂಬುದನ್ನು ಒಂದು ಕೀರ್ತನೆಯಲ್ಲಿ ಹೇಳಿದ್ದಾರೆ : "ಥಣ ಥಣವೆಂಬ ತಾಳದಂಡಿಗೆ ಭೇರಿ ಝಣಕು ಧಿಮಿಕು ಎಂಬ ಮದ್ದಳೆಯು ಝಣಝಣಿಸುವ ರವ ವೀಣೆ ಕಿನ್ನರಿಸ್ವರ.... ಷಡಪಂಚ ಘಂಟೆ ಝಾಗಟೆ...." (ಉ. ಪ್ರ., ಭಾಗ 1, ಪು. 95).

ನಾರದನ ಹಸ್ತಭೂಷಣವಾದ ಕೈವೀಣೆ (ತೆಲುಗಿನಲ್ಲಿ ದಂಡೆ) ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಹಲವೆಡೆ ಉಲ್ಲೇಖಗೊಂಡಿದೆ. ಅನ್ನಮಾಚಾರ್ಯರ ಕಾಲಕ್ಕೆ ಕೈವೀಣೆಯನ್ನು ಉಪಯೋಗಿಸಿ ಕೀರ್ತನೆ ಹಾಡುವುದು ವಾಡಿಕೆಯಾಗಿತ್ತೆಂದು ತಿಳಿದುಬರುತ್ತದೆ. "ಸತಿ ಇಷ್ಟಪಡುತ್ತಿರುವಳು ಚದುರಂಗವಾಡಬಾರದೇ, ಕೈವೀಣೆ ಮೀಟುತ್ತಾ ಹಾಡಂತ್ತೇನೆನ್ನುವೆ ಏಕೆ"[1] ಎಂದು ನಾಯಕನಿಗೆ ಹೇಳುವ ಸಂದರ್ಭವೊಂದನ್ನು ಆಚಾರ್ಯರು ಉದಾಹರಿಸಿದ್ದಾರೆ. "ನಿನ್ನ ಸುದ್ದಿ ಕೇಳಿ ಕೇಳಿ ಸ್ನೇಹ ತೋರುವುದು ನೋಡು, ಚೆನ್ನಾಗಿ ಮನೆಯಲ್ಲೇ ವೀಣೆ ನುಡಿಸಿದರೂ ಮೇಲು"[2] ಎಂಬ ಉಲ್ಲೇಖದಲ್ಲಿ ವೀಣೆಯ ಪ್ರಸಕ್ತಿ ಇದೆ. ಅನ್ನಮಯ್ಯ ವಿವಿಧ ಸಂದರ್ಭಗಳಲ್ಲಿ ಇನ್ನೂ ಅನೇಕ ವಾದ್ಯಗಳನ್ನು ಉಲ್ಲೇಖಿಸಿದ್ದಾರೆ.

ವಿವಿಧ ರಾಗತಾಳಗಳ ಬಳಕೆಯಿಂದ, ವೈವಿಧ್ಯಮಯ ರಚನೆಗಳಿಂದ ಕರ್ಣಾಟಕ ಸಂಗೀತಕ್ಕೆ ಪುರಂದರದಾಸರು ಮತ್ತು ಅನ್ನಮಾಚಾರ್ಯರು ನೀಡಿದ ಮಹತ್ತ್ವದ ಕಾಣಿಕೆಯನ್ನು ಇಲ್ಲಿ ಪರಿಶೀಲಿಸಬಹುದು. ಪುರಂದರದಾಸರು ಎಂಬತ್ತಕ್ಕಿಂತ ಹೆಚ್ಚು ರಾಗಗಳನ್ನು ಬಳಸಿದ್ದಾರೆ. ಇವುಗಳ ಪೈಕಿ ನವರೋಜು, ಜುಲಾವು, ಪೀಲು, ಪರಜು, ಹಂಸೇನಿ ಮುಂತಾದವು ಹಿಂದೂಸ್ಥಾನೀ ಸಂಗೀತದಿಂದ ಬಂದಂಥವು. ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ಕೆಲವು ಪ್ರಸಿದ್ಧ ರಾಗಗಳನ್ನು ಪುರಂದರದಾಸರು ತಮ್ಮ ಕೀರ್ತನೆಯೊಂದರಲ್ಲಿ ಪಟ್ಟಿ ಮಾಡಿದ್ದಾರೆ :

> ಮಾಳವಿ ದೇಶಿ ಗುರ್ಜರಿ ಭೈರವಿ ಗೌಳಿ ನಾಟಿ ಸಾವೇರಿ ಆಹೇರಿ
> ಪೂರ್ವಿ ಕಾಂಬೋದಿ ಪಾಡಿ ದೇಶಾಕ್ಷಿ ಶಂಕರಾಭರಣ ಮಾಳವ
> ವರಾಳಿ ಕಲ್ಯಾಣ ತೋಡಿ ಮುಖಾರಿ ಯರಳಿ ವಸಂತ ಬೌಳಿ ಧನ್ಯಾಸಿ
> ಸೌರಾಷ್ಟ್ರ ಗುಂಡಕ್ರಿಯ ರಾಮಕ್ರಿಯ ಮೇಘಕುರಂಜಿಯು ಪಾಡಲು ನೋಡಿ
>
> (ಪು. ಸಾ. ದ., 4, ಪು. 159).

ಸಂಗೀತದ ಪ್ರಥಮ ಪಾಠಗಳಿಂದ ಹಿಡಿದು ಪ್ರೌಢ ರಚನೆಗಳವರೆಗೆ ದಾಸರ ಪದಗಳಿವೆ. "ಲಂಬೋದರ ಲಕುಮಿಕರ" ಮುಂತಾದ ಪಿಳ್ಳಾರಿಗೀತಗಳು ಕರ್ಣಾಟಕ ಸಂಗೀತಾಭ್ಯಾಸದ ಪ್ರಥಮ ಗೀತಗಳಾಗಿವೆ. ಪುರಂದರದಾಸರು ರಚಿಸಿದ ಹಲವು ಬಗೆಯ ಸಂಗೀತರಚನೆಗಳಲ್ಲಿ ಮುಖ್ಯವಾದವು ಪದ, ಸುಳಾದಿ ಮತ್ತು ಉಗಾಭೋಗ. ನರಹರಿತೀರ್ಥರ ಕಾಲದಲ್ಲಿ ಸರಳವಾಗಿ ಪ್ರಾರಂಭವಾದ ಪದರಚನೆ ಪ್ರೌಢಿಮೆಯನ್ನುಗಳಿಸಿಕೊಳ್ಳುತ್ತಾ ಬಂತು. ಶ್ರೀಪಾದರಾಯರು, ಅನ್ನಮಾಚಾರ್ಯರು, ವ್ಯಾಸರಾಯರು ಅದಕ್ಕೆ ವಿಶಿಷ್ಟರೂಪಕೊಟ್ಟರು. ಪುರಂದರದಾಸರು ಇನ್ನೂ ಖಚಿತ ರೂಪ ನೀಡಿದರು. ತ್ಯಾಗರಾಜರು ಆದನ್ನು ಇನ್ನೂ ನಯಗೊಳಿಸಿದರು.

---

[1] ಸತಿ ವೇಡುಕ ಪಡೀನಿ ಚದುರಂಗ ಮಾಡರಾದಾ
ತತಿ ಪಾಡೇ ನಂಟಾವೇಲ ದಂಡೆ ಮೀಟೇವು (ಶೃ. ಸಂ., 29, ಪು. 238).

[2] ನೀ ಸುದ್ದುಲು ವಿನಿವಿನಿ ನೆಮ್ಮಿಗುಬ್ಬಿತಿಲುಕಂಟೇ
ವಾಸಿತೋನಿಂಟಲೋ ವೀಣವಾಯಿಂಚಿನಾ ಮೇಲು (ಅದೇ., ಪು. 24).

ಪುರಂದರದಾಸರು ಅರುವತ್ತುನಾಲ್ಕುಸಾವಿರ ಸುಳಾದಿಗಳನ್ನು ರಚಿಸಿದರೆಂದು ಹೇಳಲಾಗಿದೆ. ಸುಳಾದಿಗಳಲ್ಲಿ ತಾಳಸಂಖ್ಯೆ, ಚರಣ ಸಂಖ್ಯೆ ಇತ್ಯಾದಿಗಳನ್ನು ಒಂದು ಕ್ರಮ ಪದ್ಧತಿಗೆ ತಂದು ವ್ಯವಸ್ಥೆಗೊಳಿಸಿದ ಕೀರ್ತಿ ಪುರಂದರದಾಸರದು. ಅನಂತರದ ವಾಗ್ಗೇಯ ಕಾರರು ಪುರಂದರದಾಸರ ಕೆಲವು ಸುಳಾದಿಗಳನ್ನು ಮಾದರಿಗಳಾಗಿ ಸ್ವೀಕರಿಸಿದರು. ರಾಗ ವಿಸ್ತರಣೆಯಲ್ಲಿ ಉಂಟೆನ್ನಲಾದ ನಾಲ್ಕಂಶಗಳ ಸಂಗ್ರಹರೂಪ ಉಗಾಭೋಗ, ಉದ್ಗ್ರಾಹ ಮೇಲಾಪಕ, ಧ್ರುವ, ಆಭೋಗ ಎಂಬ ನಾಲ್ಕು ಅಂಶಗಳಿಂದ ಕೂಡಿರುವ ಉಗಾ ಭೋಗವನ್ನು ಒಂದು ರೀತಿಯ ವಚನ ರೂಪವೆನ್ನಬಹುದು. ಪುರಂದರದಾಸರು ಬರೆದರೆನ್ನಲಾದ ಲಕ್ಷಣ ಗೀತಗಳು, ತಾನವರ್ಣ, ತಿಲ್ಲಾನ ಮುಂತಾದವು ನಮಗೆ ದೊರೆತಿಲ್ಲ. ಇವರು ಪ್ರಸಿದ್ಧ ತಾಳಗಳೆಲ್ಲವನ್ನೂ ಬಳಸಿದ್ದಾರೆ; ಹೆಚ್ಚಾಗಿ ಬಳಸಿರುವುದು ಆದಿತಾಳ. ಇವರ ಹೆಚ್ಚಿನ ಕೀರ್ತನೆಗಳಲ್ಲಿ ಪಲ್ಲವಿ ಮತ್ತು ಚರಣಗಳು ಮಾತ್ರ ಕಂಡು ಬರುತ್ತವೆ.

ಪುರಂದರದಾಸರು ತಮಗಿಂತ ಹಿಂದಿನ ವಾಗ್ಗೇಯಕಾರರು, ಅದರಲ್ಲೂ ಮುಖ್ಯ ವಾಗಿ ವ್ಯಾಸರಾಯರು ಹಾಕಿಕೊಟ್ಟ ಶಾಸ್ತ್ರದ ಚೌಕಟ್ಟನ್ನೂ ಮೀರಿ ಪ್ರಯೋಗಗಳನ್ನು ಮಾಡಿದ್ದಾರೆ. ಕೆಲವರು ಇದನ್ನು ಆಕ್ಷೇಪಿಸಿದ್ದೂ ಉಂಟು. ಪುರಂದರದಾಸರನ್ನು 'ಪುರಾತನ'ರೆಂದೂ ಅವರ ಸುಳಾದಿಗಳನ್ನು ಲಕ್ಷ್ಯಕೀರ್ತನೆಗಳೆಂದೂ ಹೊಗಳಿದ ತುಳಜಾಜಿ (ಸಂಗೀತ ಸಾರಾಮೃತದ ಕರ್ತೃ, 1728-1736), ಅವರ ಕೀರ್ತನೆಗಳಲ್ಲಿ ಶಾಸ್ತ್ರ ವಿಧಿಗಳು ಕಾಣುವುದಿಲ್ಲವೆಂಬ ಆಕ್ಷೇಪಣೆ ಇತ್ತೆಂದು ಸೂಚಿಸಿದ್ದಾರೆ. ಈ ಆಕ್ಷೇಪಣೆ ಗಳನ್ನೂ ಮೀರಿ ದಾಸರ ರಚನೆಗಳು ಜನಪ್ರಿಯವಾದುವು.

ಪುರಂದರದಾಸರ ಕೀರ್ತನೆಗಳಲ್ಲಿರುವ ದೇಸಿ ಪ್ರತ್ಯೇಕವಾಗಿ ಪರಿಶೀಲಿಸಲರ್ಹ ವಾದುದು. ಮಾರ್ಗ ಸಂಗೀತಕ್ಕೆ ಲಕ್ಷ್ಯವಾಗುವಂಥ ರಚನೆಗಳ ಜೊತೆಗೆ ದೇಸಿಯ ಸೊಬಗನ್ನೂ ನೀಡಿದ್ದಾರೆ. ಮಾರ್ಗ ಸಂಗೀತವನ್ನು ಸಾಮಾನ್ಯ ಜನರಿಗೂ ಮುಟ್ಟುವಂತೆ ಮಾಡಿದ್ದು ದಾಸರ ದೊಡ್ಡ ಕೊಡುಗೆ ಎಂಬುದನ್ನು ವಿಮರ್ಶಕರು ಒಪ್ಪುತ್ತಾರೆ. ಅಂತೆಯೇ ದೇಸಿಯ ಚೆಲುವನ್ನು ವಿದ್ವಾಂಸರಿಗೆ ತಲುಪಿಸಿದ್ದೂ ಕೂಡ ಗಮನಾರ್ಹ. ಪುರಂದರದಾಸರ ಕೀರ್ತನೆಗಳಲ್ಲಿ ಜನಪದ ಧಾಟಿಯ ಲಾಲಿ, ಜೋಗುಳ, ಸೋಬಾನೆ ಮುಂತಾದವುಗಳ ಸ್ಫೂರ್ತಿಯಿಂದ ರಚಿಸಿದ ಕೃತಿಗಳು ಹಲವು ಕಂಡುಬರುತ್ತವೆ. ಈ ವಿಷಯದಲ್ಲಿ ಅನ್ನಮಾಚಾರ್ಯರಿಗೂ ಪುರಂದರದಾಸರಿಗೂ ಬಹಳಷ್ಟು ಹೋಲಿಕೆ ಇದೆ.

ಕರ್ಣಾಟಕ ಸಂಗೀತಕ್ಕೆ ಅನ್ನಮಾಚಾರ್ಯರ ಕೊಡುಗೆಯ ಬಗೆಗಿನ ತಿಳುವಳಿಕೆ ವಿದ್ವಾಂಸರಲ್ಲೂ ಬಹಳ ಕಡಿಮೆ ಎಂದೇ ಹೇಳಬೇಕು. ಪುರಂದರದಾಸರಿಗಿಂತಲೂ ವ್ಯಾಸರಾಯರಿಗಿಂತಲೂ ಹಿರಿಯರಾದ ಅನ್ನಮಾಚಾರ್ಯರು ಸಾವಿರಾರು ಕೀರ್ತನೆಗಳನ್ನು ಬರೆದರೆಂಬುದು ಕೇವಲ ಹೇಳಿಕೆಯಲ್ಲ. ಈಗ ಸಿಕ್ಕಿರುವವೇ ಹನ್ನೆರಡು ಸಾವಿರಕ್ಕೂ ಮಿಗಿಲಾಗಿವೆ. ''ಪದ ಕವಿತಾ ಪಿತಾಮಹ'' ಎಂಬ ಅವರ ಬಿರುದು ಆಂಧ್ರದಮಟ್ಟಿ

ಗಾದರೂ ಸತ್ಯವೆಂದೇ ಹೇಳಬೇಕು. ಅವರಷ್ಟು ವಿಸ್ತೃತವಾಗಿ, ವೈವಿಧ್ಯಮಯವಾಗಿ, ಶಾಸ್ತ್ರೀಯವಾಗಿ ಮಾರ್ಗ ಮತ್ತು ದೇಸಿಯ ಸೊಬಗಿನಿಂದ ಕೂಡಿದ ಸಾವಿರಾರು ಸಂಕೀರ್ತನೆಗಳನ್ನು ರಚಿಸಿದವರು ಅವರಿಗಿಂತ ಪೂರ್ವದಲ್ಲಿ ಯಾರೂ ಇರಲಿಲ್ಲ. ಸಂಕೀರ್ತನ ಲಕ್ಷಣವೆಂಬ ಸಂಸ್ಕೃತ ಲಕ್ಷಣಗ್ರಂಥವನ್ನೂ, ಸಾವಿರಾರು ಲಕ್ಷ್ಯಗಳನ್ನೂ ಬರೆದು ಸಂಕೀರ್ತನಕ್ಕೆ ಜೀವನವನ್ನೇ ಮುಡಿಪಾಗಿಟ್ಟು, ತಮ್ಮ ಕುಟುಂಬವನ್ನೇ ಕೀರ್ತನ ಸೃಷ್ಟಿಗೆ ತೊಡಗಿಸಿದ ಅನ್ನಮಾಚಾರ್ಯರಿಗೆ 'ಪದಕವಿತಾಪಿತಾಮಹ' ಎಂಬ ಬಿರುದು ಸಾರ್ಥಕ ವಾಗಿದೆ.

ಅನ್ನಮಾಚಾರ್ಯರ ಸಂಕೀರ್ತನೆಗಳು ಸಾವಿರಾರು ಸಂಖ್ಯೆಯಲ್ಲಿ ಸಿಕ್ಕುತ್ತಿದ್ದರೂ, ಅವರ ಕಾಲದಲ್ಲಿ ಆ ಕೀರ್ತನೆಗಳನ್ನು ಹೇಗೆ ಗಾನಮಾಡುತ್ತಿದ್ದರೆಂಬುದು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಅವರ ಕಾಲಕ್ಕೆ ಕರ್ಣಾಟಕ ಸಂಗೀತ ಅಷ್ಟೇನು ವಿಕಾಸಹೊಂದಿರಲಿಲ್ಲ; ಆಗ ಹೆಚ್ಚಿನ ರಾಗಗಳೂ ಪ್ರಚಾರದಲ್ಲಿರಲಿಲ್ಲ. ಆಚಾರ್ಯರ ಸಾಹಿತ್ಯಮಾತ್ರ ಲಭ್ಯವಿದ್ದು ಆ ಕಾಲದ ಗಾನಪದ್ಧತಿ ತಿಳಿಯದ್ದಾಗಿದೆ. ಅವರ ಕೀರ್ತನೆಗಳು ಸಾವಿರ ಸಂಖ್ಯೆಯಲ್ಲಿದ್ದರೂ ತಾಮ್ರಪತ್ರಗಳಲ್ಲಿ ಸೂಚಿಸಿದ ರಾಗಗಳು ಮಾತ್ರ ಸುಮಾರು ತೊಂಬತ್ತು ಮಾತ್ರ. ಹೆಚ್ಚಾಗಿ ಬಳಸಿರುವ ರಾಗಗಳು ಸುಮಾರು ಇಪ್ಪತ್ತೈದು ಮಾತ್ರ. ಇಂದಿಗೂ ಪ್ರಚಾರ ದಲ್ಲಿರುವ ಕೆಲವು ರಾಗಗಳೆಂದರೆ: ಆಹಿರಿ, ಕನ್ನಡಗೌಳ, ಕೇದಾರಗೌಳ, ಗುಂಡಕ್ರಿಯ, ಧನ್ಯಾಸಿ, ನಾಟ, ಬಿಲಹರಿ, ಬೌಳಿ, ಭೂಪಾಲ, ಭೈರವಿ, ಮಧ್ಯಮಾವತಿ, ಮಾಳವಿ, ಮುಖಾರಿ, ವಸಂತ, ಸಾರಂಗ, ಸೌರಾಷ್ಟ್ರ, ಹಿಂದೋಳ ಮುಂತಾದವು. ಸರಿಯಾದ ಆರೋಹಣ, ಅವರೋಹಣ ಕ್ರಮ ಇಂದಿಗೂ ತಿಳಿಯದಿರುವ ತೆಲುಗು ಕಾಂಬೋದಿ, ದೇಶಿ, ಬೌಳಿರಾಮಕ್ರಿಯ, ಭಲ್ಲಾಟಿ, ಸಾಮವರಾಳಿ ಮುಂತಾದ ರಾಗಗಳೂ ಸೂಚಿತ ವಾಗಿವೆ. ಇಂದು ಅಧಿಕ ಪ್ರಚಾರದಲ್ಲಿರುವ ಅನೇಕ ರಾಗಗಳನ್ನು ಅವರು ಬಳಸಿಲ್ಲ. ಮೇಳಕರ್ತ ರಾಗಗಳಲ್ಲಿ ತೋಡಿ, ಮಾಳವಗೌಳ, ಶಂಕರಾಭರಣ ಮುಂತಾದ ಕೆಲವೇ ಕೆಲವನ್ನು ಬಳಸಿದ್ದಾರೆ. ಅನ್ನಮಾಚಾರ್ಯರ ಕಾಲದಲ್ಲಿ ಬಳಕೆಯಲ್ಲಿದ್ದ ಕೊಂಡ ಮಲಹರಿ, ಗೀತನಾಟ, ಬೌಳಿರಾಮಕ್ರಿಯ, ಭಲ್ಲಾಟಿ ಮುಂತಾದ ರಾಗಗಳನ್ನು ತ್ಯಾಗರಾಜಾದಿ ಈಚಿನ ವಾಗ್ಗೇಯಕಾರರು ಬಳಸಿಲ್ಲ.

ಅನ್ನಮಾಚಾರ್ಯರಲ್ಲಿ ಮಾರ್ಗಕ್ಕಿಂತ ದೇಸಿಯ ಸೊಬಗೇ ಹೆಚ್ಚು. ಜನಪದ ಗೀತೆಗಳಿಂದ ಸ್ಫೂರ್ತಿಪಡೆದು ಹಲವು ಜನಪದ ಗೀತ ಪ್ರಕಾರಗಳಲ್ಲಿ ಅನ್ನಮಯ್ಯ ರಚನೆ ಮಾಡಿದ್ದಾರೆ. "ಜೋ ಅಚ್ಯುತಾನಂದ ಜೋ ಜೋ ಮುಕುಂದ" ಎಂಬ ಅವರ ಕೀರ್ತನೆ ಜೋಗುಳ ಪದವಾಗಿ ಇಂದೂ ಪ್ರಸಿದ್ಧಿ ಪಡೆದಿದೆ. ಆಚಾರ್ಯರು ತೊಟ್ಟಿಲ ಹಾಡು ಗಳನ್ನೂ ರಚಿಸಿದ್ದಾರೆ. ಇವರ ಕಾಲದಲ್ಲಿ 'ಡೋಲೋತ್ಸವ' ಎಂಬ ಹೆಸರಿನಲ್ಲಿ ತಿರುಮಲೆಯ ವೇಂಕಟೇಶ್ವರನನ್ನು ತೊಟ್ಟಿಲಿಗೆ ಹಾಕುವ ಉತ್ಸವ ನಡೆಯುತ್ತಿತ್ತು. ಈ ಉತ್ಸವಕ್ಕಾಗಿ ಆಚಾರ್ಯರು ರಚಿಸಿದ ಹಾಡೊಂದರಲ್ಲಿ ದಶಾವತಾರದ ವರ್ಣನೆ ಇದೆ.

ಡೋಲಾಯಾಂಚಲ ಡೋಲಾಯಾಂ ಹರೆ ಡೋಲಾಯಾಂ
ಮೀನಕೂರ್ಮ ವರಾಹಾಮೃಗಪತಿ ಯವತಾರಾ
ದಾನವಾರೇ ಗುಣಶೌರೇ ಧರಣೀಧರ ಮರುಜನಕಾ
ವಾಮನ ರಾಮ ರಾಮ ವರ ಕೃಷ್ಣ ಅವತಾರಾ
ಶ್ಯಾಮಲಾಂಗಾ ರಂಗ ರಂಗಾ ಸಾಮಜವರದಾ ಮುರಹರಣಾ (7-140).

ಇವರ ಸುವ್ವಿ ಹಾಡುಗಳು ಕೂಡ ಸುಪ್ರಸಿದ್ಧವಾಗಿವೆ. "ಸುವ್ವೀ, ಸುವ್ವಾ, ಸುವ್ವಾನಿ ಸದತುಲು ದುಚೆಲರೋಲಾಲ" (3-419) ಎಂಬ ಪದದಲ್ಲಿ ಸುವ್ವಿ ಸುವ್ವ ಸುವ್ವ ಎಂದು ಸುದತಿಯರು ಕುಟ್ಟುವ ರೀತಿಯನ್ನು ಹೇಳಿದ್ದಾರೆ. ಜನಪದ ಪದಸಾಹಿತ್ಯ ದಲ್ಲಿ ಕಂಡುಬರುವ ವೈವಿಧ್ಯಮಯ ಪ್ರಕಾರಗಳನ್ನು ಅನ್ನಮಾಚಾರ್ಯರು ಕೀರ್ತನ ರೂಪದಲ್ಲಿ ಬರೆದು ತಮ್ಮ ಕೃತಿಗಳನ್ನು ಸಾಮಾನ್ಯ ಜನರಿಗೂ ತಲುಪುವಂತೆ ಮಾಡಿದ್ದಾರೆ.

ಸಂಗೀತ ಸಂಪ್ರದಾಯದ ಹಿನ್ನೆಲೆಯಲ್ಲಿ ಪುರಂದರದಾಸರಿಗೂ ಅನ್ನಮಾಚಾರ್ಯ ರಿಗೂ ತುಂಬ ಹೋಲಿಕೆ ಇರುವುದನ್ನು ಕಾಣಬಹುದು. ಅನೇಕ ರಾಗಗಳನ್ನು ಇಬ್ಬರೂ ಬಳಸಿರುವುದು, ಮಾರ್ಗ ಮತ್ತು ದೇಸಿ ಎಂಬ ಎರಡು ಪದ್ಧತಿಗಳಿಗೂ ಪ್ರಾಧಾನ್ಯ ಕೊಟ್ಟಿರುವುದು, ಜನಪದ ಮಾಧ್ಯಮದ ಅನೇಕ ಪ್ರಕಾರಗಳನ್ನು ಬಳಸಿಕೊಂಡಿರುವುದು ಮುಂತಾದವನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಇಂತಹ ವೈವಿಧ್ಯಮಯ ಸಂಗೀತದ ಪರಿಣಾಮ ಎಂಥದೆಂಬುದನ್ನು ಪುರಂದರ ದಾಸರು ಕೀರ್ತನೆಯೊಂದರಲ್ಲಿ ಹೀಗೆ ವರ್ಣಿಸಿದ್ದಾರೆ:

ಬಾಡಿದ ಮಾಮರಗಳು ಗೊನೆಯೊಡೆದುವು
ತೀಡುವ ಮಾರುತ ಮಂದಗತಿಗೊಯ್ಯೆ....
ಪಾಡಲೊಲ್ಲವು ಅಳಿಕುಲಗಳು
ಹೇಡಿಗೊಂಡವು ಜಕ್ಕವಕ್ಕಿ ಗಿಳಿ ಮಾತಾಡದೆ ಕಳೆಗುಂದಿದುವು ಕೋಗಿಲೆ
ಓಡಾಟ ವೈರಾಟಬಿಟ್ಟು ಖಗಮೃಗ
ಗಾಢ ನಿದ್ರಾವಶವಾದುವು (4-93).

## ನೃತ್ಯ-ರೂಪಕ

ಕೀರ್ತನೆಗಳಿಂದ ನೃತ್ಯ ಮತ್ತು ರೂಪಕಗಳ ಅಸ್ತಿತ್ವ, ವಿಕಾಸ, ಸ್ವರೂಪ ಹಾಗೂ ಪ್ರಭೇದಗಳ ಅವಗಾಹನೆ ಸಾಧ್ಯವಿಲ್ಲ. ಆದರೂ ಕಲಾತ್ಮಕ ರೂಪಗಳಲ್ಲಿ ಅತಿ ಪ್ರಧಾನ ವಾದ ನೃತ್ಯ, ರೂಪಕಗಳನ್ನು ಕುರಿತ ಕೆಲವು ಉಲ್ಲೇಖಗಳನ್ನು ಇಲ್ಲಿ ಪರಿಶೀಲಿಸಬಹುದು.

ನೃತ್ತ, ನೃತ್ಯ ಮತ್ತು ನಾಟ್ಯದ ಅನಂತ ಪ್ರಭೇದಗಳು ಸಾವಿರಾರು ವರ್ಷಗಳಿಂದ ಜನಮನವನ್ನು ರಂಜಿಸುತ್ತಾ ಬಂದಿವೆ. ನೃತ್ಯ ನಾಟ್ಯಗಳನ್ನು ಕುರಿತ ವಿಶ್ವಕೋಶದಂಥ 'ನಾಟ್ಯಶಾಸ್ತ್ರ' ಭಾರತೀಯ ಕಲಾಶಾಸ್ತ್ರಕ್ಕೆ ಮಹತ್ತ್ವದ ಕೊಡುಗೆ. ಭಾರತದ ಶಿಷ್ಟ

ನಾಟ್ಯ ಪರಂಪರೆ 'ನಾಟ್ಯಶಾಸ್ತ್ರ'ಕ್ಕೆ ತುಂಬ ಋಣಿಯಾಗಿದೆ. ಮಾರ್ಗ ನೃತ್ಯ ಮತ್ತು ನಾಟ್ಯ ಪರಂಪರೆಗೆ ಭಿನ್ನವಾದ ದೇಶಿ ಶೈಲಿ ಸಾವಿರಾರು ವರ್ಷಗಳಿಂದ ಜನರಂಜಕವಾಗಿ ಮುಂದುವರಿಯುತ್ತಿದೆ. ದಂಡಲಾಸ್ಯ (ಕೋಲಾಟ), ಕುಂಡಲಿ, ಪ್ರೇಂಖಣ, ಪೇರಿಣಿ ತಾಂಡವ, ಚಿಂದು, ಗೊಂಡ್ಲಿ (ಕುಂಡಲ ನೃತ್ಯ) ಮುಂತಾದ ದೇಶಿ ನೃತ್ಯಗಳನ್ನು 'ಅಭಿಲಷಿತಾರ್ಥ ಚಿಂತಾಮಣಿ', 'ನೃತ್ತ ರತ್ನಾವಲಿ' ಮುಂತಾದ ಶಾಸ್ತ್ರಗ್ರಂಥಗಳು ಹಾಗೂ ಪ್ರಾಚೀನ ಕಾವ್ಯಗಳು ಹೆಸರಿಸಿವೆ.

ರೂಪಕ ಸಮಾಹಾರ ಕಲೆ. ನೃತ್ಯ, ಸಂಗೀತ, ವೇಷಧಾರಣೆ, ಚಿತ್ರಕಲೆ, ಸಂವಾದ ಮುಂತಾದ ಅನೇಕ ಕಲೆಗಳು ಸೇರಿ ರೂಪಕವಾಗುತ್ತದೆ. ಜನಪದ ರೂಪಕಗಳಾದ ಬಹುರೂಪ, ತೊಗಲು ಗೊಂಬೆಯಾಟ, ಸೂತ್ರದ ಗೊಂಬೆಯಾಟ, ಯಕ್ಷಗಾನ, ಬಯಲಾಟ ಮುಂತಾದ ಪ್ರದರ್ಶನ ಕಲೆಗಳು ಕರ್ನಾಟಕಾಂಧ್ರಗಳಲ್ಲಿ ನೂರಾರು ವರ್ಷಗಳಿಂದ ಜನಪ್ರಿಯವಾಗಿವೆ. ತಮ್ಮ ಕಾಲದಲ್ಲಿ ಜನರನ್ನು ರಂಜಿಸುತ್ತಿದ್ದ ಈ ಕೆಲವು ರೂಪಕಗಳನ್ನು ಪುರಂದರದಾಸರು ಮತ್ತು ಅನ್ನಮಾಚಾರ್ಯರು ಉಲ್ಲೇಖಿಸಿದ್ದಾರೆ.

ಗೇಯಗುಣ ಹೆಚ್ಚಾಗಿರುವ ಕೀರ್ತನೆಗಳು ಭಾವಬಂಧುರವಾಗಿ ಅಭಿನಯಕ್ಕೆ ಯೋಗ್ಯವಾಗಿರುತ್ತವೆ. ಪುರಂದರದಾಸರ ಕೆಲವು ಕೀರ್ತನೆಗಳಲ್ಲಿ ಕುಣಿತಕ್ಕೆ ತಕ್ಕ ಲಯವಿದೆ. ಕೆಲವು ಕೀರ್ತನೆಗಳು ಕುಣಿತವನ್ನು ವರ್ಣಿಸುವಂಥವಾಗಿವೆ. ಬಾಲಕೃಷ್ಣನ ಆಟಗಳನ್ನು ಅನೇಕ ಸ್ಥಳಗಳಲ್ಲಿ ಅದ್ಭುತವಾಗಿ ವರ್ಣಿಸಲಾಗಿದೆ.

> ಘಲು ಘಲು ಘಲುರೆಂಬ ಪೊನ್ನಂದುಗೆ ಗೆಜ್ಜೆ
> ಹೊಳೆ ಹೊಳೆಯುವ ಪಾದ ಊರುತಲಿ
> ನಲಿನಲಿದಾಡುವ ಉಂಗುರ ಅರಳೆಲೆ
> ಥಳಥಳಥಳ ಹೊಳೆಯುತ ಶ್ರೀಕೃಷ್ಣ
>
> ಕಿಣಿಕಿಣಿಕಿಣಿಯೆಂಬ ಕರದ ಕಂಕಣ ಬಳೆ
> ಝಣಝಣಝಣರೆಂಬ ನಡುವಿನ ಗಂಟೆ
> ಗಣಗಣಗಣಯೆಂಬ ಪಾದದ ತೊಡವಿನ
> ಕುಣಿಕುಣಿಕುಣಿದಾಡುತ ಶ್ರೀಕೃಷ್ಣ (4-43).

ಬಾಲಕೃಷ್ಣನ ಕಾಳಿಂದಿ ಮಡುವಿನ ನೃತ್ಯ ಅನೇಕ ಭಕ್ತಕವಿಗಳ ವರ್ಣನೆಗಳಲ್ಲಿ ಮೂಡಿಬಂದಿದೆ. ಎದೆಯಲ್ಲಿ ಕೃಷ್ಣ ಕುಣಿಯಬೇಕೆಂದು ಭಕ್ತಿಯಿಂದ ಹಾಡುವ ಗೋಪಿಕಾ ಕಾಂತೆಯಂತೆ ಪುರಂದರದಾಸರು ಒಂದೆಡೆ ಹೀಗೆ ಬರೆದಿದ್ದಾರೆ: "ಭಾಮೆಯೆಳಸಿರಲು ತೋಂಧಿಗಿ ಧಿಗಿ ಧಾಂಧಾಂಧಿಮಿಗೊಳಿಸಿ ಅಜಮೃದಂಗವ ತಟ್ಟೆ ಇಂದುಧರ ತಾಳಪಿಡಿದು ಘಟ್ಟಿಸಲು ತಥಂತನನವೆಂದು ಸ್ವರವೆತ್ತಿ ನಾರದ ಪಾಡಲು ಕುಣಿ ಎದೆಯಲ್ಲಿ ಕೃಷ್ಣ" (4-88).

"ಆಡಿದನೋ ರಂಗ ಅದ್ಭುತದಿಂದಲಿ...." ಎಂಬುದು ಕೃಷ್ಣನ ನರ್ತನದ ಅದ್ಭುತ ವರ್ಣನೆ. ಅಂಬುರುಹೋದ್ಭವ, ಅಖಿಳಸುರರು ಅಂಬರದಲ್ಲಿ ಸ್ತುತಿಸುತ್ತಿದ್ದರು. ರಂಭೆ ಊರ್ವಶಿ ರಮಣಿಯರೆಲ್ಲರು ಚೆಂದದಿ ಭರತನಾಟ್ಯ ನಟಿಸುತ್ತಿದ್ದರು.

ಝಂತಕ ತಕಧಿಮಿ ತದಿಗಣತೋಂ ಎಂದು
ಝಂಪೆ ತಾಳದಿ ತುಂಬುರನೊಪ್ಪಿಸೆ
ಧಾಪಮಪಧಸರಿ ಎಂದು ಧ್ವನಿಯಿಂದ
ನಾರದ ತುಂಬುರ ಗಾನವ ಮಾಡಲು
ನಂದಿಯು ಚೆಂದದಿ ಮದ್ದಲೆ ಹಾಕಲು
ಫಣಿಯ ಮೆಟ್ಟಿ ಬಾಲವ ಕೈಯಲಿ ಪಿಡಿದು
ಫಣ ಫಣಿಸುತ ನಾಟ್ಯವನಾಡೆ
ದಿನಪಮಂಡಲದಂತೆ ಪೊಳೆಯುವ ಮುಖದೊಳು
ಚಲಿಸುತ ನೀಲಕೇಶಗಳಾಡೆ
ಕಾಲಲಂದಿಗೆ ಗೆಜ್ಜೆ ಘುಲು ಘುಲು ಘುಲು ಘುಲು
ಘುಲುರೆಂದು ಉಡಿಗೆಜ್ಜೆ ಗಂಟೆಗಳಾಡೆ....(4-87)

ಎಂದು ಕೃಷ್ಣನಾಡಿದ ನೃತ್ಯ ವರ್ಣಿತವಾಗಿದೆ.

ಭಾಗವತ ಮೇಳಗಳು ನಮ್ಮಲ್ಲಿ ಕೆಲವು ನೂರು ವರ್ಷಗಳಿಂದ ಇವೆ. "ಸಕಲ ಭಾಗವತರು ಗತಿತಾಳ ಮೇಳದಿಂದ ತಕಕಿಟಕಿಟತಕಧಿಮಿಕೆಂದು" (ಉ. ಪ್ರ., ಭಾಗ 3, ಪು. 22) ಕುಣಿಯುವ ದೃಶ್ಯವನ್ನು ಪುರಂದರದಾಸರು ವರ್ಣಿಸಿದ್ದಾರೆ.

ಕೋಲಾಟ ದಕ್ಷಿಣ ಭಾರತದ ಎಲ್ಲ ಪ್ರದೇಶಗಳಲ್ಲೂ ಕಂಡುಬರುವ ಜನಪದ ಕುಣಿತ. ಕೆಲವು ದೇವಸ್ಥಾನಗಳಲ್ಲಿ ಕೋಲಾಟದ ಪ್ರತಿಮೆಗಳು ಕೆತ್ತಲ್ಪಟ್ಟಿವೆ. ಕೋಲಾಟ ದಂಥ ಜನಪ್ರಿಯ ಕುಣಿತಗಳು ಪುರಂದರದಾಸರ ಕಾಲಕ್ಕೆ ವಿನೋದ ಪ್ರಕಾರಗಳಾಗಿದ್ದುವು. "ತಿರುಪತಿ ವೇಂಕಟರಮಣ, ನಿನಗೇತಕೆ ಬಾರದು ಕರುಣ, ನಂಬಿದೆ ನಿನ್ನಯ ಚರಣ, ಪರಿಪಾಲಿಸಬೇಕೊ ಕರುಣ" (ಪು. ಸಾ. ದ., 1, ಪು. 270-72) ಎಂಬ ಕೀರ್ತನೆಯಲ್ಲಿ

ಅಲ್ಲಲ್ಲಿ ಜನಗಳ ಕೂಟ ಮ
ತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮ
ತ್ತಲ್ಲಿಂದ ಊರಿಗೆ ಓಟ

ಎಂದು ತಿರುಪತಿಯಲ್ಲಿಯ ಜಾತ್ರೆಯ ವರ್ಣನೆ ಮಾಡಲಾಗಿದೆ.

ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ದೇಶಿ ಕುಣಿತಗಳಿಗೆ ತಕ್ಕ ಲಯಗಳು ಹಲವು ಕಂಡುಬರುತ್ತವೆ. ಜನಪದ ಕುಣಿತಗಳಲ್ಲಿ ಬಳಸುವ 'ಚಾಂಗುಭಳಾ', 'ಅಲ್ಲೋ ನೇರೇ ಡಲ್ಲೋ', 'ತಂದನಾನ' ಮುಂತಾದ ಪದಬಂಧಗಳನ್ನು ಅನೇಕ ಕೀರ್ತನೆಗಳಲ್ಲಿ

ಆಚಾರ್ಯರು ಬಳಸಿದ್ದಾರೆ. ಅಲಮೇಲುಮಂಗೈಯ ನರ್ತನವನ್ನು ವರ್ಣಿಸುವ ಕೀರ್ತನೆಯೊಂದು ಅದ್ಭುತವಾಗಿ ಮೂಡಿದೆ. ''ಅಲರಂಗಳು ಸುರಿಯಲು ಆಡಿದಳು ಮುಂಗುರುಳ ಕಂಣಿತದ ಅಲಮೇಲುಮಂಗ....ಅರೆತೆರೆಯ ಮರೆಯಲ್ಲಿ ಆಡಿದಳು.... ಕಾಲುಂಗುರದ ಮಧುರಧ್ವನಿ ಕೇಳಿಸುತ್ತಿರಲು ವಜ್ರದ ಆಭರಣಗಳು ಹೊಳೆಯುತ್ತಿರಲು, ಚಿಂದು ಹಾಡುಗಳಿಂದ ಸುಂದರ ಆಟಗಳಿಂದ, ಅಂದುಗೆಯ ಸದ್ದುಗಳಿಂದ ಆಡಿದಳು....''[1] ಈ ಹಾಡಿನಲ್ಲಿ ಉಲ್ಲೇಖಗೊಂಡ 'ಚಿಂದು' ಒಂದು ಕಂಣಿತ ಪ್ರಕಾರ. ಗತಿಭೇದದಿಂದ ಅಭಿನಯಾನುಕೂಲವಾದ ಕೀರ್ತನೆಗಳನ್ನು 'ಚಿಂದು' ಎಂದು ವ್ಯವಹರಿಸುವುದುಂಟು. ಜಾಯುಸೇನಾಪತಿಯ 'ನೃತ್ತರತ್ನಾವಲಿ'ಯಲ್ಲಿ 'ಗೀತಾರ್ಥಾಭಿನಯೋ ಪೇತೈರ್ದ್ವಿಪದ್ಯೈ ಶ್ಚಿಂದು ಸಂಜ್ಞಕೈಃ' ಎಂದು ಹೇಳಲಾಗಿದೆ. ಚಿಂದುಭಾಗವತ ಎಂಬ ಹೆಸರಿನ ಜನಪದ ರೂಪಕವೊಂದು ಆಂಧ್ರದಲ್ಲಿ ಇಂದಿಗೂ ಪ್ರಚಾರದಲ್ಲಿದೆ. ಅನ್ನಮಯ್ಯ 'ಚಿಂದು' ಎಂಬ ಹೆಸರನ್ನು ಹಲವು ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದು ಮಾತ್ರವಲ್ಲದೆ ಚಿಂದುಗಳನ್ನು ಕೂಡ ರಚಿಸಿದ್ದಾರೆ. ''ಚಿತ್ರವಿಸು ನಮ್ಮ ಮಾತ ಶ್ರೀ ನಾರಸಿಂಹ, ಚಿತ್ತಜ ಜನಕನೇ ಶ್ರೀ ನಾರಸಿಂಹ....ಕೆಂದಾವರೆರೇಕಿನ ಉಗುರುಳ್ಳ ಶ್ರೀ ನಾರಸಿಂಹ ನಿನ್ನ ಮೇಲೆ ಚಿಂದುಗಳನ್ನು ಹಾಡುವೆವು ಶ್ರೀ ನಾರಸಿಂಹ''[2] ಎಂಬುದೊಂದು ಚಿಂದು. ''ಚಿಂದುಗಳಿಗೆ ಆಡುವ ಸೀಮಂತಿನೀಮಣಿಯರು ಚೆನ್ನಾಗಿ ಎರಡು ಕಡೆ ಸೇವಿಸುತ್ತಿರಲು''[3] ಎಂದು ಹೇಳಿರು ವುದರಿಂದ ಚಿಂದು ಹಾಡುಗಳಿಗೆ ತಕ್ಕಂತೆ ತರುಣಿಯರು ನರ್ತನವಾಡುತ್ತಿದ್ದರೆಂದು ತಿಳಿದುಬರುತ್ತದೆ.

---

[1] ಅಲರುಲು ಗುರಿಯಗ ನಾಡೆನದೇ
ಅಲಕಲಗುಲುಕುಲ ನಲಮೇಲುಮಂಗ....
ಅರತೆರೆ ಮರುಗುನ ನಾಡೆನದೇ....
ಮಟ್ಟೆಪುಮಲಪುಲ ಮಟ್ಟೆಲ ಕೆಲಪುಲ
ತಟ್ಟೆಡಿ ನಡಪುಲ ದಾಟೆನದೇ
ಪೆಟ್ಟೆನ ವಜ್ರಪು ಪೆಂಡೆಪುದಳುಕುಲು....
ಚಿಂದುಲ ಪಾಟಲ, ಶಿರಿ ಪೊಲಯಾಟಲ
ಅಂದೆಲ ಮ್ರೋತಲ ನಾಡೆನದೇ....(ತಾ. ಅ. ಪಾ., ಪು. 1)

[2] ಚಿತ್ರಗಿಂಚು ಮಾಮಾಟಲು ಶ್ರೀ ನಾರಸಿಂಹ
ಚಿತ್ರಜನಕವೋ ಶ್ರೀ ನಾರಸಿಂಹ....
ಚೆಂದಮ್ಮಿ ರೇಕುಗೋಳ್ಲ ಶ್ರೀ ನಾರಸಿಂಹ ನೀಪೈ
ಚಿಂದುಲೆಲ್ಲ ಬಾಡೇಮು ಶ್ರೀ ನಾರಸಿಂಹ (2-236).

[3] ಚಿಂದುಲಕು ನಾಡೇಟಿ ಸೀಮಂತಿನೀ ಮಣುಲು ಚೆಲಗಿ ಯಿರುಗಡ
ಗೊಲುವಗಾನು (3-296).

ಆಂಧ್ರದಲ್ಲಿ ಮಾರ್ಗಶೀರ್ಷ ಮಾಸದಲ್ಲಿ ತರುಣಿಯರು ಮನೆಯ ಪ್ರಾಂಗಣದಲ್ಲಿ ವೃತ್ತಾಕಾರವಾಗಿ ಕುಣಿಯುತ್ತಾ ಚಪ್ಪಾಳೆ ತಟ್ಟುತ್ತಾ 'ಗೊಬ್ಬಿ' ಹಾಡುಗಳನ್ನು ಹಾಡುತ್ತಾರೆ. ಇದೊಂದು ಜನಪ್ರಿಯ ಕುಣಿತ ಮತ್ತು ಹಾಡು. ಈ ಹಾಡುಗಳಲ್ಲಿ ಗೊಬ್ಬಿ, ಗೊಬ್ಬಿಳ್ಳೋ, ಗೊಬ್ಬಿಯಳ್ಳೋ ಮುಂತಾದ ಪದಗಳು ಪುನರಾವೃತ್ತವಾಗುತ್ತವೆ. 'ಗೋಪಿಕೆ' ಎಂಬುದೇ 'ಗೊಬ್ಬಿ'ಯಾಯಿತೆಂದೂ ಇದನ್ನು ರಾಸಲೀಲಾ ನೃತ್ಯದ ಒಂದು ಪ್ರಕಾರವೆಂದೂ ಕೆಲವರು ಭಾವಿಸಿದ್ದಾರೆ. ಗರ್ಭನೃತ್ಯವೆಂಬ ಕುಂಡಲಾಕಾರ ನೃತ್ಯವೇ ಗೊಬ್ಬಿಯಾಯಿತೆಂಬ ಅಭಿಪ್ರಾಯವೂ ಇದೆ. ಅನ್ನಮಾಚಾರ್ಯರು ಬರೆದ ಪ್ರಸಿದ್ಧ ಗೊಬ್ಬಿ ಪದಗಳಲ್ಲಿ ಇದೊಂದು :

ಕೊಳದ ಕಳ್ಳನಿಗೆ ಗೊಬ್ಬಿಳ್ಳೋ ಯದು
ಕುಲಸ್ವಾಮಿಗೆ ಗೊಬ್ಬಿಳ್ಳೋ
ಬೆಟ್ಟ ಕೊಡೆಯುಮಾಡಿ ಹಸುಗಳ ಕಾಪಾಡಿದ
ಒಂದು ಶಿಶುವಿಗೆ ಗೊಬ್ಬಿಳ್ಳೋ
ಖಳದೈತ್ಯರಿಗೆಲ್ಲ ಅರಿಯಾದ
ಗಂಡರ ಗಂಡನಿಗೆ ಗೊಬ್ಬಿಳ್ಳೋ. [1]

ಆಚಾರ್ಯರ ರಚನೆಗಳಲ್ಲಿ ಇನ್ನೂ ಅನೇಕ ಬಗೆಯ ನೃತ್ಯಗೀತೆಗಳಿವೆ. ಕೋಲಾಟ, ಚಾಂಗುಭಳಾ ಮುಂತಾದವು ಸುಮಾರು ಹನ್ನೆರಡನೆಯ ಶತಮಾನದಿಂದಲೂ ಆಂಧ್ರದಲ್ಲಿ ದ್ದುದ್ದಕ್ಕೆ, ಕಾವ್ಯ, ಶಾಸ್ತ್ರ, ಶಿಲ್ಪ ಮುಂತಾದವು ಬೆಂಬಲ ನೀಡುತ್ತಿವೆ. ಕೋಲಾಟದಂಥ ಕುಣಿತಗಳಿಗೆ ಸಂಬಂಧಿಸಿದ ಪದಗಳನ್ನು ಆನಂದಪದಗಳೆನ್ನುತ್ತಿದ್ದರು. ವೇಣು ವೀಣಾ ವಾದ್ಯತತಿಗಳ ನಾದ ಹೊರಡುತ್ತಿರಲು ಆನಂದ ಗೀತಗಳನ್ನು ಹಾಡುತ್ತಾ ಕುಣಿಯುತ್ತಿದ್ದುದರ ಉಲ್ಲೇಖಗಳು ಪ್ರಾಚೀನ ಸಾಹಿತ್ಯದಲ್ಲಿ ಸಿಕ್ಕುತ್ತವೆ. ತೆಲುಗು ಕೋಲಾಟ ಪದಗಳ ಲಯದಲ್ಲೇ ರಚಿತವಾದ ಪದಗಳು ಅನ್ನಮಯ್ಯನಲ್ಲಿ ಹೇರಳವಾಗಿವೆ. ಚಾಂಗುಭಳಾ ಎಂಬ ಪುನರಾವೃತ್ತಿಯೊಂದಿಗೆ ರಚಿತವಾದ ಕುಣಿತದ ಪದಗಳು ಕೂಡ ಹಲವಿವೆ. "ಒಳ್ಳಿಯ

---

1 ಕೊಲನಿ ದೋಪರಿಕಿ ಗೊಬ್ಬಿಳ್ಳೋ ಯದು
ಕುಲಸ್ವಾಮಿಕಿನಿ ಗೊಬ್ಬಿಳ್ಳೋ
ಕೊಂಡಗೊಡುಗುಗಾ ಗೋವುಲಗಾಚಿನ
ಕೊಂಡೊಕ ಶಿಶುವುಕು ಗೊಬ್ಬಿಳ್ಳೋ
ದುಂಡಗವು ದೈತ್ಯುಲಕೆಲ್ಲನು ತಲ
ಗೊಂಡು ಗಂಡನಿಕಿ ಗೊಬ್ಬಿಳ್ಳೋ (3-484).

ತಾಯಿಗೆ ಜಾಗಂಭಳಾ, ನಿನ್ನ ಸಕ್ಕರೆ ತುಟಿಗೆ ಜಾಗುಂಭಳಾ, ಚಂದದ ಮುತ್ತಿನಸರದ ಹಾರಗಳ ಚಂದನಗಂಧಿಗೆ ಜಾಗಂಭಳಾ''[1] ಎಂಬುದು ಪ್ರಸಿದ್ಧ ಕೀರ್ತನೆ.

ಕೀರ್ತನೆಗಳಲ್ಲಿ ಉಲ್ಲೇಖಗೊಂಡ ಪ್ರದರ್ಶನ ಕಲೆಗಳ ಪೈಕಿ ಮೊದಲನೆಯದಾಗಿ ಗೊಂಬೆಯಾಟವನ್ನು ಹೆಸರಿಸಬಹುದು. ಇದರಲ್ಲಿ ಸೂತ್ರದ ಗೊಂಬೆಯಾಟ ಮತ್ತು ತೊಗಲುಗೊಂಬೆಯಾಟ ಎಂಬ ಎರಡು ಮುಖ್ಯ ಪ್ರಭೇದಗಳಿವೆ. ಸೂತ್ರದಗೊಂಬೆಯಾಟ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಇನ್ನೂ ಜೀವಂತವಾಗಿದೆ. ಆಂಧ್ರದಲ್ಲಿ ಈಗ ತುಂಬ ವಿರಲ. ತೊಗಲುಗೊಂಬೆಯಾಟ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಇಂದಿಗೂ ಜನಪ್ರಿಯವಾಗಿರುವ ಕಲಾಪ್ರಕಾರ. ನೂರಾರು ವರ್ಷಗಳಿಂದ ಪ್ರಪಂಚದ ಅನೇಕ ಕಡೆಗಳಲ್ಲಿ ಮನರಂಜನೆ ನೀಡುತ್ತಿರುವ ಕಲಾಮಾಧ್ಯಮ. ನಮ್ಮ ದೇಶದಲ್ಲಿ ಆಖ್ಯಾನಕವೆಂಬ ಹೆಸರಿನ ಒಂದು ಆಲೇಖ್ಯ ಪದ್ಧತಿ ಪ್ರಚಾರದಲ್ಲಿತ್ತೆಂಬುದು ಕಾದಂಬರಿ, ವಾತ್ಸ್ಯಾಯನ ಕಾಮಸೂತ್ರ ಮುಂತಾದ ಗ್ರಂಥಗಳಿಂದ ತಿಳಿದುಬರುತ್ತವೆ. ಮಹಾಭಾರತದ ಕಾಲದಿಂದಲೂ ರೂಪೋಪಜೀವನ, ಜಾಲಮಂಡಪಿಕಾ ಇತ್ಯಾದಿ ಹೆಸರುಗಳಿಂದ ಗೊಂಬೆಯಾಟ ಪ್ರಚಲಿತವಾಗಿತ್ತೆಂಬುದು ತಿಳಿದುಬರುತ್ತದೆ.

15-16 ಶತಮಾನಗಳ ಕಾಲಕ್ಕೆ ಕರ್ನಾಟಕಾಂಧ್ರಗಳಲ್ಲಿ ಗೊಂಬೆಯಾಟ ತುಂಬ ಪ್ರಸಿದ್ಧವಾಗಿತ್ತು. 16ನೆಯ ಶತಮಾನದ ಪ್ರಾರಂಭ ಕಾಲದ ಕೋಲಾರ ಜಿಲ್ಲೆಯ ತೆಲುಗು ಶಾಸನವೊಂದರಲ್ಲಿ (E. C. x rd 100, ಪು. 238-39) ಗೊಂಬೆಯಾಟದವರು ಅಗ್ರಹಾರವನ್ನು ಪಡೆದ ಉಲ್ಲೇಖವಿದೆ. ಬಳ್ಳಾರಿ ಜಿಲ್ಲೆಯಲ್ಲಿ ಬೊಮ್ಮಲಾಟಪಲ್ಲೆ (ಗೊಂಬೆಯಾಟದ ಹಳ್ಳಿ) ಎಂಬ ಊರಿದೆ. ಇವೆಲ್ಲ ಗೊಂಬೆಯಾಟಕ್ಕಿದ್ದ ಜನಪ್ರಿಯತೆಯನ್ನು ಸೂಚಿಸುತ್ತವೆ.

ತೊಗಲುಗೊಂಬೆ, ಸೂತ್ರದಗೊಂಬೆ ಆಟಗಳು ಪುರಂದರದಾಸರ ಕಾಲದಲ್ಲಿ ಕರ್ನಾಟಕಾದ್ಯಂತ ಜನಪ್ರಿಯ ಕಲೆಗಳಾಗಿದ್ದುವು. ಇವನ್ನು ಹೇಳುವಲ್ಲಿ ದಾಸರು ಆಧ್ಯಾತ್ಮಿಕ ಹಿನ್ನೆಲೆಯನ್ನು ಬಳಸಿಕೊಂಡಿದ್ದಾರೆ. ''ತುಂಬಿದ ಪಟ್ಟಣಕೆ ಒಂಭತ್ತು ಬಾಗಿಲು.... ನೆಲೆಯಿಲ್ಲದೀಕಾಯ ಎಲುವಿನ ಹಂದರ ಬಲಿದು ಹೊದ್ದಿಸಿದ ಚರ್ಮದ ಹೊದ್ದಿಕೆ ಮಲಮೂತ್ರಗಳು ಮಾಂಸರಕ್ತದ ರಾಶಿ....ತೊಗಲುಗೊಂಬೆಯಮಾಡಿ ಜಗದೊಳು ನಿಲ್ಲಿಸಿ ನೆಗೆದಾಡಿಸಿ'' (ಹ. ಕೀ. ತ., ಪು. 29) ಎಂದು ಭಗವಂತನ ಆಟವನ್ನು ಪುರಂದರದಾಸರು ವರ್ಣಿಸಿದ್ದಾರೆ. ಹಾಗೆಯೇ ಮಾನವನನ್ನು ಸೂತ್ರದಗೊಂಬೆಗೂ ದೇವರನ್ನು ಅದನ್ನಾಡಿಸುವವನಿಗೂ ಹೋಲಿಸಿದ್ದಾರೆ:

---

[1] ಚಕ್ಕನಿ ತಲ್ಲಿಕಿ ಚಾಗುಭಳಾ ತನ
ಚಕ್ಕೆರ ಮೋವಿಕಿ ಚಾಗುಭಳಾ
ಚಂದಪು ಮುತ್ಯಪು ಸರುಲ ಹಾರಮುಲ
ಚಂದನಗಂಧಿತಿ ಚಾಗುಭಳಾ (12-107).

ನೀನು ಆಡಿಸಲು ಜಡವೊನಕೆ ಅಭಿನಯದ ಬೊಂಬೆ
ಏನು ಬಲ್ಲದು ಬೇರೆ ಕೃತಿಯನೊಂದ
ನೀನಿಟ್ಟ ಸೂತ್ರದಿಂದಲುಗೆ ಕೈಕಾಲುಗಳು
ನೀನೆ ಮಗ್ಗಿಸಲು ಮಗ್ಗುವ ದೇಹ ತಾನಾಗೆ (2-112).

ಸೂತ್ರದ ಸಹಾಯದಿಂದ ಗೊಂಬೆಗಳ ಕೈಕಾಲುಗಳನ್ನು ಚಲಿಸುವಂತೆ ಮಾಡುವುದು ಇಲ್ಲಿ ವ್ಯಕ್ತವಾಗಿದೆ. ''ಬೈಲಿಗೆ ಬೈಲಾಯಿತು ಬೈಲೊಳಗೆ ಸೂತ್ರಬೊಂಬೆಯ ಮಾಡಿ ಹರಿ ಸೂತ್ರದಿಂ ಕುಣಿಸಾಡಿ ಸೂತ್ರ ಕಡಿಯಿತು ಬೊಂಬೆ ಮುರಿಯಿತು ಆಟ ನಿಂತಿತು'' (ಉ. ಪ್ರ., ಭಾಗ 5, ಪು. 26) ಎಂದು ಮನುಜನ ಅಶಾಶ್ವತ ಜೀವನವನ್ನು ಕುರಿತು ಹೇಳಿದ್ದಾರೆ. ದೇವರು ''ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳ ಬೊಂಬೆಯ ಮಾಡಿ ಕುಣಿಸುವ''ವನು (1-153).

ಗೊಂಬೆಯಾಟವನ್ನು ಆಧ್ಯಾತ್ಮಿಕ ಭಾವಗಳ ಹಿನ್ನೆಲೆಯಲ್ಲಿ ಬಳಸುವುದನ್ನು ಅನ್ನಮಾಚಾರ್ಯರಲ್ಲೂ ನೋಡಬಹುದು. ''ವೇಂಕಟೇಶ! ಹಾಲೆರೆದು ಬೆಳೆಸಿದ ತೊಗಲಿನ ಗೊಂಬೆ ನಾನೊಂದು, ಕಾಪಾಡು ದೈವವೇ ನನ್ನನ್ನು''[1] ಎಂದಾಗ ಈ ದೇಹ ತೊಗಲಿನಿಂದಾದ ಒಂದು ಗೊಂಬೆಯೆಂದು ಮಾತ್ರ ಅರ್ಥವಾಗುತ್ತದೆ. ಇದು ಕಲಾತ್ಮಕ ರೂಪವಾದ ತೊಗಲುಗೊಂಬೆಯಾಟದ ಉಲ್ಲೇಖವಲ್ಲ. ಆದರೆ ಬೇರೆಡೆಗಳಲ್ಲಿ ತೊಗಲು ಗೊಂಬೆಯಾಟದ ಸೂಚನೆಗಳಿವೆ. ''ಜೊತೆಗಾರ್ತಿಯರಾದ ಸತಿಯರೆಲ್ಲಾ ತೊಗಲು ಗೊಂಬೆಗಳು. ಈ ವಿನೋದದ ಕೂಟಗಳಿಗೆ ಬೆಲೆ ಏಕೆ ಕಟ್ಟುವೆ''[2] ಎಂದಾಗ ಗೊಂಬೆಯಾಟದ ಸೂಚನೆ ಇದೆ. ಇನ್ನೊಂದು ಕೀರ್ತನೆಯಲ್ಲಿ ತೊಗಲುಗೊಂಬೆಯಾಟದ ಸವಿವರ ವರ್ಣನೆಯಿದೆ. ''ಆಟದವರ ಜೊತೆಗೂಡಿದೆ, ಆಟದವರ ಜೊತೆಗೂಡಿ ಎಲ್ಲೆಡೆ ಗೊಂಬೆ ಆಡಿಸುವಲ್ಲಿ ಅಧಿಕನಾದೆ, ಗುರುತರವಾದ ದೊಡ್ಡ ಮಂಟಪದಲ್ಲಿ, ಮಾಯೆಯೆಂಬ ದೊಡ್ಡ ತೆರೆ ಕಟ್ಟಿ, ಅಜ್ಞಾನವನ್ನು ಅಡ್ಡವಾಗಿಟ್ಟು, ಸುಜ್ಞಾನವೆಂಬ ದೀಪ ಹತ್ತಿಸಿ, ತೊಗಲು ಗೊಂಬೆಗಳನ್ನು ಸಿದ್ಧಮಾಡಿ, ಗಾಳಿಯಿಂದ ಅವನ್ನು ಕದಲಿಸಿ, ಒಂಬತ್ತು ರಸಗಳನ್ನು ಅನುಸಂಧಾನಮಾಡಿ, ನಾಲ್ಕು ದಿಕ್ಕುಗಳಲ್ಲೂ ಚೆನ್ನಾಗಿ ಆಡಿಸಲು, ನಿನ್ನನೆ ಮೆಚ್ಚುವರು

---

[1] ಪಾಲುವೋಸಿ ಪೆಂಚಿನ ಪಾಲಿಟ ವೇಂಕಟೇಶನೇ
ತೋಲಿಬೊಮ್ಮ ಜುಮ್ಮೀ ಕಾತುವುಗಾನಿ ದೈವಮಾ (5-189).

[1] ತೋಡುನೀಡ ಸತುಲೆಲ್ಲಾ ತೋಲು ಬೊಮ್ಮಲೆ ಕಾಕ
ವೇಡುಕ ಕೂಟಮುಲಕು ವೆಲಪೆಟ್ಟೇವಾ (14-212).

ನಿನಗೇನೂ ಕೊಡರು, ಮನ್ನಿಸುವ ದಾತರು ಈಗಿಲ್ಲ"[1] ಎಂದಾಗ ಇಂಥ ಆಟಗಳಿಗೆ ಅಂದೇ ಆದರಣೆ ಕಡಿಮೆಯಾಗುತ್ತಿತ್ತು ಎಂಬುದು ಸೂಚಿತವಾಗಿದೆ.

ಸೂತ್ರದಗೊಂಬೆಯಾಟವೂ ಅವರ ಕಾಲದಲ್ಲಿ ಪ್ರಚಲಿತವಿತ್ತು. "ಕೀಲುಗೊಂಬೆ ಅಚೇತನವಾಗಿದ್ದರೂ ಆ ವೇಳೆಯಲಿ ಸೂತ್ರಧಾರ ಆಡಿಸುತ್ತಾನಲ್ಲವೆ"[2] ಎಂದು ದೇವರನ್ನು ಸೂತ್ರಧಾರನಿಗೂ ಮಾನವ ಶರೀರವನ್ನು ಕೀಲುಗೊಂಬೆಗೂ ಹೋಲಿಸಿದ್ದಾರೆ.

ನಾಟಕದ ಉಲ್ಲೇಖಗಳು ನಮ್ಮ ಸಾಹಿತ್ಯದಲ್ಲಿ ಹೇರಳವಾಗಿ ಬರುತ್ತವೆ. ಸಂಸ್ಕೃತ ನಾಟಕ ಪರಂಪರೆ ಸುಮಾರು ಎರಡು ಸಾವಿರ ವರ್ಷಗಳಿಂದ ಭಾರತದಲ್ಲಿ ಪ್ರಚಲಿತವಾಗಿದೆ. ದೇಶೀಯ ಭಾಷೆಗಳಲ್ಲಿ ನಾಟಕಸಾಹಿತ್ಯ ಶಿಷ್ಟಪ್ರಕಾರವಾಗಿ ಇತ್ತೀಚಿನ ಶತಮಾನಗಳವರೆಗೂ ಬೆಳೆಯದಿರುವುದು ಸೋಜಿಗವೇ ಸರಿ. ಆದರೆ ನಾಟ್ಯ ಪಗರಣವ್, ಯಕ್ಷಗಾನ, ವೀಧಿಭಾಗವತ, ವೀಧಿನಾಟಕ ಮುಂತಾದ ರೂಪಕ ಪ್ರಕಾರಗಳಿದ್ದುವು. ಇವುಗಳಿಂದ ಶಿಷ್ಟನಾಟಕ ಪರಂಪರೆಯನ್ನು ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆಸುವ ಆವಶ್ಯಕತೆ ಇರಲಿಲ್ಲ. ಆದರೆ ನಾಟಕ ಎಂಬುದನ್ನು ಜೀವನಕ್ಕೆ ಪ್ರತಿಮೆಯಾಗಿ, ಉಪಮೆಯಾಗಿ ಬೇರೆ ಬೇರೆ ಅರ್ಥಗಳಲ್ಲಿ ಬಳಸಿರುವುದನ್ನು ನೋಡುತ್ತೇವೆ.

ಭಗವಂತ "ಕಪಟ ನಾಟಕ ಸೂತ್ರಧಾರಿ" (ಉ. ಪ್ರ., ಭಾಗ 2, ಪು. 43). ಕಪಟನಾಟಕ ಆಡುವವರು ಲೋಕದ ಜನ, ಆಡಿಸುವವ ಭಗವಂತ. "ನಗೆಯು ಬರುತಿದೆ

---

[1] ಆಟವಾರಿ ಗೂಡಿ ತೌರಾ
ಆಟವಾರಿ ಗೂಡಿ ಅನ್ನಿಚೋಟ್ಲಬೊಮ್ಮ
ಲಾಟ ಲಾಡಿಂಚ ನಧಿಕುಂಡ ವೈತಿವಿ
ಗುರುತರಮುಗು ಪೆದ್ದಕೊಟ್ಟಾಮುಲೋಪಲ
ತಿರಮೈನ ಪೆನುಮಾಯ ತೆರಗಟ್ಟಿ
ಅರಯುನಜ್ಞಾನಮುಲವಿ ಯಡ್ಡಮು ಜೇಸಿ
ಪರಗ ಸುಜ್ಞಾನ ದೀಪಮುಲು ಮುಟ್ಟಿಂಚಿ
ತೋಲುಬೊಮ್ಮಲ ದೊರಕೊನಿ ಗಡಿಯಿಂಚಿ
ಗಾಲಿಚೇತ ವಾನಿ ಗದಲಿಂಚಿ
ತೂಲೇಟಿ ರಸಮುಲು ತೊಮ್ಮಿದಿ ಗಡಿಯಿಂಚಿ
ನಾಲುಗು ಮುಖಮುಲ ನಲುವುನ ನಾಡಿಂಚಿ
ನಿನ್ನೇ ಮೆತ್ತುರುಗಾನಿ ನೀಕೇಮಿನೀಲೇರು
ಮನ್ನಿಂಚುದಾತಲು ಮರಿಲೇರು (ಅಧ್ಯಾ. ಸಂ., 1, ಪು. 110-11).

[2] ಕೀಲುಬೊಮ್ಮ ಅಚೇತನಮೈಯುಂಡಿನಾ
ಆ ವೇಳ ಸೂತ್ರಧಾರುಡಾಡಿಂಚುಗದವಯ್ಯಾ (7-273).

ಎನಗೆ ನಗೆಯುಂ ಬರುತಿದೆ, ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು" (ಪು. ಸಾ, ದ., 3, ಪು. 139) ಎಂದು ಜನರ ನಡವಳಿಕೆ ಕಂಡು ದಾಸರು ನಕ್ಕಿದ್ದಾರೆ. "ಹೀನ ಗುಣವ ಮನದೊಳಿಟ್ಟು ತಾನು ವಿಷದ ಪುಂಜನಾಗಿ ಮೌನಿ ಪುರಂದರವಿಠಲನ್ನ ಧ್ಯಾನ ಮಾಡುವವನ ಕಂಡು" ನಗೆ ಬರುತ್ತಿದೆ ಎಂದಿದ್ದಾರೆ. ಲೋಕದ ಎಲ್ಲ ಜನರೂ ಯಾವುದಾದರೊಂದು ರೀತಿಯ ಹಗರಣ ಮಾಡುವವರೇ. ಆಚಾರಾದಿಗಳು, ವೇಷ ಭೂಷಣಗಳು ಮುಂತಾದ ಅಂತರಂಗ ಮತ್ತು ಬಹಿರಂಗ ವೇಷಧಾರಿ ಹಗರಣಿಗಳನ್ನು ಕಂಡು ಪುರಂದರದಾಸರು ಹಾಸ್ಯ ಮಾಡಿದ್ದಾರೆ. "ಬೂಟಕತನದಲಿ ಬಹಳ ಭಕುತಿ ಮಾಡಿ, ದಿಟನೀತ ಸರಿಯಾರಿಲ್ಲೆನಿಸಿ, ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ, ಊಟದ ಮಾರ್ಗದ ಜ್ಞಾನವಿಲ್ಲದೆ" (ಪು. ಸಾ. ದ., 1, ಪು. 129) ಇರುವವರನ್ನು ಒಂದೆಡೆ ಹೇಳಿದ್ದಾರೆ.

ಅನ್ನಮಾಚಾರ್ಯರ ಕಾಲದಲ್ಲಿ ಅನೇಕ ರೀತಿಯ ನಾಟಕಗಳನ್ನು ಆಡುತ್ತಿದ್ದರೆಂಬುದಕ್ಕೆ ಅವರ ಉಲ್ಲೇಖಗಳೇ ಸಾಕ್ಷಿ. "ಏಕೆ ನಮ್ಮೊಡನೆ ಹೀಗೆ ಆಟ ವಾಡುವೆ, ನಾನೇನು ನಾಟಕದವಳೇ, ಸುಮ್ಮನೆ ನಗುತ್ತಿರುವೆನಷ್ಟೆ"[1] ಎಂದಿರುವುದನ್ನು ನೋಡಿದರೆ ಆ ಕಾಲದಲ್ಲೂ ಸ್ತ್ರೀಯರು ನಾಟಕಗಳಲ್ಲಿ ಭಾಗವಹಿಸುತ್ತಿದ್ದರೆಂದೂ ಅವರಿಗೆ ಅಷ್ಟೇನು ಗೌರವವಿರಲಿಲ್ಲವೆಂದೂ ತಿಳಿಯುತ್ತದೆ. 'ನಟ' ಎನ್ನುವುದನ್ನು ಸಂಭಾಷಣೆ ಗಳಲ್ಲಿ ಬಳಸುವ ಸಾಮಾನ್ಯಾರ್ಥದಲ್ಲೂ ಹಲವೆಡೆ ಬಳಸಲಾಗಿದೆ. "ಏಕೆ ಸುಳ್ಳು ಹೇಳುವೆ ? ಯಾವಳನ್ನು ಕರೆತಂದೆ ? ನಟನೇ ನನ್ನ ಮನಸ್ಸನ್ನು ಮನ್ನಿಸು"[2] ಎಂದಾಗ ಈ ಅರ್ಥವಿದೆ. "ಶ್ರೀ ವೇಂಕಟೇಶ! ನಟ ನೀನು ಎಂಬುದು ನಿನ್ನ ಕೂಡಿದ ವೇಳೆ ನಮಗೆ ಗೊತ್ತಿರಲಿಲ್ಲ"[3] ಎಂಬಲ್ಲಿ ನಟನೆ ಮಾಡುವವ ಎಂದಾಗಿದೆ. ಜೀವನವನ್ನು ನಾಟಕಕ್ಕೆ ಹೋಲಿಸುವುದು ಸಾಹಿತ್ಯದ ಸಾಮಾನ್ಯ ವಿಷಯ. "ಪ್ರತಿದಿನದ ಬದುಕು ನಾಟಕ, ಕಾಣದೆ ಕಾಣದೆ ಕಂಡದ್ದು ಕೈವಲ್ಯ"[4] ಎಂದು ಬದುಕನ್ನು ನಾಟಕವೆಂದು ಹೇಳಿ, ಕೈವಲ್ಯ ಪಡೆಯುವುದರಲ್ಲಿರುವ ಕಷ್ಟವನ್ನು ಸೂಚಿಸಿದ್ದಾರೆ. ನಾಟಕಗಳನ್ನು ಆಡಲು ತೆರೆ ಬಳಸುತ್ತಿದ್ದ ವಿಚಾರವನ್ನೂ ಒಂದೆಡೆ ಹೇಳಿದ್ದಾರೆ: "ಪರಿಮಳಗಳನ್ನು ಆತ ಹಚ್ಚು

---

[1] ಯೇಟಿಕಯ್ಯಾ ನೀವು ಮಾತೋ ಯೇಲಾಟಲಾಡೇವು
ನಾಟಕಪುದಾನನಾ ನವ್ವೇದಾನಗಾಕಾ (18-278).

[2] ಯೇಟಿಕ ಬೊಂಕೇವು ನಾತೋ ಯೆವ್ವತೆ ದೆಚ್ಚಿತಿವೋರಿ
ನಾಟಕುಡ ನಾ ಮನಸು ಮನ್ನಿಂಚರಾ (17-217).

[3] ಶ್ರೀ ವೇಂಕಟೇಶ ನಾಟಕೀಡವವುತ ನಿನ್ನು
ಯೆನಸಿನ ವೇಳನೇಮೀ ನೆರಗಮ್ಮೈತಿಮಿರಾ (17-18).

[4] ನಾನಾಟಿ ಬದುಕು ನಾಟಕಮು
ಕಾನಕ ಕನ್ನದಿ ಕೈವಲ್ಯಮು (9-287).

ತ್ತಿರಲು ತೆರೆಯು ಸೀರೆಗೆ ಅದನ್ನು ಒರೆಸುವುದ ನೋಡು.''[1] ತೆರೆಯನ್ನು ಒಮ್ಮೆ ಹಾಕಿ ಮತ್ತೆ ತೆಗೆದಾಗ ಬೇರೊಂದು ದೃಶ್ಯ ಬರುವಂತೆ ಜೀವನದಲ್ಲೂ ಬೇರೆ ಬೇರೆ ಸನ್ನಿವೇಶಗಳು ಬರುತ್ತವೆ ಹೋಗುತ್ತವೆ. ''ಒಂದಾದ ಮೇಲೊಂದು ಕಾದಿರುತ್ತದೆ, ಒಳ್ಳೆಯ ತೆರೆ ನಾಟಕದಂಥದು ಸಂಸಾರ''[2] ಎಂದಿದ್ದಾರೆ. ತೆರೆನಾಟಕ ಎಂಬ ಉಲ್ಲೇಖದಿಂದ ಬಯಲಾಟ ಗಳೂ ಇದ್ದವೇನೋ ಎಂದೆನಿಸುತ್ತದೆ.

ಬಹುರೂಪದಂಥ ಇತರ ಪ್ರದರ್ಶನ ಕಲೆಗಳು ಕೂಡ ಆಗ ಪ್ರಚಾರದಲ್ಲಿದ್ದು ವೆಂದು ತಿಳಿದುಬರುತ್ತದೆ. ಬಹುರೂಪ ಧರಿಸಿ ಶಿವರಾತ್ರಿಯ ಸಂದರ್ಭದಲ್ಲಿ ಶ್ರೀಶೈಲದಲ್ಲಿ ಬಹುರೂಪ ಪ್ರದರ್ಶಿಸುತ್ತಿದ್ದ ಕಲಾವಿದರನ್ನು ಕುರಿತು ಪಾಲ್ಕುರಿಕಿ ಸೋಮನಾಥ 'ಪಂಡಿತಾರಾಧ್ಯ ಚರಿತ್ರ'ದಲ್ಲಿ (5-62) ಬರೆದಿದ್ದಾನೆ. ಬಹುರೂಪ ಎಂಬುದು ಜೀವನಕ್ಕೆ ಒಳ್ಳೆಯ ಉಪಮೆಯಾಗಿ ಬಳಕೆಯಾಗುತ್ತದೆ. ''ಆಡಿದೆ ನಾನು ಬಹುರೂಪಗಳಿಂದ ಎಲ್ಲ ಯೋನಿಗಳಲ್ಲಿ ಹುಟ್ಟಿ''[3] ಎಂದು ಅನ್ನಮಯ್ಯ ಒಂದೆಡೆ ಹೇಳಿದ್ದಾರೆ. ಅಧಿಕಾರ ಮುಂತಾದವನ್ನು ಬಯಸುವಾತ ಬಹುರೂಪಿಯಾಗಿ ಆಡಲೇಬೇಕಾಗುವುದು, ಆಡುತ್ತಾನೆ ಕೂಡ. ಅಂಥವರನ್ನು ''ಬೆಟ್ಟದಷ್ಟು ದೊರೆತನ ಕೋರಿ ಮೇಲೆ ಹೇರಿಕೊಂಡಾತ ಬಹುರೂಪ ಆಡದೆ ಇರುವುದಿಲ್ಲ''[4] ಎಂದಿದ್ದಾರೆ. ಬಹುರೂಪ ಎಂಬುದು ವಿವಿಧ ವೇಷ ಗಳನ್ನು ಧರಿಸುವ ಹಗಲಿನಲ್ಲಿ ಆಡುವ ಸರಳ ಜನಪದ ಕಲೆ. ಆದರೆ ಅನ್ನಮಯ್ಯನ ವರ್ಣನೆಯ ಪ್ರಕಾರ ಇದರಲ್ಲಿ ತಾಳಮೇಳಗಳು ಬಳಕೆಯಾಗುತ್ತಿದ್ದುವೆಂದೂ ಸೂತ್ರಧಾರಿ ಅದನ್ನು ನಡೆಸುತ್ತಿದ್ದನೆಂದೂ ತಿಳಿದುಬರುತ್ತದೆ.

> ಮೆಚ್ಚು ಮೆಚ್ಚದಿರೆ ಮಾಣು ; ಮಿಂಚಿ ನಾನಾಡದಿರೆನು
> ಅಚ್ಚವಾದ ಈ ಸೂತ್ರಧಾರಿಯ ಗಮನಿಸು ದೇವ
> ನಾನೊಬ್ಬನೇ ಜೀವಿ ಓಹೋ ಹರಿ

---

[1] ಪರಿಮಳಮುಲತಡು ಪೈಪೈ ಬೂಯಗ ಬೂಯಗ
ತೆರಚೀರದುಡಿಚೀನಿ ತೀಸಿ ತೀಸಿ ಯದಿವೋ (17-326).

[2] ಒಕ್ಕಟಿ ತರವಾತ ವೇರೊಕಟ್ಟೆ ಕಾಚುಕುಂಡು
ಚಿಕ್ಕ ದೆರನಾಟಕಮು ಸಂಗತಿ ಸಂಸಾರಮು (8-111).

[3] ಆಡಿತಿಬೋ ಬಹುರೂಪಾಲನ್ನಿ ಯೋನುಲ ಬುಟ್ಟಿ (ಅಧ್ಯಾ. ಸಂ., 2, ಪು. 5).

[4] ಕೊಂಡಂತ ದೊರತನಮು ಕೋರಿ ಮೀದ ವೇಸುಕೊಂಟೇ
ನಂಡನೇ ಯಾ ಬಹುರೂಪ ಮಾಡಕಪೋದು (ಅಧ್ಯಾ. ಸಂ., 1, ಪು. 280).

ಪಲವು ಬಹುರೂಪಗಳ ಬೆಳೆಸಿ ಆಡಿದೆ
ಉಳಿದ ಇಂದ್ರಿಯಗಳೇ ತಕ್ಕಮೇಳ
ಅಚ್ಚರಿಯ ವಿದ್ಯೆಯವನು ನಾನು ಅವಧರಿಸು ದೇವ.[1]

## ಸಾಹಿತ್ಯ

ಪುರಂದರದಾಸರು ಮತ್ತು ಅನ್ನಮಾಚಾರ್ಯರು ದಕ್ಷಿಣಭಾರತದ ಸಾಹಿತ್ಯ ಪರಂಪರೆಗೆ ಮಾಡಿದ ಸೇವೆ ಪ್ರತ್ಯೇಕವಾಗಿ ಪರಿಶೀಲಿಸತಕ್ಕದ್ದು. ವಾಗ್ಗೇಯಕಾರರ ರಚನೆಗಳನ್ನು ಪರಿಶೀಲಿಸುವಾಗ ಶಿಷ್ಟ ಸಾಹಿತ್ಯ ಕೃತಿಗಳ ಅಧ್ಯಯನದಲ್ಲಿ ಬಳಸುವ ಪ್ರಮಾಣಗಳನ್ನೇ ತೆಗೆದುಕೊಂಡು ಸಾಮಾನ್ಯವಾಗಿ ಮೌಲ್ಯಮಾಪನ ಮಾಡುತ್ತೇವೆ. ಆದರೆ ಪದ್ಯ ಗದ್ಯ ಸಾಹಿತ್ಯ ಕೃತಿಗಳಿಗೂ ವಾಗ್ಗೇಯಕಾರರ ರಚನೆಗಳಿಗೂ ವ್ಯತ್ಯಾಸ ಇದೆ. ಪದ್ಯ ಸಾಹಿತ್ಯ ಕೃತಿಗಳಲ್ಲಿ ಛಂದಸ್ಸು, ವಡಿ, ಯತಿ, ಪ್ರಾಸ ಮುಂತಾದವು ಕಾವ್ಯದ ನೆರವಿಗೆ ಬಂದರೂ ಅಲಂಕಾರ, ಶೈಲಿ, ರಸ, ಧ್ವನಿ ಇತ್ಯಾದಿಗಳ ಕಡೆಗೇ ಹೆಚ್ಚಿನ ಗಮನ ಇರುತ್ತದೆ. ಗದ್ಯ ಕಾವ್ಯದಲ್ಲಿ ಛಂದಸ್ಸಿನ ನೆರವೂ ಇಲ್ಲದಿರುವುದರಿಂದ ಮೇಲಿನ ಕಾವ್ಯಗುಣಗಳ ಕಡೆ ಹೆಚ್ಚು ಗಮನವಿರುತ್ತದೆ. ಆದರೆ ಕೀರ್ತನೆಯಲ್ಲಿ ಮಾತು ಧಾತುಗಳ ಸಮತೋಲನವಿರುತ್ತದೆ. ಅಷ್ಟೇ ಅಲ್ಲದೆ ಕೀರ್ತನೆಗಳು ಲಿಖಿತ ಸಾಹಿತ್ಯಕ್ಕೆ ಸೇರಿದಂಥವಲ್ಲ; ಹಾಡಲು ಉದ್ದೇಶಿತವಾದವು. ಆದುದರಿಂದ ಅವನ್ನು ಮೌಖಿಕ ಸಂಪ್ರದಾಯಕ್ಕೆ ಸೇರಿದ ಕೃತಿಗಳಾಗಿ ಪರಿಗಣಿಸಬೇಕು. ಕೀರ್ತನೆಯಲ್ಲಿಯು ಸಂಗೀತ ಸಾಹಿತ್ಯಗಳೆರಡೂ ಸಹೃದಯನ ಮೇಲೆ ಪ್ರಭಾವ ಬೀರುತ್ತವೆ. ಇವು ಕೇವಲ ಹಾಡುಗಳಾಗಿರದೆ ದೇವರನಾಮಗಳೂ ಆಗಿರುವುದರಿಂದ ಸಂಗೀತ ಸಾಹಿತ್ಯಗಳಿಗೆ ಭಕ್ತಿಯೂ ಸೇರಿ ಇವಕ್ಕೆ ವಿಶಿಷ್ಟ ಸ್ಥಾನವನ್ನು ಒದಗಿಸಿಕೊಡುತ್ತದೆ. ಒಟ್ಟಿನಲ್ಲಿ ಸಂಕೀರ್ತನ ಸಾಹಿತ್ಯ ಭಕ್ತಿ, ಸಂಗೀತ ಮತ್ತು ಸಾಹಿತ್ಯಗಳ ಸಮ್ಮಿಲನದಿಂದ ಮೂಡಿಬಂದಿದೆ ಎಂಬ ಭಾವನೆಯಿಂದ ಮೌಲ್ಯಮಾಪನಕ್ಕೆ ತೊಡಗಬೇಕು.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ಪ್ರಬುದ್ಧ ಕವಿವರ್ಗಕ್ಕೆ ಸೇರಿದವರಾದುದರಿಂದ ಲಿಖಿತ ಸಾಹಿತ್ಯ ಪರಂಪರೆಯ ಮಹಾಕವಿಗಳ ಕಾವ್ಯಸತ್ತ್ವವೂ ಅವರಲ್ಲಿ ಕಂಡುಬರುತ್ತದೆ. ಅವರು ಬಳಸಿರುವ ಉಪಮೆ, ರೂಪಕ, ಭಕ್ತಿರಸದ ಹಿರಿಮೆ,

---

[1] ಮೆಚ್ಚು ಮೆಚ್ಚುಕುಟೇ ಮಾನು ; ಮಿಂಚಿ ನೇ ನಾಡಕಮಾನ
ಅಚ್ಚಪು ನೀ ಸೂತ್ರಧಾರಿ ನವಧಾರುದೇವ
ಪೊಕ್ಕಡ ನೇ ಜೀವುಡನು ವೋಹೋ ಹರೀ
ಪೆಕ್ಕು ಬಹುರೂಪಾಲೇ ಪೆಂಚಿಯಾಡಿತಿ
ತಕ್ಕಿನ ಯಿಂದ್ರಿಯಮುಲೇ ತಗುಮೇಳಮು
ಆಕ್ಕಜಪು ವಿದ್ಯವಾಡ ನವಧಾರುದೇವ (ಅಧ್ಯಾ. ಸಂ., 2, ಪು. 101).

ಗಾದೆ, ಒಗಟು ಮುಂತಾದ ಅನುಭವದ ನುಡಿಗಳ ಬಳಕೆ; ನಾಣ್ಣುಡಿ, ನುಡಿಗಟ್ಟು ಮೊದಲಾದವುಗಳ ವಿಸ್ತಾರ ಬಳಕೆ; ಜನಸಾಮಾನ್ಯರ ಭಾಷೆಯ ಬಳಕೆ ಇತ್ಯಾದಿಗಳನ್ನು ಪರಿಶೀಲಿಸಿದರೆ ಅವರ ಸಾಹಿತ್ಯ ಸೇವೆಯ ಹಿರಿಮೆ ಅರ್ಥವಾಗುತ್ತದೆ. ಭಕ್ತಿತತ್ತ್ವವನ್ನು ಸಾಮಾನ್ಯ ಜನರಿಗೆ ತಲುಪಿಸಲು ತಕ್ಕ ಭಾಷಾಮಾಧ್ಯಮವನ್ನು ಕಲ್ಪಿಸಿಕೊಂಡು ಕೀರ್ತನೆಗಳನ್ನು ಅಭಿವ್ಯಕ್ತಿಸಿರುವ ಪುರಂದರದಾಸರು ಅನೇಕ ಕೀರ್ತನಕಾರರಿಗೆ ಮಾರ್ಗದರ್ಶಕರಾದರು. ಅನ್ನಮಾಚಾರ್ಯರು ಅನೇಕ ದೃಷ್ಟಿಕೋನಗಳಿಂದ ಪರಿಶೀಲಿಸುವಷ್ಟು ವೈವಿಧ್ಯವನ್ನು ತಮ್ಮ ಕೀರ್ತನೆಗಳಲ್ಲಿ ಒದಗಿಸಿಕೊಟ್ಟಿದ್ದಾರೆ.

ಪುರಂದರದಾಸರು ಸಾಹಿತ್ಯಾಭಿವ್ಯಕ್ತಿಗೆ ಆಯ್ದುಕೊಂಡ ದಾರಿ ಸರಳವಾದುದು, ಸಹಜವಾದುದು. ದೇವರಲ್ಲಿ ಮತ್ತು ಲೋಕದಲ್ಲಿ ಅವರು ಬೆಳೆಸಿಕೊಂಡಿರುವ ಪ್ರೀತಿ ಹಾಗೂ ಭಕ್ತಿ ಸಾಮಾಜಿಕ ಪ್ರಜ್ಞೆಯ ರೂಪದಲ್ಲಿ ಮೂಡಿಬಂದಿದೆ. ಎಂಥ ಸನ್ನಿವೇಶವನ್ನಾದರೂ ಭಾವವನ್ನಾದರೂ ಲೋಕನೀತಿಯನ್ನಾದರೂ ಸಂಕೀರ್ತನ ರೂಪಕ್ಕೆ ಅಳವಡಿಸುವ ಶಕ್ತಿ ಪುರಂದರದಾಸರಿಗಿತ್ತು. ಈ ಕೀರ್ತನೆಗಳು ಸಾವಕಾಶವಾಗಿ ಕುಳಿತು, ಯೋಚಿಸಿ, ಮೆರುಗುಕೊಟ್ಟು ಬರೆದ ಸಾರಸ್ವತ ಕೃತಿಗಳಲ್ಲ. ಸಂದರ್ಭಕ್ಕೆ ತಕ್ಕಂತೆ ಸಹಜವಾಗಿ, ನೇರವಾಗಿ ಮೂಡಿಬಂದಂಥವು. ಹೇಳಿದುದು ಕೇಳಿದವರ ಮನಸ್ಸಿಗೆ ನೇರವಾಗಿ ತಲುಪಲು ಹಾಡಿನ ಮಾಧ್ಯಮ ತುಂಬ ಪರಿಣಾಮಕಾರಿಯಾದುದು. ಇಂಥ ಮಾಧ್ಯಮವನ್ನು ಆಯ್ದುಕೊಂಡ ದಾಸರು ಸ್ಪಷ್ಟವಾಗಿ, ನೇರವಾಗಿ ತಮ್ಮ ಅಭಿಪ್ರಾಯಗಳನ್ನು ನಿರ್ಭಯವಾಗಿ ಹೇಳುವಲ್ಲಿ ಯಶಸ್ವಿಯಾದರು.

ಪುರಂದರದಾಸರ ಕಾವ್ಯಾಭಿವ್ಯಕ್ತಿಯ ಹಿರಿಮೆಯನ್ನು ಕುರಿತು ವಿ. ಸೀತಾರಾಮಯ್ಯನವರು ಹೀಗೆನ್ನುತ್ತಾರೆ: "ಬಲಾತ್ಕಾರದಿಂದ ಅಥವಾ ಶ್ರಮದಿಂದ ನೆಯ್ದದ್ದು, ಹೊಸೆದದ್ದು ಯಾವುದೂ ಅಲ್ಲಿಲ್ಲ. ಹೃದ್ಭಾವ, ಚಿಂತನ, ಧ್ವನಿ, ಧಾಟಿ, ಸಂಗೀತ, ತಾಳದ ಬಡಿತ ಹೊಂದಿಕೊಂಡು ಒಂದೊಂದು ಹಾಡನ್ನೂ ಸಾರ್ಥಕವಾದ ಉಕ್ತಿಯನ್ನಾಗಿ ಮಾಡಿದೆ. ಹಾಡಿನ ಪಲ್ಲವಿ ಅದರ (ಮುಖ್ಯ) ಕೇಂದ್ರ ಭಾವವನ್ನು ವ್ಯಕ್ತಪಡಿಸುತ್ತದೆ. ಅನುಪಲ್ಲವಿ ಅದಕ್ಕೆ ಒತ್ತಾಸೆಯಾಗಿಯೂ ಅದರ ಅರ್ಥಕ್ಕೆ ಯಾವುದಾದರೂ ವಿಶೇಷವನ್ನು ಸೇರಿಸಿಯೊ ಸೊಗಸುತ್ತವೆ. ಯಾವ ಸನ್ನಿವೇಶದಲ್ಲಿ ಅದು ಹುಟ್ಟಿಬಂದುದು ಎಂಬ ಭಾವಾಂಶವನ್ನು ಮನಸ್ಸಿಗೆ ತಟ್ಟುವಂತೆ ಹೃದಯಕ್ಕೆ ಹೋಗುವಂತೆ ನುಡಿಯುತ್ತದೆ."[1]

ದಾಸರ ಕೀರ್ತನೆಗಳಿಗೆ ಭಾರತೀಯ ಪುರಾಣೇತಿಹಾಸಗಳ ಸಾಹಿತ್ಯ ಮಹತ್ತ್ವದ ಹಿನ್ನೆಲೆಯಾಗಿ ನಿಂತಿದೆ. ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಗ್ರಂಥಗಳಿಂದ ಹಲವಾರು ಪ್ರಸಂಗಗಳನ್ನು ಉಪಯೋಗಿಸಿಕೊಂಡಿದ್ದಾರೆ. ಪುರಂದರದಾಸರು ಹನುಮನ ಹಿರಿಮೆಯನ್ನು ತಿಳಿಸಲು ರಾಮಾಯಣದ ವಿವಿಧ ಘಟ್ಟಗಳನ್ನು ಬಳಸಿಕೊಂಡಿದ್ದಾರೆ. ಅಂಜನೆಯು ಮಾರುತನನ್ನು ಎಬ್ಬಿಸುವ ಸಂದರ್ಭವನ್ನು ನೋಡಬಹುದು:

---

[1] ಶ್ರೀ ಪುರಂದರದಾಸರು, ಪು. 142–43.

"ಸೇತುಗಟ್ಟಲು ಬೇಕು ಶರಧಿ ದಾಟಲು ಬೇಕು ಮಾತೆಗೆ ಉಂಗುರ ಕೊಡಲು ಬೇಕು ಪಾತಕಿ ರಾವಣನ ಶಿರವನರಿಯಲು ಬೇಕು" (1-170) ಮಾರುತನೆ ಏಳೆಂದು ಎಬ್ಬಿಸಿದ ಳಂಜನೆಯು. ಮಹಾಭಾರತದಲ್ಲಿಯು ದ್ರೌಪದಿ ವಸ್ತ್ರಾಪಹರಣ ಸನ್ನಿವೇಶಕ್ಕೆ ಮೊದಲು ದ್ರೌಪದಿ ರಾಜಾಜ್ಞೆಯ ಮೇರೆಗೆ ಸಭೆಗೆ ಬರುವ ಚಿತ್ರ ಕಣ್ಣಿಗೆ ಕಟ್ಟುವಂತಿದೆ :

ಬಾಗಿ ಬಳುಕಿ ಬೆದರಿ ಬಿಕ್ಕಿ ಕಣ್ಣನೀರನುದುರಿಸುತಲಿ
ಮಾಗಿಯ ಕೋಗಿಲೆಯಂತೆ ಕಾಯ ಒಲೆಯುತ
ಆಗ ಕೃಷ್ಣನಂಘ್ರಿಗಳನು ಅಂತರಂಗದಲ್ಲಿ ನೆನೆದು
ಸಾಗಿ ಸಾಗಿ ಹೆಜ್ಜೆಯಿಡುತ ಸಭೆಗೆ ಬಂದಳು (3-99).

ಭಾಗವತ ಧರ್ಮಕ್ಕೆ ಮೂಲಸ್ತಂಭವಾಗಿರುವ ಭಾಗವತ ಪುರಾಣ ಮತ್ತು ಹರಿ ವಂಶಾದಿ ಗ್ರಂಥಗಳಲ್ಲಿ ಕೃಷ್ಣಲೀಲೆಗಳು ಮನೋಹರವಾಗಿ ವರ್ಣಿತವಾಗಿವೆ. ವಿಷ್ಣುನಾಮ ಸಂಕೀರ್ತನೆಗೆ ತಮ್ಮ ಕೃತಿಗಳನ್ನು ಅತ್ಯಧಿಕ ಸಂಖ್ಯೆಯಲ್ಲಿ ಮೀಸಲಿಟ್ಟ ಪುರಂದರದಾಸರು ಕೃಷ್ಣಲೀಲೆಗಳನ್ನು ಹೇಳುವಲ್ಲಿ ವರ್ಣನಾವೈಭವವನ್ನೂ ಭಾವನಾಶಕ್ತಿಯನೂ ತೋರಿಸಿದ್ದಾರೆ.

ಗೋಪಿಯ ಭಾಗ್ಯವಿದು ಶ್ರೀಪತಿ
ತಾ ಶಿಶುರೂಪಿನಲಿರುವುದು
ಕಡು ಮುದ್ದುರಂಗನ ತೊಡೆಯ ಮೇಲೆತ್ತುತ
ಜಡೆಯ ಹೆಣೆದು ಹೂ ಮುಡಿಸಿ ಬೇಗ
ಬಿಡದೆ ಮುತ್ತಿನ ಚಂದರಳೆಲೆಯನು
ಸಡಗರದಿಂದ ಅಲಂಕರಿಸಿದಳು (ಪು. ಸಾ. ದ., 4. ಪು. 94).

ಕೃಷ್ಣಲೀಲೆಗಳನ್ನು ವರ್ಣಿಸುವ ಹಾಡುಗಳಲ್ಲಿ ಹೆಚ್ಚಾಗಿ ಬಾಲಕೃಷ್ಣನ ರೂಪ ಚಿತ್ರಣ, ಗೋಪಿಕೆಯರ ಭಕ್ತಿ, ಶೃಂಗಾರ, ಕೃಷ್ಣನ ಚೇಷ್ಟೆಗಳು ಮುಂತಾದವನ್ನು ಕಾಣ ಬಹುದು. ಇವೆಲ್ಲವನ್ನೂ ಒಳಗೊಂಡ ಕೃಷ್ಣಭಕ್ತಿ ವಿವಿಧ ಸಂದರ್ಭಗಳ ವರ್ಣನೆಯ ಮೂಲಕ ಮೂಡಿಬಂದಿದೆ. "ನೋಡುವುದೇ ಕಣ್ಣು ಕೇಳುವುದೇ ಕಿವಿ ಪಾಡುವುದೇ ವದನ, ಗಾಡಿಕಾರ ಶ್ರೀ ವೇಣುಗೋಪಾಲನ ಕೂಡಿಕೊಂಡಾಡುವ ಸುಖದ ಸೊಬಗನು ನೋಡುವುದೇ ಕಣ್ಣು" (ಪು. ಸಾ. ದ., 4, ಪು. 167) ಎಂದಾಗ ಕೃಷ್ಣಭಕ್ತಿಯ ತನ್ಮಯಂತೆ ಕಂಡುಬರುತ್ತದೆ. ಗೋಪಿ ಮತ್ತು ಮುದ್ದು ಕೃಷ್ಣನ ಸಹಜ ಚಿತ್ರವೊಂದು ಇಂತಿದೆ :

ಕಣ್ಣಬೆಳಗು ಪಸರಿಸುತಿರೆ, ಗೋಪಿ ಅರೆ
ಗಣ್ಣ ಮುಚ್ಚಿ ನೋಡಿ ನಗುತ
ಸಣ್ಣ ಬೆರಳುಗಳ ಬಾಯೊಳಗಳವಡಿಸಿ

ಪನ್ನಗಶಯನ ತೊಟ್ಟಿಲಲಿ
ನಿನ್ನ ಮಗನ ಮುದ್ದು ನೋಡು ಎಂದೆನುತಲಿ
ತನ್ನ ಪತಿಗೆ ತೋರಿದಳು (1-168).

"ಮಲ್ಲಿಗೆ ಮೊಗ್ಗುಗಳಂತೆ ಹಲ್ಲು ಬಂದಿವೆ ಸಿರಿ ಕೃಷ್ಣಯ್ಯನಿಗೆ, ಎಲ್ಲಿ ಎಲ್ಲಿ ಬಾಯ್ ತೆರೆಯೊ ಎನೆ ಎಲ್ಲ ಬೊಮ್ಮಾಂಡವ ಕಂಡೆ" (4-10) ಎಂದು ಸೊಗಸಾದ ಉಪಮೆಯಿಂದ ಕೃಷ್ಣನ ಚೆಲುವನ್ನು ದಾಸರು ನಿರೂಪಿಸಿದ್ದಾರೆ.

ಕೃಷ್ಣನ ಕಥೆ ಭಾರತದ ವಿವಿಧ ದೇಶಭಾಷೆಗಳಲ್ಲಿ ಕಾವ್ಯರೂಪ ಪಡೆದು ಸಹೃದಯರ ಮನವನ್ನು ರಂಜಿಸಿದೆ. ಪೌರಾಣಿಕ ಹಿನ್ನೆಲೆ ಸಹೃದಯನ ರಸಾಸ್ವಾದನೆಗೆ ನೆರವಾಗುತ್ತದೆ. ಕೃಷ್ಣನ ನಾಮವನ್ನು ನೆನೆದ ತಕ್ಷಣ ಭಕ್ತರ ಮನಸ್ಸಿನಲ್ಲಿ ಭಾವಾವೇಶ ಉಕ್ಕಿ ಬರುತ್ತದೆ. ಇದರ ಜೊತೆಗೆ ಅವನ ಲೀಲೆಯ ವರ್ಣನೆ ಕೂಡಿದಾಗ ಭಕ್ತಿಪ್ರವಾಹದಲ್ಲಿ ಮೀಯುವಂತಾಗುತ್ತದೆ. ಪುರಂದರದಾಸರು ಕೃಷ್ಣಲೀಲೆಯನ್ನು ಹೇಳುತ್ತಿರುವುದರಿಂದ ಕಾವ್ಯಾಭಿವ್ಯಕ್ತಿಯನ್ನು ಅದಕ್ಕೆ ತಕ್ಕಂತೆ ರೂಪಿಸಿಕೊಳ್ಳಬೇಕಾಯಿತು. ತಾತ್ತ್ವಿಕ ಪದಗಳಲ್ಲಿ ಕಾವ್ಯತ್ವವನ್ನು ತರುವುದು ಕಷ್ಟದ ಕೆಲಸ. ವೈಚಾರಿಕ ನೆಲೆಯಲ್ಲಿ ರೂಪುಗೊಳ್ಳುವ ತಾತ್ತ್ವಿಕ ಪಂಥವನ್ನು ಹೃದಯರಂಜಕವಾದ ಕಾವ್ಯವಾಗಿ ಮಾರ್ಪಡಿಸುವುದು ಕಷ್ಟಸಾಧ್ಯ. ಮಧ್ವದರ್ಶನವನ್ನು ಮೈಗೂಡಿಸಿಕೊಂಡು ಅದನ್ನು ಸಾಮಾನ್ಯ ಜನರಿಗೂ ಹಂಚಬೇಕೆಂದು ಬಯಸಿದ ಪುರಂದರದಾಸರು ಈ ಕಷ್ಟವನ್ನು ಎದುರಿಸಿದರು. ದರ್ಶನ ಸಾರವನ್ನು ಸಾಕಷ್ಟು ಸರಳವಾಗಿ ಹೇಳಿರುವುದನ್ನು ಅನೇಕ ಕೀರ್ತನೆಗಳಲ್ಲಿ ನೋಡುತ್ತೇವೆ.

ಹರಿ ನಡೆಯದಿರಲು ನಡೆಯಲಿಲ್ಲೀ ಜಗವು
ಹರಿ ನುಡಿಯದಿರಲು ನುಡಿಯಲಿಲ್ಲೀ ಜಗವು
ಹರಿ ನೋಡದಿರಲು ನೋಡಲಿಲ್ಲೀ ಜಗವು
ಹರಿ ಮಾಡದಿರಲು ಮಾಡಲಿಲ್ಲೀ ಜಗವು....
ಹರಿ ಸರ್ವಚೇಷ್ಟಕ ಹರಿ ಪುರಂದರವಿಠಲ
ಹರಿ ಆಡಿಸಿದಂತೆ ಆಡಿಸುತಿಪ್ಪುದೀ ಜಗವು (6-2).

ಹೀಗೆ ಹರಿಸರ್ವೋತ್ತಮನೆಂದು ಸಾರುವ ತಮ್ಮ ದರ್ಶನಕ್ಕೆ ಬೇಕಾದಮಟ್ಟಿಗೆ ಉಪನಿಷದಾದಿಗಳಿಂದ ಸಾರವನ್ನು ಗ್ರಹಿಸಿ ಕನ್ನಡಿಗರಿಗೆ ಹಂಚಿದ್ದಾರೆ. ಪರಿಪೂರ್ಣವಾದ, ಅನಂತವಾದ, ಆನಂದಮಯವಾದ ಭಗವಂತನ ಸ್ವರೂಪವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿ ದಾರ್ಶನಿಕ ವಿಷಯಗಳನ್ನು ಕೂಡ ಸಾಮಾನ್ಯ ಜನರಿಗೆ ಮುಟ್ಟುವಂತೆ ಮಾಡಿದ ಜಾಣ್ಮೆಯ ಕವಿ ಪುರಂದರದಾಸರು. ಅಖಿಲವೂ, ಅನಿರ್ವಚನೀಯವೂ, ಅಪ್ರಮೇಯವೂ ಆದ ಭಗವತ್ಸ್ವರೂಪವನ್ನು ತಾತ್ತ್ವಿಕ ಗ್ರಂಥಗಳಲ್ಲಿ ತಾರ್ಕಿಕವಾಗಿ, ಸಂಕೀರ್ಣವಾಗಿ ನಿರೂಪಿಸಲಾಗಿದೆ. ಇದನ್ನು ಸರಳಗೊಳಿಸಿ 'ಆನಂದ ಸಂವಾದಿ'ಯಲ್ಲಿ ದಾಸರು ಹೀಗೆನ್ನುತ್ತಾರೆ :

ಆ ಪಾದವಾನಂದ ಆ ನಖವಾನಂದ
ಆ ಜಾನು ಆ ಜಂಘೆ ಆನಂದಮಯವಯ್ಯಾ
ಆ ಊರು ಆನಂದ ಆ ಕಟಿ ಆನಂದ
ಆ ನಾಭಿ ಆ ಕುಕ್ಷಿ ಆನಂದಮಯವಯ್ಯಾ
ಆ ಉರ ಆನಂದ ಆ ಭುಜವಾನಂದ
ಆ ಕಂಬುಗ್ರೀವ-ಮುಖ ಆನಂದಮಯವಯ್ಯ
ಆ ಶಿರೋರುಹಗಳು ಆನಂದಮಯವಯ್ಯ
ಅಸಂಖ್ಯ ಆನಂದ ಪುರಂದರವಿಠಲ (3-137).

ಭಕ್ತಿ ವೈರಾಗ್ಯಾದಿಗಳನ್ನು ಕೂಡ ಸರಳವಾಗಿ ನಿರೂಪಿಸುವುದರಲ್ಲಿ ಅವರು ಹೇಗೆ ಯಶಸ್ವಿಯಾದರೆಂಬುದನ್ನು ಮೇಲಿನ ಕೀರ್ತನೆ ತೋರಿಸಿಕೊಟ್ಟಿದೆ. ಭಕ್ತಿರಸವನ್ನು ಧ್ವನ್ಯಾತ್ಮಕವಾಗಿ ನಿರೂಪಿಸಿ ಉತ್ತಮ ಕಾವ್ಯವನ್ನು ವಿವಿಧ ಸಂದರ್ಭಗಳಲ್ಲಿ ಅವರು ಹೇಗೆ ಸೃಷ್ಟಿಸಿದರೆಂಬುದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಭಕ್ತರಾಗಿ ತಮ್ಮ ಅಂತರಂಗದ ಭಾವಗಳನ್ನು ಹೇಳಿಕೊಳ್ಳುವಾಗ ಉತ್ತಮ ಭಾವನಿಷ್ಠ ಕವಿಯಾಗಿ ಕಂಡುಬರುತ್ತಾರೆ.

ನಿನ್ನ ನಾಮಭಂಡಾರವ ಕದ್ದ ಕಳ್ಳ ನಾನು
ನಿನ್ನ ಭಕ್ತಿಯೆಂಬ ಸಂಕೋಲೆಯ ಹಾಕಿ
ನಿನ್ನ ದಾಸರ ಕೈಗೆ ಎನ್ನ ಒಪ್ಪಿಸಿಕೊಟ್ಟು
ನಿನ್ನ ಮುದ್ರಿಕೆಯಿಂದ ಗಾಸಿ ಮಾಡಿಸೊ ಕೃಷ್ಣ
ನಿನ್ನ ವೈಕುಂಠದುರ್ಗದಲ್ಲಿ ಎನ್ನ ಸೆರೆಯಿಟ್ಟು
ಚೆನ್ನಾಗಿ ಸಲಹೊ ಶ್ರೀಪುರಂದರವಿಠಲ ! (1-148)

ಹರಿದಾಸರ ದೇವರನಾಮಗಳನ್ನು ಪುರಂದರದಾಸರ ಕಾಲದಲ್ಲೇ ಕುಣಿಯುತ್ತಾ ಹಾಡುವ ಸಂಪ್ರದಾಯವಿತ್ತು. ಹರಿಕಥೆಗೆ ಪೂರ್ವರೂಪವೆನ್ನಬಹುದಾದ ಇಂಥ ಸಂಕೀರ್ತನೆಯ ಉಪಯೋಗವನ್ನೂ ಗಾಯನವನ್ನೂ ಕುರಿತು ಒಂದೆಡೆ ಹೇಳಿದ್ದಾರೆ :

ತಂಬೂರಿ ಮೀಟಿದವ ಭವಾಬ್ಧಿ ದಾಟಿದವ
ತಾಳವ ತಟ್ಟಿದವ ಸುರರೊಳು ಸೇರಿದವ
ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ
ಗಾಯನ ಪಾಡಿದವ ಹರಿಮೂರ್ತಿ ನೋಡಿದವ
ಪುರಂದರವಿಠಲನ್ನ ನೋಡಿದವ ವೈಕುಂಠಕ್ಕೋಡಿದವ (ಪು.ಸಾ.ದ., 4, ಪು. 321).

ಇದರಿಂದ ದಾಸರ ಪದಗಳಲ್ಲಿ ರಾಗ, ತಾಳ, ವಾದ್ಯಸಂಗೀತ, ಕುಣಿತ ಮತ್ತು ಗಾನ ಸೇರಿವೆ ಎನ್ನುವುದು ಸ್ಪಷ್ಟವಾಗುತ್ತದೆ. ಇದರ ಒಟ್ಟು ಅನುಭವ ಕಾವ್ಯರಸಿಕರ

ಮೇಲೆ ಪ್ರಭಾವ ಬೀರುತ್ತದೆಯೇ ಹೊರತು ಕೇವಲ ಕಾವ್ಯವಲ್ಲ ಎಂಬುದನ್ನು ಇಲ್ಲಿ ನೆನೆಯಬೇಕು.

ಪುರಂದರದಾಸರು ತಮ್ಮ ಕಾವ್ಯಕ್ಕಾಗಿ ಆರಿಸಿಕೊಂಡ ಇನ್ನೊಂದು ವಸ್ತು ಲೋಕ ನೀತಿ. ಲೌಕಿಕ ಮತ್ತು ಪಾರಲೌಕಿಕ ಚಿಂತೆ ದಾಸರ ಪದಗಳಲ್ಲಿಯ ಎರಡು ಮುಖಗಳು. ಈ ಪರಂಪರೆ ವಚನಕಾರರ ಕಾಲದಲ್ಲೇ ಪ್ರಾರಂಭವಾಯಿತು. ಅದಕ್ಕೂ ಹಿಂದೆ ತಮಿಳು ನಾಡಿನ ನಾಯನ್ಮಾರರು ಮತ್ತು ಆಳ್ವಾರರು ದಕ್ಷಿಣ ಭಾರತದಲ್ಲಿ ಸಾಮಾಜಿಕ ಪ್ರಜ್ಞೆ ಹಿನ್ನೆಲೆಯಾಗಿದ್ದ ಭಕ್ತಿಪಂಥಕ್ಕೆ ಬುನಾದಿ ಹಾಕಿದರು. ಅಂತರಂಗಶುದ್ಧಿ ಮತ್ತು ಬಹಿರಂಗ ಶುದ್ಧಿ ಎಂಬೆರಡೂ ಮನುಷ್ಯನಿಗೆ ಅತ್ಯಾವಶ್ಯಕವೆಂದು ಸಾರಿದವರಲ್ಲಿ ಹರಿದಾಸರೂ ಮುಖ್ಯರಾಗುತ್ತಾರೆ.

> ಹೃದಯದ ಮಲವನ್ನು ತೊಳೆಯಲರಿಯದೆ ತಾವು
> ಉದಯದಲೆದ್ದು ಮಿಂದು ಗದಗದ ನಡುಗುತ್ತ
> ಅದರಿಂದೇನು ಫಲ ಅದಕ್ಕಿಂತ ಉದಯಾಸ್ತಮಾನ
> ನೀರೊಳಗಿಪ್ಪ ಮುದಿಕಪ್ಪೆ ಮಾಡಿದ ತಪ್ಪೇನಯ್ಯ
> ಪುರಂದರವಿಠಲ ನಾಮವ ನೆನೆಯದೆ
> ದಿನಕಿನ್ನು ಮೂರುಬಾರಿ ಮುಳುಗಿದರೇನಯ್ಯ (ಪು. ಸಾ. ದ., 4, 293)

ಎಂದು ಲೋಕದ ಜನರ ಆಚಾರವನ್ನು ಟೀಕಿಸಿದ್ದಾರೆ.

ಇಂಥ ಕೀರ್ತನೆಗಳನ್ನು ಬರೆಯುವಾಗ ಉಪಮೆ, ರೂಪಕ, ಗಾದೆ, ಒಗಟು, ನುಡಿಗಟ್ಟು, ಬೈಗುಳ ಮುಂತಾದ ಭಾಷಾಭಿವ್ಯಕ್ತಿಗಳು ಸಹಜವಾಗಿ ಮೂಡಿಬಂದಿವೆ. "ಕಿಚ್ಚಿನೊಳಗೆ ಬಿದ್ದ ಕೀಟಕನು ನಾನು, ಅಚ್ಯುತ ತೆಗೆಯೊ ಅನಂತ ಕಾಯೊ" (2-1·45) ಮುಂತಾದವು ಅರ್ಥಪೂರ್ಣ ರಚನೆಗಳಾಗಿ ದಾಸರ ಕಾವ್ಯಕ್ಕೆ ಮೆರುಗನ್ನು ಕೊಟ್ಟಿವೆ. ಸಂಸಾರಕ್ಕೆ, ಲೋಕದ ಸಂಕಷ್ಟಗಳಿಗೆ, ಪಾಪಗಳಿಗೆ ಕಿಚ್ಚು ಪ್ರತಿಮೆಯಾಗಬಲ್ಲುದು. ಜಗತ್ತಿನ ಹರವು, ವೈವಿಧ್ಯ, ಅನಂತತ್ವವನ್ನು ನೆನೆಸಿಕೊಂಡಾಗ ಮಾನವ ಒಂದು ಕೀಟಕವೇ ಸರಿ. ಇಂಥ ಅಲ್ಪ ಪ್ರಾಣಿಯನ್ನು ರಕ್ಷಿಸಲು ಅಚ್ಯುತನೂ ಅನಂತನೂ ಆದ ಭಗವಂತನೇ ಬೇಕು. ಸಾರ್ಥಕ ಪದಗಳ ಬಳಕೆಯಿಂದ ಇಂಥ ಸಣ್ಣ ವಾಕ್ಯಗಳು ಕೂಡ ಉತ್ತಮ ಕಾವ್ಯವಾಗಿ ಪರಿಣಮಿಸಿವೆ. ಉಪಮೆ, ಸ್ವಭಾವೋಕ್ತಿ, ರೂಪಕಾದಿ ಅಲಂಕಾರ ಗಳನ್ನು ಭಕ್ತಿರಸಧ್ವನಿಸಲು ಬಳಸಿಕೊಂಡಿರುವ ಸಂದರ್ಭಗಳು ಪುರಂದರದಾಸರಲ್ಲಿ ಹೇರಳವಾಗಿವೆ. ಕೃಷ್ಣನ ಕೊಳಲಧ್ವನಿಯ ತರಂಗಗಳಿಗೆ ಮಾರು ಹೋದ ಪ್ರಕೃತಿಯ ಸುಂದರ ಚಿತ್ರವನ್ನು ನೀಡುವಾಗ ಕಾವ್ಯಧಾರೆ ಹೊರಹೊಮ್ಮಿದೆ :

> ಕೆಳಗಿನುದಕ ಉಬ್ಬೇರಿ ಬಂದುವು
> ತುಳುಕಿ ಚೆಲ್ಲಾಡಿ ನಿಂದಳು ಯಮುನೆ
> ಮಳೆಯ ಮೋಡೊಡ್ಡಿ ಮೇಘಾಳಿ ಧಾರಿಟ್ಟುವು
> ಕಲುಕರಗಿ ಕರಗಿ ನೀರಾದುವು (4-93).

ಶ್ರೀಹರಿಯ ಸರ್ವೋತ್ತಮತ್ವವನ್ನು ಪುರಂದರದಾಸರು ಆಲಂಕಾರಿಕವಾಗಿ ನಿರೂಪಿಸಿದ್ದಾರೆ.

ಬ್ರಹ್ಮಾಂಡವೇ ಮಂಟಪ ಜ್ಯೋತಿಶ್ಚಕ್ರವೇ ದೀಪ
ಮಹಾಮೇರು ಸಿಂಹಾಸನ ಮಂದಾಕಿನಿ ಮಜ್ಜನ....
ಆಲಯವೆಂಬೊ ರಾಶಿಯಲ್ಲಿ ಆಲದೆಲೆ ತೊಂಡೊಟ್ಟಿಲು
ಅಲಾ ಜೋಯೆಂದು ಪಾಡುವ ವೇದಾಂತದೇವಿಯರು
ಆಲದೆಲೆಯ ಬಾಲಕ ಪುರಂದರವಿಠಲ (6-1).

ಲೋಕದ ಆಗು ಹೋಗುಗಳನ್ನು ವಿಶ್ಲೇಷಿಸುವಾಗ, ಜನರ ರೀತಿನೀತಿಗಳನ್ನು ವಿಮರ್ಶಿಸುವಾಗ ಉಪಮೆಗಳು ಗಾದೆಗಳು ಹೆಜ್ಜೆ ಹೆಜ್ಜೆಗೂ ಕಾಣಸಿಗುತ್ತವೆ. "ನೀರ ಮೇಲಣ ಗುಳ್ಳೆಯಂತೆ ಈ ದೇಹ", "ಕಂಡಿಯಂಕೊಟ್ಟ ಅಮೃತದಂಥ ನೊರೆಹಾಲನೊಲ್ಲದೆ ಬಟ್ಟಲೊಳಗೆ ತಿರಿತಿಂಬುವರು ಕೆಲರು", "ಮರವಿದ್ದರೇನಯ್ಯ ನೆರಳಿಲ್ಲದನಕ", "ಆಯುಸ್ಸು ಇದ್ದರೆ ಅನ್ನಕ್ಕೆ ಕೊರತಿಲ್ಲ", "ಕೋಳಿಗೆ ಹೊನ್ನಪಂಜರವೇಕೆ", "ಶ್ವಾನವ ಕಂಕುಳೊಳಿಟ್ಟು ವಾರಣಾಸಿಗೆ ಪೋದಂತೆ", "ತಾಯಿಯ ಮಾರಿ ತೊತ್ತನು ತರುವ ಮಾನವನಂತೆ" ಮುಂತಾದ ಉಪಮೆಗಳು; "ಅಡಿಕೆ ಹೋಳಿಗೆ ಹೋದ ಮಾನ ಆನೆ ಕೊಟ್ಟರೂ ಬಾರದು", "ಎಲ್ಲಾರ ಮನೆ ದೋಸೆ ತೂತು", "ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೋ", "ಇಕ್ಕಲಾರದ ಕೈ ಎಂಜಲು", "ಹೊಲ ಬೇಲಿ ಮೆಂದ್ದಂತೆ" ಮುಂತಾದ ಪ್ರಸಿದ್ಧ ಗಾದೆಗಳು ಪುರಂದರದಾಸರ ಕೀರ್ತನೆಗಳಲ್ಲಿ ಸಿಗುತ್ತವೆ.

ಆಧ್ಯಾತ್ಮಿಕ ವಿಷಯಗಳಲ್ಲಿ ಅರ್ಥವಾಗದ ಕೆಲವು ಒಗಟುಗಳೂ ಸೇರ್ಪಡೆಯಾಗಿರುತ್ತವೆ. ತಾತ್ತ್ವಿಕ ಚಿಂತನೆ ಮಾಡುವವರಿಗೆ ಗಹನವಾದ ಪ್ರಶ್ನೆಗಳಿಗೆ ಅರ್ಥ ಹುಡುಕುವುದು ಅನಿವಾರ್ಯವಾಗುತ್ತದೆ. ಭಾರತೀಯ ತತ್ತ್ವಶಾಸ್ತ್ರದ ಹಿನ್ನೆಲೆ ಇಲ್ಲದೆ ಅರ್ಥವಾಗದಂಥ ಪ್ರತಿಮೆಗಳನ್ನು ಕೂಡ ಪುರಂದರದಾಸರ ಹಲವು ಕೀರ್ತನೆಗಳಲ್ಲಿ ಕಾಣುತ್ತೇವೆ. ಮುಂಡಿಗೆಗಳೆಂಬ ಹೆಸರಿನ ಕೆಲವು ಗೂಢಾರ್ಥ ವಾಕ್ಯಗಳನ್ನು ನೋಡಬಹುದು.

ಮುಸುಕ ತೆಗೆದರೆ ಬೆನ್ನಲಿ ನಾಲಿಗೆ ಇದರ
ಹೆಸರು ಬಲ್ಲವರುಂಟೆ ಪೇಳಿ ರಂಗಯ್ಯ (ಉ.ಪ್ರ., ಭಾಗ 1, ಪು. 23).
ನಡು ಮನೆಯೊಳಗೊಂದು ನಾಲ್ಕು ತೆಂಗಿನ ಮರ
ಹೇ ಗಿಣಿಯೆ ಹೇ ಗಿಣಿಯೆ
ಅದು ತಲೆ ಮೊದಲಿಲ್ಲದೆ ಬೆಳೆದು ಹಣ್ಣಾಯಿತು (ಉ.ಪ್ರ.,ಭಾಗ 2, ಪು. 82).
ಇಲ್ಲಿಯೆ ಕುಳಿತಿದ್ದ ಭೂತವು ಒಂದು
ಹಲ್ಲಿಯು ನುಂಗಿತು ಹದಿನಾಲ್ಕು ಲೋಕವ
ಸೂಳೆಯ ಮನೆಯಲಿ ಇದೆಯೊಂದು ಕೋಳಿ
ಕೋಳಿಯ ನಾಲಿಗೆ ಏಳು ತಾಳೆಯುದ್ದ (6-101).

ಭಕ್ತ ಕವಿಯ ಕಾವ್ಯದಲ್ಲಿ ಬೈಗುಳ ಇರುತ್ತದೆಯೋ ಎಂಬ ಪ್ರಶ್ನೆ ಉದ್ಭವಿಸ ಬಹುದು. ಬೈಗುಳ ಎಂಬುದು ಜನಪದ ಅಭಿವ್ಯಕ್ತಿ ಮಾಧ್ಯಮಗಳ ಪೈಕಿ ಒಂದು. ಇಂಥ ಮಾಧ್ಯಮಗಳು ಕಾವ್ಯವನ್ನು ಸಾಮಾನ್ಯ ಜನರ ಹತ್ತಿರಕ್ಕೆ ಒಯ್ಯುತ್ತವೆ. ಇವು ಬರಿ ಬೈಗುಳಗಳಾಗಿರದೆ ಗಾದೆಗಳ ರೂಪದಲ್ಲೊ, ಹಿತೋಕ್ತಿಗಳ ರೂಪದಲ್ಲೋ ಮೂಡಿ ಬಂದಂಥವಾಗಿರುತ್ತವೆ. "ಕೋತಿಯಂತೆ ಕುಣಿದಾಡಬೇಡ....ಹಾಳು ಕೇರಿಯೊಳು ತಿರುಗುವ ಹಂದಿಯಂತೆ" (ಹ.ಕೀ.ತ., ಪು. 309), "ನಾರಾಯಣ ಎನ್ನಬಾರದೆ ನಿಮ್ಮ ನಾಲಿಗೆಯೊಳು ಮುಳ್ಳು ಮುರಿದಿಹುದೆ ಕಲ್ಲು ಜಡಿದಿಹುದೆ" (ಉ. ಪ್ರ., ಭಾಗ 5, ಪು. 27), "ಮಡಿ ಮಡಿ ಮಡಿಯೆಂದು ಮೂರ್ಮಾರು ಹಾರುತಿ ಮಡಿಯೆಲ್ಲಿ ಬಂತೆ ಬಿಕನಾಶಿ" (ಉ. ಪ್ರ., ಭಾಗ 1. ಪು. 49). ಇಂಥವು ಹೆಚ್ಚಾಗಿ ಇಲ್ಲ. ಆದರೆ ಕೆಲವು ಕಡೆ ಸಾಮಾನ್ಯ ಜನರ ಅಭಿವ್ಯಕ್ತಿಯೊಂದಿಗೆ ತಾದಾತ್ಮ್ಯ ಹೊಂದಿ ನುಡಿದ ಸಂದರ್ಭಗಳ ನೆಸಪಿಗಾಗಿ ಈ ಕೆಲವನ್ನು ಪರಿಶೀಲಿಸಬಹುದು.

ಅನ್ನಮಾಚಾರ್ಯರ ಸಂಕೀರ್ತನೆಗಳಲ್ಲಿ ಉತ್ತಮ ಕಾವ್ಯವೆಂದು ಹೇಳಬಹುದಾದ ಸಂದರ್ಭಗಳು ಅಸಂಖ್ಯಾತವಾಗಿವೆ. ಆಧುನಿಕ ಕವಿಗಳ ಪ್ರತಿಮೆ, ಧ್ವನಿ, ರೂಪಕ, ಉಪಮೆ ಮುಂತಾದವು ಸಮೃದ್ಧವಾಗಿವೆ. ಲೌಕಿಕ ಮತ್ತು ಪಾರಲೌಕಿಕ ಎಂಬ ಎರಡು ಮುಖ್ಯ ವಿಭಾಗಗಳಲ್ಲಿ ಜೀವನದ ಎರಡು ಮುಖಗಳನ್ನು ಅವರು ಪ್ರತಿಬಿಂಬಿಸಿದ್ದಾರೆ. ಈಗ ದೊರೆತಿರುವ ಸಂಕೀರ್ತನೆಗಳಲ್ಲಿ ಶೃಂಗಾರದ ಭಾಗವೇ ಹೆಚ್ಚಾಗಿದೆ. "ಶೃಂಗಾರ ಏವ ಮಧುರಃ ಪರ ಪ್ರಹ್ಲಾದನೋ ರಸಃ" ಎಂದು ಧ್ವನ್ಯಾಲೋಕದಲ್ಲಿ ಆನಂದವರ್ಧನ ಅಭಿಪ್ರಾಯಪಟ್ಟಿದ್ದಾನೆ. ಶೃಂಗಾರ ರಸರಾಜ ಎನಿಸಿಕೊಂಡಿದೆ. ಮಧುರವೂ ಆನಂದ ಮಯವೂ ಆದ ಶೃಂಗಾರ ಆಲಂಬನೋದ್ದೀಪನಾದಿ ಭೇದಗಳಿಂದ ಲೌಕಿಕವೋ ದಿವ್ಯವೋ ಆಗಿರುತ್ತದೆ. ಸ್ಥಾಯಿಭಾವವಾದ ರತಿ ಕಾಂತಾವಿಷಯಕವಾದರೆ ಲೌಕಿಕ ಶೃಂಗಾರ ವೆಂದೂ, ಭಗವದ್ವಿಷಯಕವಾದರೆ ದಿವ್ಯ ಶೃಂಗಾರವೆಂದೂ ಆಲಂಕಾರಿಕರು ಹೇಳಿದ್ದಾರೆ. ಗೀತಗೋವಿಂದಾದಿ ಕೃತಿಗಳು ಇಂಥ ದಿವ್ಯ ಶೃಂಗಾರಕ್ಕೇ ಲಕ್ಷ್ಯವಾಗಿವೆ. ಪ್ರವೃತ್ತಿ ಮಾರ್ಗದ ದಿವ್ಯ ಶೃಂಗಾರದೊಂದಿಗೆ ನಿವೃತ್ತಿಮಾರ್ಗದ ಭಕ್ತಿಯು ರಸವಾಗಬಹುದೆಂದು ರೂಪಗೋಸ್ವಾಮಿ, ಮಧುಸೂದನ ಸರಸ್ವತಿ ಮೊದಲಾದವರು ಅಭಿಪ್ರಾಯಪಟ್ಟಿದ್ದಾರೆ.

ಭಕ್ತಿರಸಕ್ಕೆ ಭಗವಂತನೇ ಆಲಂಬನ ವಿಭಾವ. ಆತನ ಚರಿತ್ರೆ ಉದ್ದೀಪನ ವಿಭಾವ, ಭಗವದ್ರತಿ ಸ್ಥಾಯೀಭಾವ. ನಿರ್ವೇದ ಶಂಕಾ ಹರ್ಷಾದಿಗಳು ಸಂಚಾರಿಭಾವಗಳು, ನೇತ್ರಾದಿ ವಿಕಾರಗಳು ಅನುಭಾವಗಳು. ಜೀವಾತ್ಮ ಪರಮಾತ್ಮರನ್ನು ಆಲಂಬನವಾಗಿಟ್ಟು ಕೊಂಡು ನಾಯಿಕಾನಾಯಕರ ಶೃಂಗಾರ ವಿಲಸನರೂಪವಾದ ದಿವ್ಯಶೃಂಗಾರವಾಗಿಯೂ ಭಕ್ತಿರಸವಾಗಿಯೂ ಅನ್ನಮಾಚಾರ್ಯರ ಕಾವ್ಯಧಾರೆ ಹೊರಹೊಮ್ಮಿದೆ. ಇವರ ಕೀರ್ತನ ಸಾಹಿತ್ಯದಲ್ಲಿ ವಿಭಾವಾನುಭಾವಾದಿ ಶೃಂಗಾರರಸಸಾಮಗ್ರಿ ಅನಂತವಾಗಿದೆ. ಇವರ ಶೃಂಗಾರ ಪದಗಳಲ್ಲಿ ಶ್ರೀ ವೇಂಕಟೇಶ್ವರನೇ ನಾಯಕ, ಅಲಮೇಲುಮಂಗೆಯೇ

ನಾಯಿಕೆ. ಭೂನೀಳಾದಿ ಸ್ತ್ರೀಯರು ಸವತಿಯರು. ಕೆಲವು ಕೀರ್ತನೆಗಳಲ್ಲಿ ಕವಿ ತಾನೇ ನಾಯಿಕೆಯಾಗಿ ವಿರಹಾದಿ ಭಾವಗಳನ್ನು ವ್ಯಕ್ತೀಕರಿಸುವುದನ್ನೂ ನೋಡುತ್ತೇವೆ.

ನಾಯಿಕಾಸ್ವರೂಪ ಸ್ವಭಾವಾದಿ ವರ್ಣನೆಗಳಿಗೆ ಆಚಾರ್ಯರ ರಚನೆಗಳಲ್ಲಿ ನೂರಾರು ಉದಾಹರಣೆಗಳು ಸಿಕ್ಕುತ್ತವೆ. ಸ್ವೀಯಾ ನಾಯಿಕೆಯಲ್ಲೇ ಮುಗ್ಧಾ, ಪ್ರೌಢಾ, ಉತ್ತಮಾ, ನವೋಢಾ, ಮಧ್ಯಾ, ಪ್ರಗಲ್ಭಾದಿ ಭೇದಗಳಿವೆ. ನಾನಾ ಶೃಂಗಾರಾವಸ್ಥೆಗಳನ್ನು ಪ್ರತಿನಿಧಿಸುವ ಖಂಡಿತಾ, ಕಲಹಾಂತರಿತಾ, ವಾಸವಸಜ್ಜಿಕಾ, ಅಭಿಸಾರಿಕಾ, ಪ್ರೋಷಿತ ಭರ್ತೃಕಾ, ಸ್ವಾಧೀನಪತಿಕಾ, ವಿಪ್ರಲಬ್ಧಾ, ವಿರಹೋತ್ಕಂಠಿತಾ ಎಂಬವರನ್ನು ಕೂಡ ಕೀರ್ತನೆಗಳಲ್ಲಿ ಅನ್ನಮಾಚಾರ್ಯರು ವರ್ಣಿಸಿ ಅವರವರ ಭಾವಗಳನ್ನು ವ್ಯಕ್ತೀಕರಿಸಿದ್ದಾರೆ.

ಅನ್ನಮಾಚಾರ್ಯರ ಸಂಕೀರ್ತನೆಗಳ ಇನ್ನೊಂದು ಪ್ರಧಾನಭಾವವಾದ ಅಧ್ಯಾತ್ಮ ಸಂಕೀರ್ತನೆ ವೈರಾಗ್ಯಭಾವಗಳ ಸಮಗ್ರ ಆವಿಷ್ಕಾರದಂತಿದೆ. ಭಗವದ್ವಿಷಯಕ ರತಿ ಭಕ್ತಿಯಾದರೆ ಅದು ಪರಿಪುಷ್ಟಿಯನ್ನು ಪಡೆದು ಅಲೌಕಿಕವಾಗಿ ಪರಮಪ್ರೇಮ ರೂಪವನ್ನು ಪಡೆಯುತ್ತದೆ. ಮಹೋತ್ಕೃಷ್ಟವಾದ ಭಕ್ತಿತತ್ತ್ವವನ್ನು ಬೋಧಿಸುತ್ತಾ, ವೈರಾಗ್ಯ ಭಾವ ಉಂಟು ಮಾಡುತ್ತಾ ಸಮಚಿತ್ತ ಹೊಂದುವುದಕ್ಕೆ ನೆರವಾಗುವ ಅಧ್ಯಾತ್ಮ ಸಂಕೀರ್ತನೆಗಳು ಆಚಾರ್ಯರ ಕಾವ್ಯದ ಇನ್ನೊಂದು ಮುಖವನ್ನು ಪ್ರತಿಬಿಂಬಿಸುತ್ತವೆ. "ಸರ್ವಕರ್ತ ಸರ್ವೇಶ್ವರೇಶ್ವರನಾದ ಪ್ರತ್ಯಕ್ಷದೈವ" ವೇಂಕಟೇಶ್ವರನೇ ಎಂದು ನಂಬಿದವರಾದುದರಿಂದ ತಮ್ಮ ಇಷ್ಟದೈವವನ್ನೇ ಪರತತ್ತ್ವವೆಂದು ಅವರು ನಿರೂಪಿಸಿದರು.

> ಬೇರೊಬ್ಬರಿಲ್ಲ ವಿಶ್ವವೆಲ್ಲಾ ನಿನ್ನ ಮಹಿಮೆಯೇ
> ಯಾವ ರೀತಿಯಲ್ಲಿ ನೋಡಿದರೂ ನೀನೇ ಇರುವೆ, ಬೇರೊಂದಿಲ್ಲ
> ತಾಯಿಯಾಗಿ ಕಾಪಾಡುವೆ ತಂದೆಯಾಗಿ ಪೋಷಿಸುವೆ
> ಹೆಂಡತಿಯಾಗಿ ಮೋಹ ನೀಡುವೆ ನನಗೆ
> ದೇಹವಾಗಿ ಬೆಳೆಯುವೆ ಪುರಾಕೃತವಾಗುವೆ [1]

ಎಂದು ವೇಂಕಟೇಶ್ವರನ ಸಾರ್ವಭೌಮತ್ವವನ್ನು ನಿರೂಪಿಸಿದ್ದಾರೆ. ಶೃಂಗಾರ ಸಂಕೀರ್ತನೆಗಳಾದರೂ ಅಧ್ಯಾತ್ಮ ಸಂಕೀರ್ತನೆಗಳಾದರೂ ಭಕ್ತಿ ಭಾವದ ಆರ್ದ್ರಗುಣದಿಂದ ತುಂಬಿ ರಸಪ್ರವಾಹ ಹರಿಸಿದರು. ಉತ್ತಮ ಕಾವ್ಯಧಾರೆಗೆ ಉದಾಹರಣೆಗಳಾಗಬಲ್ಲ ಕೆಲವು ಕೀರ್ತನೆಗಳನ್ನು ಇಲ್ಲಿ ಪರಿಶೀಲಿಸಬಹುದು.

---

[1] ವೇರೊಕ್ಕರು ಲೇರು ವಿಶ್ವಮಂತಾ ನೀ ಮಹಿಮೇ
ಯೇ ರೀತಿ ನೀವೇ ಕಲವು ಯಿತರಮುಲೇದು
ತಲ್ಲಿವೈ ರಕ್ಷಿಂತುವು ತಂಡ್ರಿವೈ ಪೋಷಿಂತುವು
ಯಿಲ್ಲಾಲವೈ ಮೋಹಮಿತ್ತುವು ನಾಕು
ಪೊಳ್ಳಯಿ ಪೆರುಗುದುವು ಪೂಗಿಂಬುರಾಕೃತಮೌದು (2–148).

ಈ ರೀತಿ ಒಲವುಗಳೊಂದೊಂದು ಇಮ್ಮಡಿಯಾದುವು ಪ್ರಭುವೆ
ಕೋರಿಕೆಗಳು ಕೋಟಾನುಕೋಟಿ ಸತಿಗಾದುವು
ಸುದತಿ ನಿನ್ನ ಆಗಮನಕ್ಕಾಗಿ ನೋಡುವ ಆಸೆಯಿಂದ
ನಗುವ ಮುಖವೆಲ್ಲ ಕಣ್ಣಾಯಿತು
ನಿನ್ನ ಬಳಿಗಾಕೆ ಬರುವ ತವಕದಲ್ಲಿ
ಮನೆಯ ಮುಂಭಾಗವೆಲ್ಲ ಹೆಜ್ಜೆಗಳಾದುವು
ತರುಣಿ ನಿನ್ನ ಸುದ್ದಿಯ ಕೇಳುವ ಸಂಭ್ರಮದಲ್ಲಿ
ಬೆಲೆಯಿಲ್ಲದ ಪುಳಕಗಳೇ ಕಿವಿಗಳಾದುವು....[1]

ಪ್ರೀತಿ ಪ್ರವರ್ಧಮಾನವಾಗುವುದನ್ನು ಅನ್ನಮಯ್ಯ ನಿರೂಪಿಸಿದ ರೀತಿ ಆಕರ್ಷಕ ವಾಗಿದೆ. ಒಲವುಗಳು ಇಮ್ಮಡಿಯಾಗುತ್ತಾ ಹೋದಾಗ ಕೋರಿಕೆ ಕೋಟಿಗಟ್ಟಲೆ ಬೆಳೆಯುವುದರಲ್ಲಿ ಆಶ್ಚರ್ಯವಿಲ್ಲ. ಈ ಪ್ರೇಮಾಭಿವೃದ್ಧಿಯ ಭಾವವನ್ನು ನಾಯಿಕೆಯ ಮೇಲೆ ಬೀರಿದ ಪರಿಣಾಮದ ವರ್ಣನೆಯಿಂದ ಸೂಚಿಸಲಾಗಿದೆ. ಮುಖವೆಲ್ಲ ಕಣ್ಣಾಯಿ ತೆಂದು ವರ್ಣಿಸುವ ಮೂಲಕ ಆಸೆಯನ್ನು, ನಗೆಯನ್ನು, ವಿಕಾಸವನ್ನು ತಿಳಿಸಿ, ಮನೆಯ ಮುಂಭಾಗದ ಹೆಜ್ಜೆಗಳಿಂದ ಸಂಭ್ರಮವನ್ನು ಸೂಚಿಸಿದ ರೀತಿ ಮನೋಹರವಾಗಿದೆ.

ಬೆಳ್ದಿಂಗಳಿಗೆ ಚಂದ್ರಾತಪ (ಚಂದ್ರನ ಬಿಸಿಲು)ವೆಂದೂ ಹೇಳುವರು. ಇದನ್ನೇ ಒಂದು ಕೀರ್ತನೆಯಲ್ಲಿ ಚಮತ್ಕಾರದ ವಸ್ತುವಾಗಿ ತೆಗೆದುಕೊಂಡು ಅನ್ನಮಯ್ಯ ಹೀಗೆ ಬರೆದಿದ್ದಾರೆ :

ದುಂಡುಮಲ್ಲಿಗೆಯ ಹಾಸಿಗೆ ಮೇಲಿದ್ದು ನಿನ್ನನ್ನು ಹಾಡಿ ಹಾಡಿ
ಪೂರ್ತಿ ಜಾಗರಣೆ ಮಾಡಿದೆ ವೇಂಕಟೇಶ
ಬೆಳ್ದಿಂಗಳೆಲ್ಲ ಬಿಸಿಲಾಯಿತು...
ಜೊತೆಗೂಡಿ ನೀನು ನಾನು ಆಡಿದ ಮಾತುಗಳೆಲ್ಲ

---

[1] ఈ రీతి వలపులొకటి కినుమడాయు విభుడ
కోరికలు కోటానుకోటి సతికాయు
సుదతి నీరాకకెదురు చూచేటి యాసలను
కదిసి నగుమోమెల్ల కన్నులాయె
యిదె నీకడకు నాకెయేతెంచు తమకమున
ఆదన ముంగిలెల్ల నడుగులే యాయ
వలది నీ సుద్దులెల్ల వినియేటి వేడుకల
వలలేని పులకలే వీనులాయె....(శృ. సం., 30, పు. 4).

ಗೋಡೆಯಿಲ್ಲದ ಚಿತ್ರವಾಗಿ ವೇಂಕಟೇಶ
ಎಂದಿಗೂ ನನ್ನ ಮನಸ್ಸಿನಿಂದ ಅಳಿಯುವುದಿಲ್ಲ. [1]

ಶೃಂಗಾರದ ವಸ್ತುವನ್ನು ಅನ್ನಮಯ್ಯ ಎಷ್ಟು ಸೊಗಸಾಗಿ ನಿರೂಪಿಸಬಲ್ಲರೆಂಬುದಕ್ಕೆ ಇದೊಂದು ಉದಾಹರಣೆ. ಮಲ್ಲಿಗೆ ಹಾಸಿಗೆ ಮೇಲಿದ್ದ ತರುಣಿಗೆ ಹಾಯ್ ಎನಿಸಬೇಕು. ಆದರೆ ವಿರಹದ ಬೇಗೆಯಿಂದ ಆಕೆಗೆ ಬೆಳ್ದಿಂಗಳೂ ಬಿಸಿಲಾಯಿತು. ನಾವು ರಾತ್ರಿ ನಿದ್ದೆ ಮಾಡಿ ಹಗಲು ಎಚ್ಚರದಿಂದಿರುತ್ತೇವೆ. ಈಕೆಗೆ ಜಾಗರಣೆ ಪ್ರಯುಕ್ತ ರಾತ್ರಿ ಹಗಲಾಯಿತು, ಬೆಳ್ದಿಂಗಳು ಬಿಸಿಲಾಯಿತು. ಆಡಿದ ಮಾತು ಗೋಡೆಯಿಲ್ಲದ ಚಿತ್ರದಂತಿದೆ ಎನ್ನುವುದು ತುಂಬ ಸಹಜವಾಗಿದೆ. ಭಾಷೆ ಒಂದು ಪ್ರತಿಮೆ. ಆದರ ಒಂದೊಂದು ಅಭಿವ್ಯಕ್ತಿಯೂ ಮನುಷ್ಯನ ಮನಸ್ಸಿನಲ್ಲಿ ಚಿತ್ರವಾಗಿ ಅಚ್ಚೊತ್ತಿದಂತಾಗುತ್ತದೆ. ಗೋಡೆ ಚಿತ್ರಕ್ಕೆ ಆಧಾರ. ಆದರೆ ಗೋಡೆ ಇಲ್ಲದಿದ್ದರೂ ಈ ಶಬ್ದಚಿತ್ರ ಭದ್ರವಾಗಿದೆ ಎಂದು ಹೇಳಿದ್ದು ಪ್ರೀತಿಯ ಅತಿಶಯವನ್ನು ಸೂಚಿಸುತ್ತದೆ.

ವಿಭಾವಾನುಭಾವಾದಿಗಳಿಂದ ಶೃಂಗಾರರಸ ಸ್ಫೂರ್ತಿಯನ್ನು ಉಂಟುಮಾಡಿ ಸಹೃದಯರನ್ನು ರಂಜಿಸುವುದು ಒಂದು ರೀತಿಯಲ್ಲಿ ಸುಲಭ. ಆದರೆ ಭಕ್ತಿ ವೈರಾಗ್ಯ ಸಂಕೀರ್ತನೆಗಳನ್ನು ಕಾವ್ಯಾತ್ಮಕವಾಗಿ ಬರೆಯುವುದು ತುಂಬ ಕಷ್ಟದ ಕೆಲಸ. ಉಪಮೆ ರೂಪಕಾದಿಗಳಿಂದ, ವ್ಯಂಜಕ ಶಕ್ತಿಯಿಂದ, ಶಬ್ದಚಿತ್ರ ಭಾವಚಿತ್ರಗಳ ಮೂಲಕ ಆಚಾರ್ಯರು ಅಧ್ಯಾತ್ಮ ಸಂಕೀರ್ತನೆಗಳನ್ನೂ ಜನರಂಜಕವಾಗಿಸಿದ್ದಾರೆ.

ಮೊದಲಿರಲು ತುದಿಗಳಿಗೆ ನೀರು ಹೊತ್ತು ಸುರಿಯುವುದೇಕೆ
ಎದೆಯಲ್ಲಿ ನೀನಿರಲು ಇತರ ಯೋಚನೆಯೇಕೆ
ಇಷ್ಟು ಚಿಕ್ಕ ಕೆಲಸಕ್ಕೆ ಅಲ್ಲಿ ಇಲ್ಲಿ ಹೋಗುವುದೇಕೆ
ತುಂಬಿದ ಕೆರೆ ಬಳಿಯಿರಲು ನೀರ ಚಿಲುಮೆಗಳೇಕೆ [2]

---

[1] ಬೊಂಡುಮಲ್ಲೆ ಪಾನುಪು ಪೈನುಂಡಿ ನಿನ್ನು ಪಾಡಿ ಪಾಡಿ
ನಿಂಡು ಜಾಗರಮುಲುಂಟಿರಾ ವೇಂಕಟೇಶ
ಯೆಂಡಲಾಯ ವೆನ್ನೆಲಲುರಾ....
ಜೋಡುಗೂಡಿ ನೀವು ನೇನು ನಾಡುಕೊನ್ನ ಮಾಟಲೆಲ್ಲಾ
ಗೋಡಲೇನಿ ಚಿತ್ತರವುಲೈ ವೇಂಕಟೇಶ
ಯಾಡಾ ನಾ ಮತಿ ಬಾಯವುರಾ (ಅನ್ನ. ಸಂ., 2, ಪು. 50).

[2] ಮೊದಲುಂಡ ಕೊನಲಕು ಮೋಚಿ ನೀಳ್ಳುವೋಯನೇಲ
ಎದಲೊ ನೀವುಂಡಗಾ ನಿತರಮುಲೇಲಾ....
ಇಂತಲೋನಿ ಪನಿಕಿಗ ಇಂದುನಂದು ಜೊರನೇಲ
ಚೆಂತನಿಂಡು ಚೆರುವುಂಡೆ ಚೆಲಮಲೇಲಾ (ಅಧ್ಯಾ. ಸಂ., 2, ಪು. 27).

ನೀರು ಸುರಿಯಬೇಕಾಗಿರುವುದು ಗಿಡದ ಬುಡಕ್ಕೆ ; ತುದಿಯ ಎಲೆಗಳಿಗಲ್ಲ. ಎದೆಯಲ್ಲೇ ಇರುವ ಪರಮಾತ್ಮನನ್ನು ಬಿಟ್ಟು ಎಲ್ಲೆಲ್ಲೋ ಅವನನ್ನು ಹುಡುಕುವುದು ವ್ಯರ್ಥ ಎಂದಿದ್ದಾರೆ.

ಪ್ರತಿಮಾತ್ಮಕ ಕಾವ್ಯ ಆಧುನಿಕ ಕಾವ್ಯದ ಗುಣ. ಶಬ್ದಗಳಿಂದ ಚಿತ್ರಗಳನ್ನು ಮೂಡಿಸುವ ಮೂಲಕ ಅಂತರಂಗವನ್ನು ಆವಿಷ್ಕರಿಸುವ ಜಾಣ್ಮೆ ಅನ್ನಮಯ್ಯನಲ್ಲಿ ಪುಷ್ಕಲವಾಗಿದೆ. ಈ ಲೋಕವನ್ನೇ ತೂಗುವ ಭಗವಂತನ ಉಯ್ಯಾಲೆಯನ್ನು ತೊಟ್ಟಿಲ ಹಾಡೊಂದರಲ್ಲಿ ಸುಂದರ ಚಿತ್ರದ ಮೂಲಕ ಹೇಳಿದ್ದಾರೆ :

ಉದಯಾಸ್ತಶೈಲಗಳೊಪ್ಪುವ ಕಂಬಗಳಾಗಿರುವ
ನಕ್ಷತ್ರಮಂಡಲ ಹೊತ್ತಿರುವ ಉಯ್ಯಾಲೆ
ಆಕಾಶಪಥವು ಅಡ್ಡತೊಲೆಯಾಗಿರಲು
ಅಖಿಲವೂ ತುಂಬಿತು ಈ ಉಯ್ಯಾಲೆ
ಭದ್ರವಾದ ವೇದಗಳೇ ಚಿನ್ನದ ಸರಪಣಿಗಳಾಗಿ
ಹಿಡಿಯಲು ಹೆದರಿಕೆಯಾಯಿತೀ ಉಯ್ಯಾಲೆ [1]

ಭಕ್ತಿ ಭಾವವನ್ನು ಅಭಿವ್ಯಕ್ತಿಸುವಾಗ ಅನೇಕ ರೀತಿಯಲ್ಲಿ ಅಂತರಂಗವನ್ನು ಆವಿಷ್ಕರಿಸುವುದನ್ನು ನೋಡುತ್ತೇವೆ. ದೀನರಂತೆ ಬೇಡಿಕೊಳ್ಳುವವರು ಕೆಲವರಾದರೆ ಸ್ನೇಹಿತರಂತೆ ಕೇಳಿಕೊಳ್ಳುವವರು ಕೆಲವರು, ಭಗವಂತನನ್ನು ವಾತ್ಸಲ್ಯದಿಂದ ಲಾಲಿಸುವವರು ಕೆಲವರು, ಪತಿಯಂತೆ ಪ್ರೀತಿಸುವವರು ಕೆಲವರು. ಇವೆಲ್ಲ ಭಾವಗಳನ್ನೂ ಅನ್ನಮಾಚಾರ್ಯರು ವ್ಯಕ್ತ ಮಾಡಿದ್ದಾರೆ.

ಹೂಗಳ ಮೇಲೂ ಮುಳ್ಳಿನ ಮೇಲೂ ಬೆಳ್ದಿಂಗಳು
ಇದರಿಂದ ಬೆಳ್ದಿಂಗಳಿಗೆ ಹಾನಿಯೇ ?

---

[1] ಉದಯಾಸ್ತ ಶೈಲಂಬುಲೊನರ ಕಂಭಮುಲೈನ
ವುಡು ಮಂಡಲಮು ಮೋಚೆನುಯ್ಯಾಲ
ಅದನ ನಾಕಾಶಪದ ಮಡ್ಡದೂಲಂಬೈನ
ಅಖಿಲಂಬು ನಿಂಡೆ ನೀ ವುಯ್ಯಾಲ
ಪದಿಲಮುಗ ವೇದಮುಲು ಬಂಗಾರು ಚೇರುಲೈ
ಪಟ್ಟುವೆರಪೈತೋಚೆನುಯ್ಯಾಲ (ಅಧ್ಯಾ. ಸಂ., 1, ಪು. 45).

ಪಾಪಪುಂಜವಾದ ನನ್ನನ್ನು ಪಾವನರ ಕಾಪಾಡಿದ ನೀನು
ಕಾಪಾಡಿದರೆ ನಿನ್ನ ಕೃಪೆ ಕಡಿಮೆಯಾಗುವುದೇ ? [1]

ಒಳ್ಳೆಯವರನ್ನೂ ಕೆಟ್ಟವರನ್ನೂ ಸಮದೃಷ್ಟಿಯಿಂದ ಕಾಪಾಡುವ ಭಗವಂತನ ಗುಣವನ್ನು ಈ ಕೀರ್ತನೆ ಧ್ವನ್ಯಾತ್ಮಕವಾಗಿ ನಿರೂಪಿಸಿದೆ.

ಅಧ್ಯಾತ್ಮ ಸಂಕೀರ್ತನೆಗಳನ್ನು ರಚಿಸುವಾಗಲೂ ಅನ್ನಮಯ್ಯ ಲೋಕದ ರೀತಿ ನೀತಿಗಳನ್ನು ಮರೆತಿಲ್ಲ. ಆಧ್ಯಾತ್ಮಿಕ ಸಾಧನೆಯಲ್ಲಿ ಮಾನವನ ಗೆಲುವು ಸೋಲುಗಳನ್ನು ತಮ್ಮನ್ನೇ ಉದಾಹರಣೆಯಾಗಿಟ್ಟುಕೊಂಡು ವರ್ಣಿಸಿದ್ದಾರೆ. ಸುಜ್ಞಾನವನ್ನು ಪಡೆಯುವ ಸಾಧನೆಯ ಹಂತಗಳಲ್ಲಿ ಮನುಷ್ಯನ ವ್ಯರ್ಥ ಪ್ರಯತ್ನಗಳನ್ನು ರೂಪಕಗಳ ಮೂಲಕ ನಿರೂಪಿಸಿದ ಸಂದರ್ಭಗಳಿವೆ. ''ಎಲ್ಲಿಯು ಸುಜ್ಞಾನ ಎಲ್ಲಿಯು ಅರಿವು ನನಗೆ, ಬೂದಿಯಲ್ಲಿ ಹೋಮವಾಯಿತು [2] ಕಾಲ, ಪೊದೆಯ ಮರೆಯ ಮೃಗವಾಯಿತು ಕಾಲ, ಅಗ್ನಿಬಳಿಯ ಬೆಣ್ಣೆಯಾಯಿತು ಕಾಲ, ಪುಕ್ಕಟೆ ಪುರಾಣವಾಯಿತು ಕಾಲ... '' [3]

'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂಮಮ' ಎಂಬ ಶರಣಾಗತಿಭಾವ ಅನೇಕ ಕೀರ್ತನೆಗಳ ವಿಷಯವಾಗಿದೆ. ತಾಯಿ ಮಗುವನ್ನು ನೋಡಿಕೊಳ್ಳುವಂತೆ ತನ್ನನ್ನು ನೋಡಿಕೊಳ್ಳಬೇಕೆಂದು ಭಗವಂತನಲ್ಲಿ ಭಕ್ತನ ಪ್ರಾರ್ಥನೆ. ಆಡಿ ಬಂದ ಮಗುವನ್ನು ತಾಯಿ ಸಂತೈಸಿ ಉಣಿಸಿಕ್ಕದಿರುವಳೇ ? ಎಂಬಂಥ ಹೋಲಿಕೆಗಳು ವಾತ್ಸಲ್ಯಭಾವಕ್ಕೆ ಪ್ರತೀಕಗಳಾಗಿರುತ್ತವೆ.

ದೇವ, ನಾ ನಿನಗೆ ಅಧೀನ ನೀ ಎನಗೆ ದಿಕ್ಕುದೆಸೆ
ಸೇವೆ ಮಾಡದಿದ್ದರೂ ರಕ್ಷಿಸುವುದು ನಿನ್ನದೇ ಭಾರ
ಆಡಿ ಬಂದ ಮಗುವನ್ನು ಅಪರಾಧಿಯಾಗಿ ಮಾಡಿ ತಾಯಿ

---

[1] ಪೂವುಲ ಪೈಗಾಸೀ ಚೊರಿ ಮುಂಡ್ಲಪೈ ಗಾಸೀನಿ
ಆವಲ ವೆನ್ನಲಕೇಮಿ ಹಾನಿ ವಚ್ಚೀನಾ
ಪಾವನುಲ ನಟುಗಾಚಿ ಪಾಪಪುಂಜಮೈನ ನನ್ನು
ಗಾವಗಾ ನೀ ಕೃಪಕುನು ಗಡಮಯ್ಯೀನಾ (ಅಧ್ಯಾ ಸಂ., 2, ಪು. 87).

[2] ವ್ಯರ್ಥವಾಯಿತೆಂದು ಹೇಳಲು ಬೂದಿಯಲ್ಲಿ ಮಾಡಿದ ಹೋಮ ಎಂದು ಹೇಳುವುದು ನುಡಿಗಟ್ಟು. ಹೋಮ ಮಾಡುವುದು ಅಗ್ನಿಯಲ್ಲಿ; ಬೂದಿಯಲ್ಲಲ್ಲ. ಹಾಗೆ ಬೂದಿಯಲ್ಲಿ ಮಾಡಿದರೆ ಅದು ವ್ಯರ್ಥ.

[3] ಏಡ ಸುಜ್ಞಾನ ಮೇಡ ತೆಲಿವಿನಾಕು
ಬೂಡಿದಲೋ ಹೋಮಮೈಪೋಯ ಕಾಲಮು....
ಪೊದ ಚಾಟು ಮೃಗಮೈಪೋಯ ಕಾಲಮು...
ಅಗ್ನಿಪೊಂತನುನ್ನ ವೆನ್ನಯೈ ಪೋಯ ಕಾಲಮು....
ಪುಕ್ಕಿಟಿ ಪುರಾಣಮಯಿ ಪೋಯ ಕಾಲಮು (ಅಧ್ಯಾ. ಸಂ., 1, ಪು. 31).

ಅನ್ನ ಹಾಕದೆ ಇರುವಳೇ
ವಿನೋದಕ್ಕೆ ಗಿಳಿಗೆ ಚೋದ್ಯದ ಮಾತುಗಳ ಕಲಿಸಿ ಅದು
ಆಡಿದಂತೆ ಆಡಿದರೆ ಮೂದಲಿಸಬಹುದೇ....[1]

ಛಂದಸ್ಸು, ಲಯ, ಭಾವ, ಭಾಷೆ ಇತ್ಯಾದಿಗಳನ್ನು ಜನಸಾಮಾನ್ಯರಿಗೆ ತಿಳಿಯುವಂತೆ ರೂಪಿಸಿಕೊಂಡು ಆಚಾರ್ಯರು ಕೀರ್ತನೆಗಳನ್ನು ಬರೆದಿದ್ದಾರೆ. ಇದರಿಂದ ಗಾದೆಗಳು ಮುಂತಾದ ಭಾಷಾಭಿವ್ಯಕ್ತಿಗಳಿಗೆ ಅವರ ಸಾಹಿತ್ಯ ನಿಧಿಯಂದಿದೆ. ಬಳಕೆಯಲ್ಲಿರುವ ಗಾದೆಗಳನ್ನು, ನುಡಿಗಟ್ಟುಗಳನ್ನು ಕೀರ್ತನೆಗಳಲ್ಲಿ ಅಳವಡಿಸಿಕೊಂಡದ್ದು ಮಾತ್ರವಲ್ಲದೆ ಹಲವನ್ನು ಹೊಸದಾಗಿ ಅವರೇ ಸೃಷ್ಟಿಮಾಡಿದ್ದಾರೆ. ಕಾವ್ಯಾತ್ಮಕ ರಚನೆಗಳಿಗೆ ನುಡಿಗಟ್ಟುಗಳು ಬಹಳಷ್ಟು ನೆರವಾಗಿವೆ. ತಮ್ಮ ಅಪಾರ ಜೀವನಾನುಭವವನ್ನು ಇಂಥ ಮಾತುಗಳಲ್ಲಿ ಅನ್ನಮಯ್ಯ ಅಡಗಿಸಿದ್ದಾರೆ :

"ಮನುಷ್ಯನಿಲ್ಲದೆ ಎತ್ತು ತಂತಾನೇ ಉಳುವುದೇ" (6-130), "ನದಿಯ ಮರಳು ನದಿಗೇ ಗೊತ್ತು (10-121), "ಮನಸ್ಸನ್ನು ನಂಬಿದರೆ ಮನುಷ್ಯನೇ ದೇವರು" (7-118), "ನದಿಯ ನೀರು ಕುಡಿದು ಕಾಲುವೆಯ ಹೊಗಳಿದಂತೆ" (9-247) ಮುಂತಾದ ಕೆಲವು ಗಾದೆಗಳನ್ನು ಆಚಾರ್ಯರು ಬಳಸಿದ್ದಾರೆ.

ವಿನೋದಕ್ಕೆ ಬೆಲೆಯಿಲ್ಲ ಬೆಳ್ದಿಂಗಳಿಗೆ ಅಳತೆಯಿಲ್ಲ
ನಿನ್ನ ಮಾತಿಗೆ ಅಡ್ಡಿಯೆಂಬುದಿಲ್ಲ[2]
ನನ್ನಿಗೆ ಬೆಲೆಯಿಲ್ಲ ಮಾತಿಗೆ ಕೊನೆಯಿಲ್ಲ....
ನೋಡುವುದಕ್ಕೆ ವ್ಯಥೆ ಇಲ್ಲ ಸೊಂಪಾದುದಕ್ಕೆ ವೇಳೆಯಿಲ್ಲ[3]

ಮುಂತಾದ ಉಕ್ತಿಗಳು ಮನೋಹರವಾಗಿವೆ.

ಅನ್ನಮಾಚಾರ್ಯರ ಕೆಲವು ಉಪಮೆಗಳು ಮತ್ತು ರೂಪಕಗಳು ಅದ್ವಿತೀಯ

---

[1] ದೇವ ನೇನೀಯಾಧೀನಮು ದಿಕ್ಕುದೆಸ ನಾಕು ನೀವೇ
ಸೇವ ಸೇಯಕುಂಡಿನಾ ರಕ್ಷಿಂಚ ನೀಕು ಭಾರಮು
ಆಡಿವೆಚ್ಚಿನ ಬಿಡ್ಡನಿ ನಪರಾಧಿ ಜೇಸಿ ತಲ್ಲಿ
ವೋಡಕ ಯನ್ನಮು ವೆಟ್ಟಕುಂಡ ವಚ್ಚುನಾ
ವೇಡುಕಕಾಡು ಚಿಲ್ಕಕು ವಿಂತಮಾಟಲೆಲ್ಲಾ ನೇರ್ಪಿ
ಅಡಿನಚ್ಚೋ ಯಾಡಿತೇನು ಆದಲಿಂಚವಚ್ಚುನಾ (ಅಧ್ಯಾ. ಸಂ., 2, ಪು. 143),

[2] ವೇಡುಕಕು ವೆಲಲೇದು ವೆನ್ನೆಲಕು ಕೊಲಲೇದು
ಆಡನೀವೇ ತನಮಾಟ ಕಡ್ಡಮುಲೇದು (13-226).

[3] ಮಚ್ಚಿಕಕು ವೆಲಲೇದು ಮಾಟಲಕು ತುದಲೇದು....
ಚೂಪುಲಕು ವಂತಲೇದು ಸೊಂಪುಲಕು ವೇಳಲೇದು (ಶೃ. ಸಂ., 29, ಪು. 227).

ವಾಗಿದ್ದು ಅವರ ಭಾವನಾಶಕ್ತಿಗೆ ಪ್ರತೀಕವಾಗಿವೆ. ಕೆಲವು ವಿಚಿತ್ರವಾದ ಹೋಲಿಕೆಗಳನ್ನು ಅವರು ನೀಡಿದ್ದಾರೆ.

ಅಂಗಡಿಗೆ ಎತ್ತಿದ ದೀಪಗಳು ಅಂಗನೆಯರ ಮುಖಾಂಬುಜಗಳು....
ತಟ್ಟೆಯಲ್ಲಿರುವ ಬಿಸಿಪಲ್ಯಗಳು ಗರುವ, ಮುನಿಸುಗಳು
ನೋಡಿದರೆ ಬಿಸಿಲಲ್ಲಿ ನೆರಳಂತೆ ಈ ಕೂಟಗಳು.
ಮುರಿಯಲಾರದ ಬಿಲ್ಲಿನ ಹಗ್ಗ ಕಿರುನಗೆಗಳು
ಒಳ್ಳೆಯತನದೊಳಗಿನ ನೋವು ಮಾತೊಳಗಿನ ಮಾತು
ಕೆಂಡದ ಮೇಲೆ ಚೆಲ್ಲಿದ ಎಣ್ಣೆ ತಣಿಯದ ಆಸೆಗಳು
ದಾಹಕ್ಕೆ ತುಪ್ಪ ಕುಡಿದಂತೆ ತವಕದೊಳಗಿನ ತಾಳ್ಮೆ [1]

ಹೊಸ ಹೊಸ ಉಪಮಾನಗಳಿಂದ ಕೂಡಿದ ಅಲಂಕಾರಗಳು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಅಸಂಖ್ಯಾತವಾಗಿ ಕಂಡುಬರುತ್ತವೆ. "ಏನನ್ನು ನೆನೆದರೂ ಯಾವ ಕಾಲದಲ್ಲಾದರೂ ಸೂಜಿಯ ಮೂಟೆಯ ಸುಖಗಳಿವು" (ಅಧ್ಯಾ. ಸಂ., 1, ಪು. 56) ಎಂದಾಗ ಆ ಸುಖದ ಕಲ್ಪನೆಯು ಅರಿವಾಗುವುದು !

ಪುರಂದರದಾಸರು ಮತ್ತು ಅನ್ನಮಾಚಾರ್ಯರು ಕಲಾತ್ಮಕ ಸ್ವರೂಪಗಳನ್ನು ತಮ್ಮ ಕೀರ್ತನೆಗಳಲ್ಲಿ ಉಲ್ಲೇಖಿಸುವ ಮೂಲಕ, ಕಲಾತ್ಮಕ ಅಭಿವ್ಯಕ್ತಿಯನ್ನು ತೋರಿಸುವುದರ ಮೂಲಕ ಸೌಂದರ್ಯಪ್ರಜ್ಞೆಯನ್ನು ಮೂಡಿಸಿದ್ದಾರೆ. ಕಲಾತ್ಮಕ ರೂಪಗಳ ಉಲ್ಲೇಖಗಳ ಮೂಲಕ ಸಾಂಸ್ಕೃತಿಕವಾಗಿ ಬೆಳೆದು ಬಂದಿರುವ ಅಭಿರುಚಿ ಮತ್ತು ಸಾಹಿತ್ಯಾದಿಗಳಲ್ಲಿ ವಿಕಾಸಹೊಂದಿರುವ ಮಾರ್ಗಗಳ ಪರಿಚಯ ನಮಗಾಗುತ್ತದೆ. ಇದರಿಂದ ಈ ಇಬ್ಬರು ಮಹನೀಯರ ಸಾಧನೆ ಏನೆಂಬುದು ತಿಳಿದುಬರುತ್ತದೆ.

---

[1] ಅಂಗಡಿಕೆತ್ತಿನ ದಿವ್ವೆಲಂಗನ ಮುಖಾಂಬುಜಮುಲು....
ಕುಚಮುಲೋನಿ ವೇಡಿ ಕೂರಲು ಗರುವೆಂಬಲು ಪೊಲಯಲುಕಲು
ಯೆಂಚಗನೆಂಡಲೋ ನೀಡಲು ಯೆಡನೆಡಕೂಟಮುಲು
ತೆಂಚಗರಾನಿ ವಲೆತಾಳ್ಲು ತೆಲಿವಿಪಡನಿ ಲೇತ ನವ್ವುಲು
ಮಂಚಿತನಮುಲೋನಿ ನೊಪ್ಪುಲು ಮಾಟಲಲೋನಿ ಮಾಟಲು
ನಿಪ್ಪುಲಮೀದ ಜಲ್ಲಿನ ನೂನೆಲು ನಿಗಿಡಿ ತನಿವಿಲೇನಿ ಯಾಸಲು
ದಪ್ಪಿಕಿ ನೇಯಿದಾಗಿನಟ್ಲು ತಮಕಮುಲೋನಿ ತಾಲಮಿ (ಅಧ್ಯಾ. ಸಂ., 1, ಪು. 1).

# ತೌಲನಿಕ ವಿವೇಚನೆ

ದಕ್ಷಿಣ ಭಾರತದ ಕೀರ್ತನಕಾರರಲ್ಲಿ ಮೇರುಸದೃಶರಾದ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಸಂಗೀತ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಮಹತ್ತ್ವಪೂರ್ಣವಾದುದು. ಇವರ ಕೀರ್ತನೆಗಳ ಪರಿಶೀಲನೆಯಿಂದ ದಕ್ಷಿಣ ಭಾರತೀಯ ಸಂಸ್ಕೃತಿಯ ಹಲವು ಮುಖಗಳ ಪರಿಚಯ ಆಗುತ್ತದೆಂಬುದು ಇದುವರೆಗೆ ಪರಿಶೀಲಿಸಿದ ವಿಷಯಗಳಿಂದ ತಿಳಿಯಿತು. ಶಾಸನ, ಕಾವ್ಯ, ನಾಟಕ, ಸ್ಥಳನಾಮ ಮುಂತಾದವನ್ನು ಸಾಂಸ್ಕೃತಿಕ ಅಧ್ಯಯನಕ್ಕಾಗಿ ಇತ್ತೀಚೆಗೆ ವಿದ್ವಾಂಸರು ತೆಗೆದುಕೊಳ್ಳುತ್ತಿರುವುದನ್ನು ನೋಡುತ್ತೇವೆ. ಇಂಥ ಹೊಸ ಅಧ್ಯಯನಗಳಿಂದ ಸಂಸ್ಕೃತಿಯನ್ನು ಬೇರೆ ಬೇರೆ ದೃಷ್ಟಿಗಳಿಂದ ಪರಿಶೀಲಿಸಿದಂತಾಗುತ್ತದೆ. ಕೀರ್ತನ ಸಾಹಿತ್ಯ ಜನರೊಡನೆ ನೇರ ಸಂಬಂಧವನ್ನು ಪಡೆಯುವ ಶಕ್ತಿಯುಳ್ಳಂಥದು. ಜನರ ಸಂಸ್ಕೃತಿಯ ಸಾರವನ್ನು ಈ ಸಾಹಿತ್ಯ ಗ್ರಹಿಸಿ ಅದನ್ನು ಕೀರ್ತನವೆಂಬ ಮಧುರ ಮಾಧ್ಯಮದ ಮೂಲಕ ಜನರಿಗೇ ನೀಡಿತು. ಈ ಕಾರಣದಿಂದ ಇದು ಸಾಂಸ್ಕೃತಿಕ ಅಧ್ಯಯನಕ್ಕೆ ನೆರವಾಯಿತು.

ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳು ತೌಲನಿಕ ಅಧ್ಯಯನಕ್ಕೆ ಯೋಗ್ಯವಾದವೆಂಬುದನ್ನು ಅನೇಕ ವಿಷಯಗಳಿಂದ ಮನಗಾಣಬಹುದು. ಅವರಿಬ್ಬರೂ ದಕ್ಷಿಣ ಭಾರತಕ್ಕೆ ಸೇರಿದವರು, ವಿಜಯನಗರ ರಾಜ್ಯಕ್ಕೆ ಸೇರಿದವರು, ಕರ್ಣಾಟಕ ಸಂಗೀತಕ್ಕೆ ಮಹತ್ತ್ವದ ಕೊಡುಗೆ ನೀಡಿದವರು, ಮಾರ್ಗ ಮತ್ತು ದೇಶಿ ಎಂಬ ಎರಡು ಪದ್ಧತಿಗಳನ್ನೂ ಸಮದೃಷ್ಟಿಯಿಂದ ನೋಡಿದವರು, ವಿಷ್ಣುಭಕ್ತರು. ಇವರಿಬ್ಬರ ಕೀರ್ತನೆಗಳ ತೌಲನಿಕ ವಿವೇಚನೆಯಿಂದ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಿಗಿರುವ ಸಾಂಸ್ಕೃತಿಕ ಸಂಬಂಧ ಎಷ್ಟು ನಿಕಟವಾಗಿದೆ ಎಂಬುದು ತಿಳಿದುಬರುತ್ತದೆ.

ಇವರಿಬ್ಬರ ಕೀರ್ತನೆಗಳನ್ನು ಪರಿಶೀಲಿಸಿದಾಗ ಕೆಲವು ವ್ಯತ್ಯಾಸಗಳು ಕೂಡ ಕಂಡುಬರುತ್ತವೆ. ಮಧ್ವದರ್ಶನವನ್ನೇ ನಂಬಿ ಹಾಡುಗಳ ಮೂಲಕ ಅದನ್ನು ಪ್ರಚಾರ ಮಾಡಬೇಕೆಂದು ಬಯಸಿದವರು ಪುರಂದರದಾಸರು; ವಿಶಿಷ್ಟಾದ್ವೈತವನ್ನು ನಂಬಿ ಆಚರಿಸಿದವರು ಅನ್ನಮಾಚಾರ್ಯರು. ದಾಸರ ಇಷ್ಟದೈವ ವಿಠಲನಾದರೆ, ಆಚಾರ್ಯರ ಇಷ್ಟದೈವ ವೇಂಕಟೇಶ್ವರ. ಇವರಿಬ್ಬರ ಜೀವನಗಳಲ್ಲೂ ವ್ಯತ್ಯಾಸವಿದ್ದು, ಇದರ ಪ್ರಭಾವ ಇವರ ಕೀರ್ತನೆಗಳ ಮೇಲೂ ಆಗಿದೆ. ಹೀಗೆ ಸಾದೃಶ್ಯ ವೈದೃಶ್ಯಗಳನ್ನು ವಿವೇಚನೆ ಮಾಡಿದಾಗ ಅನೇಕ ವಿಷಯಗಳ ಪರಿಚಯವಾಗುತ್ತದೆ.

ದಾಸರ ಕೀರ್ತನೆಗಳಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳು ಇರುತ್ತವೆ. ಆಚಾರ್ಯರ ಕೀರ್ತನೆಗಳಲ್ಲಿ ಅನುಪಲ್ಲವಿ ಕೆಲವು ಕಡೆ ಕಂಡುಬಂದರೂ ಸಾಮಾನ್ಯವಾಗಿ

ಪಲ್ಲವಿಯೇ ಎರಡು ಖಂಡಗಳಾಗಿರುತ್ತದೆ. ಕೀರ್ತನೆಯ ಸ್ವರೂಪದಲ್ಲಿ ನಾಮಮುದ್ರೆಯು ಪರಿಶೀಲಿಸತಕ್ಕದ್ದು. ಜಯದೇವನ ಗೀತಗೋವಿಂದಾದಿ ಕೃತಿಗಳಲ್ಲಿ ನಾಮಾಂಕಿತವಿದೆ. ಕನ್ನಡದ ವಚನಕಾರರಲ್ಲಿರುವ ನಾಮಾಂಕಿತಗಳು ಪ್ರಸಿದ್ಧವಾಗಿವೆ; ಹರಿದಾಸರಲ್ಲೂ ಅಂಕಿತವಿರುವುದನ್ನು ನೋಡುತ್ತೇವೆ. ಇಂಥ ಸಂಪ್ರದಾಯ ತೆಲುಗು ಕೀರ್ತನಕಾರರಲ್ಲಿ ಇಲ್ಲ. ಆದರೆ ತಾಳ್ಳಪಾಕ ಅನ್ನಮಾಚಾರ್ಯರು ಮತ್ತು ಅವರ ಕುಟುಂಬದವರೆಲ್ಲರೂ ವೇಂಕಟೇಶ್ವರ ನಾಮಾಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ತಮ್ಮ ಹಿಂದಿನ ಕೀರ್ತನಕಾರರಿಂದ ಸ್ಫೂರ್ತಿ ಪಡೆದವರು. ಕನ್ನಡ ವಚನಕಾರರು ಆದ್ಯರೆಂಬ ಹೆಸರಿನ ಕೀರ್ತನಕಾರರು, ಶ್ರೀಪಾದರಾಜರು, ವಾದಿರಾಜರು ಮತ್ತು ವ್ಯಾಸರಾಯರು ಇವರೆಲ್ಲ ಪುರಂದರದಾಸರ ಕೀರ್ತನೆಗಳ ಆವಿರ್ಭಾವಕ್ಕೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರೇರಕ ಶಕ್ತಿಗಳಾದರು. ಅನ್ನಮಾಚಾರ್ಯರ ಪ್ರಭಾವ ಕೂಡ ಪುರಂದರದಾಸರ ಮೇಲೆ ಉಂಟು ಎಂಬುದರಲ್ಲಿ ಸಂದೇಹವಿಲ್ಲ. ಪುರಂದರದಾಸರು ಅನ್ನಮಾಚಾರ್ಯರನ್ನು ಸಂದರ್ಶಿಸಿದ ರೆಂಬ ಆಚಾರ್ಯರ ಮೊಮ್ಮಗನೇ ಬರೆದ ವಾಕ್ಯಗಳಿದ್ದೇ ಇವೆ.

ಪುರಂದರದಾಸರಿಗಿದ್ದ ಹಾಗೆ ಆಚಾರ್ಯರಿಗೆ ಕೀರ್ತನೆಗಳ ಭವ್ಯ ಪರಂಪರೆ ಇರಲಿಲ್ಲ. ಕ್ರಿ. ಶ. ಸು. 10-11 ಶತಮಾನಗಳಿಂದಲೂ ತೆಲುಗಿನ ಪದಸಾಹಿತ್ಯ ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆಯಾದರೂ ವಚನಕಾರರಂಥ ಭವ್ಯ ಪರಂಪರೆಯ ಭಾವನಿಷ್ಠ ಕವಿಗಳು ತೆಲುಗಿನಲ್ಲಿ ಇರಲಿಲ್ಲ. ಕ್ರಿ. ಶ. 12-13 ಶತಮಾನಕ್ಕೆ ಸೇರಿದ ಕೃಷ್ಣಮಾಚಾರ್ಯರು ತೆಲುಗಿನ ಮೊದಲ ವಾಗ್ಗೇಯಕಾರರೆನ್ನಲಾಗಿದೆ. ಇವರ ರಚನೆಗಳನ್ನು ಅನ್ನಮಾಚಾರ್ಯರು ನೋಡಿರಬಹುದಾದರೂ, ಆಚಾರ್ಯರ ಕೀರ್ತನ ಸೃಷ್ಟಿ ಬಹಳ ಮಟ್ಟಿಗೆ ಸ್ವಪ್ರತಿಭೆಯಿಂದ ಮೂಡಿಬಂದುದು. ಸಂಕೀರ್ತನ ಲಕ್ಷಣವೆಂಬ ಲಕ್ಷಣವನ್ನು ಬರೆದು, ಕೀರ್ತನೆಗಳನ್ನು ಬರೆದು ಲಕ್ಷಣ ಲಕ್ಷ್ಯಗಳೆರಡನ್ನೂ ಕೊಟ್ಟವರು ಆಚಾರ್ಯರು.

ಸಾಮಾಜಿಕ ಸಂಸ್ಥೆಗಳಾದ ಮದುವೆ, ಕುಟುಂಬ, ಬಾಂಧವ್ಯ ಮುಂತಾದವನ್ನು ಕೀರ್ತನೆಗಳಲ್ಲಿ ಉಲ್ಲೇಖಿಸಿದ ದಾಸರು ಮತ್ತು ಆಚಾರ್ಯರು ಕರ್ಣಾಟಕ ಮತ್ತು ಆಂಧ್ರ ಪ್ರದೇಶಗಳಲ್ಲಿ ಒಂದೇ ತರಹದ ಸಂಪ್ರದಾಯಗಳಿರುವುದನ್ನು ತೋರಿಸಿಕೊಟ್ಟಿದ್ದಾರೆ. ಮದುವೆಯಲ್ಲಿ ಕನ್ಯಾದಾನ, ಹೋಮ, ಪಾಣಿಗ್ರಹಣ, ಸಪ್ತಪದಿ ಮುಂತಾದವು ಭಾರತಾದ್ಯಂತ ಪರಿಚಿತವಾಗಿರುವಂಥವೇ. ಮಹಾಕಾವ್ಯಗಳಲ್ಲಿರುವಂತೆ ವಿವಾಹ ವರ್ಣನೆಗಳು ಕೀರ್ತನೆಗಳಲ್ಲಿರುವುದಿಲ್ಲ. ಆದರೆ ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಉಲ್ಲೇಖಗೊಂಡಿರುವ ಸಂಪ್ರದಾಯಗಳ ಪರಿಶೀಲನೆಯಿಂದ ವಿವಾಹ ಪದ್ಧತಿಗಳ ಪರಿಚಯ ಆಗುತ್ತದೆ. ಮಾಂಗಲ್ಯಧಾರಣೆ ಆರ್ಷ ಸಂಪ್ರದಾಯವಲ್ಲ. ಇದನ್ನು ದ್ರಾವಿಡ ಸಂಪ್ರದಾಯವೆಂದು ಹೇಳುತ್ತಾರಾದರೂ ಪ್ರಾಚೀನ ತಮಿಳು ಸಾಹಿತ್ಯದಲ್ಲಾಗಲಿ, ತೆಲುಗು ಕಾವ್ಯಗಳಲ್ಲಾಗಲಿ ಮಾಂಗಲ್ಯಧಾರಣೆಯ ವರ್ಣನೆಗಳಿಲ್ಲ.

ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕಾಲಕ್ಕೆ ಮಾಂಗಲ್ಯಧಾರಣೆ ಆರ್ಷ ಸಂಪ್ರದಾಯಗಳಲ್ಲೂ ಒಂದು ಭಾಗವಾಯಿತು. ತಾಳಿಯನ್ನು ಕುರಿತ ಪುರಂದರದಾಸರ ಉಲ್ಲೇಖಗಳಿಂದ ಆ ಕಾಲಕ್ಕೆ ಮದುವೆಯಲ್ಲಿ ತಾಳಿಗೆ ತುಂಬ ಪ್ರಾಧಾನ್ಯವಿತ್ತೆಂದು ತಿಳಿದು ಬರುತ್ತದೆ. ತಾಳಿ ಕಟ್ಟುವುದೇ ಮದುವೆಯ ಪ್ರಧಾನೋದ್ದೇಶ ಎಂಬಂತೆ ಕೆಲವು ಕಡೆ ಅನ್ನಮಾಚಾರ್ಯರು ಬರೆದಿದ್ದಾರೆ. ತೆಲುಗರ ವಿವಾಹವಿಧಿಗಳಲ್ಲಿ ಮೊದಲಿನಿಂದಲೂ 'ತಲಬ್ರಾಲು'ಗೆ ಹೆಚ್ಚಿನ ಪ್ರಾಧಾನ್ಯವಿತ್ತು. ಇದನ್ನು ಅನ್ನಮಯ್ಯ ಹಲವು ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. ತಟ್ಟೆಗಳಲ್ಲಿ ತುಂಬಿದ ಅಕ್ಕಿಯನ್ನು ವಧೂವರರು ಒಬ್ಬರ ತಲೆಯ ಮೇಲೊಬ್ಬರು ಸುರಿಯುವ ಈ ಸಂಪ್ರದಾಯ ಇಂದಿಗೂ ಮದುವೆಗಳಲ್ಲಿ ಅತ್ಯಂತ ವಿನೋದದ ಒಂದು ಪ್ರಸಂಗ. ಇಂಥ ವಿನೋದ ಸಂದರ್ಭಗಳಲ್ಲಿ ಜೀರಿಗೆಬೆಲ್ಲ ಹಾಕುವುದೊಂದು. ಕನ್ನಡಿಗರ ಮದುವೆಗಳಲ್ಲಿ ಜೀರಿಗೆಬೆಲ್ಲ ಹಾಕಲು ವಧೂವರರು ನಾ ಮುಂದು ತಾ ಮುಂದು ಎಂದು ಹವಣಿಸುವರು. ಇಂಥ ಕೆಲವು ಉಲ್ಲೇಖಗಳಿಂದ ವಿವಾಹ ಸಂಪ್ರದಾಯಗಳಿಗೆ ಪ್ರಾದೇಶಿಕವಾಗಿ ಇರುವ ಪ್ರಾಮುಖ್ಯವನ್ನು ಗಮನಿಸ ಬಹುದು.

ಇವರಿಬ್ಬರ ಕೀರ್ತನೆಗಳನ್ನು ಪರಿಶೀಲಿಸಿದಾಗ ತೆಲುಗರ ಮತ್ತು ಕನ್ನಡಿಗರ ಮದುವೆ ಸಂಪ್ರದಾಯಗಳಲ್ಲಿ ಹೆಚ್ಚಿನ ಸಾಮ್ಯವಿರುವ ವಿಷಯ ತಿಳಿಯುತ್ತದೆ. ನಾಗವಲ್ಲಿ, ಪಾಣಿಗ್ರಹಣ, ಭೂಮ, ಮಧುಪರ್ಕ, ಮಂಗಲಾಕ್ಷತೆ ಮುಂತಾದವನ್ನು ಇಲ್ಲಿ ಹೆಸರಿಸ ಬಹುದು. ಭೂಮ ಮುಂತಾದ ವಿನೋದಗಳು ಕನ್ನಡಿಗರಿಗೂ ತೆಲುಗರಿಗೂ ತುಂಬ ಪ್ರಿಯವಾದಂಥವು. ಬ್ರಾಹ್ಮಣೇತರರಲ್ಲಿ ಬಳಕೆಯಲ್ಲಿರುವ ಕೆಲವು ಆಚಾರಗಳನ್ನು ಇವರಿಬ್ಬರೂ ವರ್ಣಿಸಿದ್ದಾರೆ. ಅಯಿರಾಣಿ ಎಂಬ ಸಂಪ್ರದಾಯ ಇಂಥವುಗಳಲ್ಲಿ ಒಂದು. ಮಡಕೆಗಳನ್ನು ಪೂಜಿಸುವ ಈ ಸಂಪ್ರದಾಯ ಕರಗ ಸಂಪ್ರದಾಯವನ್ನು ನೆನಪಿಗೆ ತರುತ್ತದೆ. ಮಳೆಗಾಗಿ ಮಡಕೆಗಳನ್ನು ಪೂಜಿಸುವ ಪದ್ಧತಿ ನಮ್ಮ ದೇಶದ ಹಲವು ಪ್ರದೇಶಗಳಲ್ಲಿದೆ. ಕೃಷಿಕ ಸಮಾಜದ ಈ ಅವೈದಿಕ ಸಂಪ್ರದಾಯವನ್ನು ಮದುವೆಯ ಸಂದರ್ಭಗಳಲ್ಲಿ ಆಚರಿಸುತ್ತಿದ್ದುದನ್ನು ಕೀರ್ತನಕಾರರು ಗಮನಿಸಿದ್ದರು.

ಮದುವೆಯ ಬಗೆಗಳನ್ನು ಉಲ್ಲೇಖಿಸುವಾಗ ಈ ಇಬ್ಬರು ಕೀರ್ತನಕಾರರು ಸಮ ಕಾಲೀನ ಸಮಾಜವನ್ನು ಎಷ್ಟರಮಟ್ಟಿಗೆ ಪ್ರತಿಬಿಂಬಿಸಿದರೆಂಬುದನ್ನು ಪರಿಶೀಲಿಸಬಹುದು. ಇಬ್ಬರ ಇಷ್ಟದೈವವೂ ವಿಷ್ಣುವೇ ಆದುದರಿಂದ ಬಹುಪತ್ನೀತ್ವದ ಉಲ್ಲೇಖಗಳು ಬರುವುದು ಸಹಜ. ಪುರಂದರದಾಸರು ಕೆಲವು ಕೀರ್ತನೆಗಳಲ್ಲಾದರೂ ಕೃಷ್ಣನ ಹೆಸರಿನಲ್ಲಿ ತಮ್ಮ ಸಮಕಾಲೀನನೂ ಕನ್ನಡರಾಜ್ಯ ರಮಾರಮಣನೂ ಆಗಿದ್ದ ಶ್ರೀಕೃಷ್ಣದೇವರಾಯ ನನ್ನು ಸೂಚಿಸಿದಂತಿದೆ. ಕೃಷ್ಣದೇವರಾಯನ ಬಹುಪತ್ನೀತ್ವದ ಕಥೆಗಳು ಪ್ರಚಾರದಲ್ಲಿವೆ. "ಇಬ್ಬರ್ಹೆಂಡಿರ ಸುಖವ ಕಂಡೆನಯ್ಯ, ಅಬ್ಬಬ್ಬ ಎಂದಿಗೂ ಸಾಕು ಸಾಕಯ್ಯ'' (ಉ. ಪ್ರ., ಭಾಗ 5, ಪು. 10) ಮುಂತಾದ ಉಲ್ಲೇಖಗಳು ಕವಿಯ ಕಾಲದ ರಾಜನನ್ನೋ ಅಥವಾ ಹತ್ತಿರದ ಸ್ನೇಹಿತರನ್ನೋ ಪ್ರತಿನಿಧಿಸುವಂತಿವೆ. ಅನ್ನಮಾಚಾರ್ಯರ ಇಷ್ಟದೈವವಾದ

ವೇಂಕಟೇಶ್ವರನಿಗೆ ಪದ್ಮಾವತೀದೇವಿ ಮತ್ತು ಬೀಬಿನಾಂಚಾರಿ ಎಂಬ ಇಬ್ಬರು ಹೆಂಡತಿಯರು. ಆಚಾರ್ಯರಿಗೂ ಇಬ್ಬರು ಹೆಂಡತಿಯರು. ಇದರ ಪ್ರಭಾವದಿಂದ ಸವತಿತನದ ಹಲವು ಕೀರ್ತನೆಗಳು ಆಚಾರ್ಯರಿಂದ ಮೂಡಿಬಂದುವು.

ಪ್ರಾದೇಶಿಕ ಸಂಸ್ಕೃತಿಯ ವೈಶಿಷ್ಟ್ಯಗಳು ಸಾಹಿತ್ಯ ಕೃತಿಗಳಲ್ಲಿ ಹೇಗೆ ಸ್ಥಾನ ಪಡೆಯುತ್ತವೆ ಎಂಬುದಕ್ಕೆ 'ಮೇನರಿಕಂ' ಉಲ್ಲೇಖಗಳೇ ಉದಾಹರಣೆಗಳಾಗಿವೆ. ಸೋದರಮಾವನ ಅಥವಾ ಸೋದರತ್ತೆಯ ಮಕ್ಕಳನ್ನು ಮದುವೆಯಾಗುವ ಈ ಸಂಪ್ರದಾಯಕ್ಕೆ ಆಂಧ್ರದಲ್ಲಿ ಇಂದಿಗೂ ಹೆಚ್ಚಿನ ಬೆಲೆಯಿದೆ. ಕರ್ನಾಟಕದಲ್ಲೂ ಇದು ಅಸ್ತಿತ್ವದಲ್ಲಿದ್ದರೂ ತೆಲುಗರಿಗಾದಂತೆ ಅನಿವಾರ್ಯ ಸಂಗತಿ ಏನಲ್ಲ. ಈ ಹಿನ್ನೆಲೆಯಲ್ಲಿ ಅಲಮೇಲುಮಂಗೆಯನ್ನು ಕೂಡ ಆಚಾರ್ಯರು ವೇಂಕಟೇಶ್ವರನ ಮಾವನ ಮಗಳಾಗಿ ಮಾರ್ಪಡಿಸಿದ್ದಾರೆ (ಆಧ್ಯಾ. ಸಂ., 1, ಪು. 83). ಶೌರ್ಯವನ್ನು ಮೆರೆದು ತರುಣಿಯ ರನ್ನು ಮದುವೆಯಾಗುವ ರಾಜಕುಮಾರರ ಕಥೆಗಳು ನಮ್ಮಲ್ಲಿ ಹೇರಳವಾಗಿವೆ. ಆದರೆ ಸೋದರಮಾವನ ಮಗಳಿಗಾಗಿ ಹೋಗಿ ವೀರತ್ವತೋರಿಸಿ ಮಾಯದ ಎತ್ತನ್ನು ಗೆದ್ದು ಬಂದ ತಿರುವೇಂಕಟಗಿರಿಯಯ್ಯನನ್ನು ಆಚಾರ್ಯರು ವರ್ಣಿಸಿರುವುದು (ಆಧ್ಯಾ. ಸಂ., 1, ಪು. 77) ತೆಲುಗರ ಸಂಸ್ಕೃತಿಯ ಸಂಕೇತವೆನ್ನಬಹುದು. ಇದೇ ರೀತಿ ನಾದಿನಿ ಜೊತೆ ಸರಸವಾಡುವ ಪ್ರಸಂಗಗಳನ್ನು ಕೂಡ ವರ್ಣಿಸಿರುವುದು ಮೇನರಿಕಂ ಸಂಪ್ರದಾಯದ ಮುಂದುವರಿಕೆ ಎಂದು ಹೇಳಬಹುದು.

ಮದುವೆಯಲ್ಲಿ ವಿವಿಧ ರೀತಿಯ ಶುಲ್ಕಗಳನ್ನು ನೀಡುವ ಪದ್ಧತಿಯನ್ನು ಕೀರ್ತನೆ ಗಳಲ್ಲೂ ಉಲ್ಲೇಖಿಸಲಾಗಿದೆ. ಇದು ಪ್ರಾಂತ್ಯಭೇದವಿಲ್ಲದೆ ಭಾರತಾದ್ಯಂತ ಇರುವಂಥದು, ಆದಿವಾಸಿಗಳಿಂದ ಹಿಡಿದು ಅತಿ ನಾಗರಿಕರವರೆಗೆ ಯಾರನ್ನೂ ಈ ಶುಲ್ಕದ ಪಿಡುಗು ಬಿಟ್ಟಿಲ್ಲ. ಅನ್ನಮಾಚಾರ್ಯರು ವಿವಿಧ ರೀತಿಯ ಶುಲ್ಕಗಳನ್ನು ಸುಮ್ಮನೆ ಹೆಸರಿಸಿದರೆ, ಪುರಂದರದಾಸರು ಇನ್ನೂ ಒಂದು ಹೆಜ್ಜೆ ಮುಂದೆಹೋಗಿ "ಇವನೇನು ಇನ್ನೂರು ವರಹ ಗಳ ಕೊಟ್ಟು ಮದುವೆಯಾದನೇನೆ" (4-55) ಎಂದಿದ್ದಾರೆ. ವಿಜಯನಗರ ಕಾಲದಲ್ಲಿ ಇನ್ನೂರು ವರಹಕೊಟ್ಟು ಮದುವೆಯಾಗುವುದು ಹೆಮ್ಮೆಯ ವಿಷಯವಾಗಿತ್ತೆಂಬುದನ್ನು ಇದು ಸೂಚಿಸುತ್ತದೆ. ಇಂಥ ಅದ್ದೂರಿ ಮದುವೆಗಳಿಂದಾಗುವ ಸಂಕಷ್ಟಗಳನ್ನೂ, ಸಾಲ ಮಾಡಿ ಮಗನ ಮದುವೆಯಲ್ಲಿ ವೈಭವದಿಂದ ಮೆರೆಯುವಂಥ ಸಂದರ್ಭಗಳನ್ನೂ ದಾಸರು ಸೂಚಿಸಿದ್ದಾರೆ.

ಕುಟುಂಬದ ವಿಷಯದಲ್ಲೂ ಕೀರ್ತನೆಗಳು ಸಂಸ್ಕೃತಿಯ ಕೆಲವು ಅಂಶಗಳನ್ನು ಪ್ರತಿ ಬಿಂಬಿಸುತ್ತವೆ. ಭಾರತದಲ್ಲಿ ಇಂದಿಗೂ ಅಳಿದು ಹೋಗದ ಕುಟುಂಬದ ಮಾದರಿಯೆಂದರೆ ಅವಿಭಕ್ತಕುಟುಂಬ. ನಾಗರಿಕತೆಯ ಪ್ರಭಾವದಿಂದ ಕುಟುಂಬ ಎಂಬ ಸಂಸ್ಥೆಯಲ್ಲಿ ಒಡಕು ಗಳುಂಟಾಗುತ್ತಿದ್ದರೂ ಅವಿಭಕ್ತಕುಟುಂಬದ ಮೂಲಭೂತತತ್ತ್ವಗಳು ಯಾವುದೋ ಒಂದು ರೀತಿಯಲ್ಲಿ ಮುಂದುವರಿಯುತ್ತಲೇ ಇವೆ. ಈ ಹಿನ್ನೆಲೆಯಲ್ಲಿ ರೂಪುಗೊಂಡ ಸಾಂಸಾರಿಕ ಚಿತ್ರಗಳನ್ನು ಕಾವ್ಯಗಳಲ್ಲಿ ನೋಡಬಹುದು. ಕುಟುಂಬದಲ್ಲಿ ತಾಯಿಯಾಗಿ,

ಅತ್ತೆಯಾಗಿ, ಹೆಂಡತಿಯಾಗಿ, ಮಗಳಾಗಿ, ಸೊಸೆಯಾಗಿ ಹೆಣ್ಣು ನಿರ್ವಹಿಸುವ ಪಾತ್ರವನ್ನು ಇಬ್ಬರು ಕೀರ್ತನಕಾರರೂ ಚಿತ್ರಿಸಿದ್ದಾರೆ.

ಪುರಂದರದಾಸರ ಕೀರ್ತನೆಗಳಲ್ಲಿ ಹೆಣ್ಣಿನ ವೈವಿಧ್ಯಮಯ ಚಿತ್ರ ಕಂಡುಬರುತ್ತದೆ. ಸತಿಗೆ ಸ್ವಾತಂತ್ರ್ಯ ಕೊಡಬಾರದೆಂಬುದು ಅವರ ಕೆಲವು ಕೀರ್ತನೆಗಳ ತಿರುಳು. ಇದಕ್ಕೆ ನಾವು ಪುರಂದರದಾಸರಲ್ಲಿ ತಪ್ಪುಅಭಿಪ್ರಾಯವಿದೆ ಎನ್ನಲಾಗುವುದಿಲ್ಲ. 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಅಭಿಪ್ರಾಯವಿದ್ದ ಸಮಾಜದಲ್ಲಿ ಕೆಲವು ಶತಮಾನಗಳ ಹಿಂದೆ ಸ್ತ್ರೀಸ್ವಾತಂತ್ರ್ಯವನ್ನು ಕುರಿತು ಮಾತನಾಡುವುದಂತು ಅಸಾಧ್ಯವೇ ಸರಿ. ಆದರೆ ಸಮಾಜದ ನಾನಾ ಮುಖಗಳನ್ನು ಪ್ರತಿಬಿಂಬಿಸಿರುವ ಪುರಂದರದಾಸರು ಹೆಣ್ಣನ್ನು ಕಂಡು ಮರುಕಗೊಂಡಿರುವ ಸಂದರ್ಭಗಳೂ ಇವೆ. ''ಮುಪ್ಪಿನ ಗಂಡನ ಒಲ್ಲೆನೆ ತಪ್ಪದೆ ಪಡಿಪಾಟ ಪಡಲಾರೆನವ್ವ'' (6-109) ಎಂದು ಹೇಳುವ ಹೆಣ್ಣನ್ನೂ ಚಿತ್ರಿಸಿದ್ದಾರೆ.

ಭಕ್ತಿಭಾವದ ಪ್ರದರ್ಶನಕ್ಕಾಗಿ ಕವಿಗಳು ವಾತ್ಸಲ್ಯಭಕ್ತಿಯನ್ನೆ ಹೆಚ್ಚಾಗಿ ಆರಿಸಿಕೊಂಡಿರುವುದನ್ನು ಕಾಣುತ್ತೇವೆ. ಭಾರತೀಯ ಸಂಪ್ರದಾಯದಲ್ಲಿ ತಾಯಿ ಮತ್ತು ಮಗುವಿನ ಆತ್ಮೀಯ ಸಂಬಂಧಕ್ಕೆ ಬೆಲೆ ನಿರ್ಣಯಿಸಲಾಗದು. ಭಗವಂತ ಮತ್ತು ಭಕ್ತನ ಸಂಬಂಧವನ್ನು ತಾಯಿ ಮಗುವಿನ ಸಂಬಂಧಕ್ಕೆ ಹೋಲಿಸುತ್ತಾರೆ. ಕೆಲವು ಕಡೆ ಭಕ್ತನೇ ತಾಯಿಯಾಗಿ ಭಗವಂತನನ್ನು ಮಗುವಿನಂತೆ ನಿರೂಪಿಸುತ್ತಾನೆ. ''ಬೂಚಿ ಬಂದಿದೆ ರಂಗ ಬೂಚಿ ಬಂದಿದೆ'' ಎಂದು ಕೃಷ್ಣನನ್ನು ಹೆದರಿಸುವ ತಾಯಿ ನಮಗೆಲ್ಲರಿಗೂ ಪರಿಚಿತವಾಗಿರುವ ತಾಯಿಯಂತೆಯೇ ಕಾಣುತ್ತಾಳೆ. 'ಬೂಚಿ', 'ಗುಮ್ಮ' ಎಂದು ಹೇಳಿ ಮಕ್ಕಳನ್ನು ಸಂತೈಸುವ ಪದಗಳು ಕನ್ನಡಿಗರಿಗೂ ತೆಲುಗರಿಗೂ ಸಮಾನವಾಗಿವೆ. ಈ ಪದಗಳಿಗೆ ಪ್ರತ್ಯೇಕ ಅರ್ಥ ಇಲ್ಲದಿದ್ದರೂ ಮಕ್ಕಳಿಗೆ ಹೆದರಿಕೆಯುಂಟು ಮಾಡುವ ಕಲ್ಪಿತರೂಪಗಳಿಗೆ ಇಟ್ಟ ಹೆಸರುಗಳಾಗಿವೆ.

ಅಂತರಂಗದ ಆವಿಷ್ಕಾರದೊಂದಿಗೆ ಲೋಕಪದ್ಧತಿಗಳ ಚಿತ್ರಣವನ್ನೂ ಲಕ್ಷ್ಯದಲ್ಲಿಟ್ಟುಕೊಂಡವರಾದುದರಿಂದ ಹೆಣ್ಣಿನ ಅನೇಕ ರೂಪಗಳನ್ನು ಪುರಂದರದಾಸರು ನೀಡಿದರು. ಅನ್ನಮಾಚಾರ್ಯರು ವೇಂಕಟೇಶ್ವರ ಮತ್ತು ಅಲಮೇಲುಮಂಗೆಯ ಸಂಬಂಧವನ್ನೇ ಬಹಳಮಟ್ಟಿಗೆ ನಿರೂಪಿಸಿದವರಾದುದರಿಂದ ದಾಂಪತ್ಯವನ್ನು ಕುರಿತಂತೆ ಹಲವು ಭಾವಗಳನ್ನು ವ್ಯಕ್ತೀಕರಿಸಿದರು.

ಯಾವುದೇ ಸಾಹಿತ್ಯ ಪ್ರಕಾರವೂ ಸಂಸ್ಕೃತಿಯ ಅಂಶಗಳಿಂದ ಮುಕ್ತವಾಗಿಲ್ಲ. ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾಪೂರ್ವಕವಾಗಿ ಕವಿ ಸಮಾಜವನ್ನು ಕುರಿತ ಅಸಂಖ್ಯಾತ ವಿಷಯಗಳನ್ನು ತನ್ನ ಕೃತಿಯಲ್ಲಿ ಸೇರಿಸಿಕೊಳ್ಳುತ್ತಾನೆ. ಬಂಜೆಗೆ ಸಮಾಜದಲ್ಲಿ ಒಳ್ಳೆಯ ಸ್ಥಾನವಿಲ್ಲ. ಬಂಜೆತನವನ್ನು ಶಾಪವೆಂದು ಭಾವಿಸಿ ಕಂಡ ದೇವರಿಗೆಲ್ಲ ಎರಗುವುದು ನಮ್ಮ ಜನರ ವಾಡಿಕೆ. ''ಹುಟ್ಟುಬಂಜೆಯರಿಗೆ ಮಕ್ಕಳನ್ನು ನೀಡುವ ಗೋವಿಂದ'' (ಅನ್ನ. ಸಂ., 2, ಪು. 1) ಎಂಬ ನಂಬಿಕೆ ಈ ಹಿನ್ನೆಲೆಯಲ್ಲೇ ರೂಪುಗೊಂಡಿದೆ. ಹೆತ್ತತಾಯಿಯನ್ನು ಕೂಡ ಬಂಜೆಯೆಂದು ಹೇಳುವಷ್ಟು ನೀಚರೂ

ಇರುತ್ತಾರೆಂದು (16-1-58) ಹೇಳುವಾಗಲೂ ಈ ನಂಬಿಕೆಯೇ ಆಚಾರ್ಯರ ಮನಸ್ಸಿನಲ್ಲಿತ್ತೆಂದು ಕಾಣುತ್ತದೆ. ಮಕ್ಕಳು ಏನು ಮಾಡಿದರೂ ತಂದೆತಾಯಿ ಸಹಿಸಿಕೊಂಡು ಮುದ್ದುಮಾಡುತ್ತಾರೆಂಬ (8-97) ಅನ್ನಮಯ್ಯನವರ ಮಾತು ಭಾರತೀಯ ಸಮಾಜದಲ್ಲಿ ಮಕ್ಕಳಿಗೆ ಕುಟುಂಬದಲ್ಲಿ ಯಾವರೀತಿಯ ಪೋಷಣೆ ಸಿಕ್ಕುತ್ತದೆಂಬುದನ್ನು ನಿರೂಪಿಸುತ್ತದೆ.

ಬಾಂಧವ್ಯ ಸಂಸ್ಕೃತಿಯ ಸ್ವರೂಪವನ್ನು ತಿಳಿಸುವ ಇನ್ನೊಂದು ಮಾಧ್ಯಮ. ಕುಟುಂಬದಲ್ಲಿ ಬೇರೆ ಬೇರೆ ಬಾಂಧವ್ಯವಿರುವ ಜನರು ಒಟ್ಟುಗೂಡಿರುತ್ತಾರೆ. ಸಾಮಾಜಿಕ ಮಾನವಶಾಸ್ತ್ರದಲ್ಲಿ ಬಾಂಧವ್ಯ ಪರಿಭಾಷೆಗೆ ತುಂಬ ಪ್ರಾಧಾನ್ಯವಿದೆ. ಕೀರ್ತನೆಗಳಲ್ಲಿ ಸಂದರ್ಭವಶದಿಂದ ವಿವಿಧ ಬಾಂಧವ್ಯಗಳ ಹೆಸರುಗಳು ಬರುತ್ತವೆ. ಇದರ ಜೊತೆಯಲ್ಲೇ ಬೇರೆ ಬೇರೆ ಜನರ ಸ್ವಭಾವಗಳನ್ನು ಕೂಡ ಸೂಕ್ಷ್ಮವಾಗಿ ತಿಳಿಸಿರುವುದನ್ನು ನೋಡಬಹುದು. ಸಲಿಂಗ ಸಹೋದರರ ಮತ್ತು ವಿಲಿಂಗ ಸಹೋದರರ ಮಕ್ಕಳನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವುದು, ಅತ್ತೆ, ಸೊಸೆ, ಚಿಕ್ಕಪ್ಪ, ದೊಡ್ಡಪ್ಪ, ಸೋದರಮಾವ ಮುಂತಾದ ಹೆಸರುಗಳ ಬಳಕೆ ಸಾಂಸ್ಕೃತಿಕ ಅಧ್ಯಯನದ ಭಾಗವಾಗಿರುತ್ತವೆ.

ಅನ್ನಮಾಚಾರ್ಯರು ತಮ್ಮ ಕೀರ್ತನ ಲೋಕವನ್ನು ಸೀಮಿತ ಮಾಡಿರುವುದರಿಂದ ಅವರಲ್ಲಿ ಬಾಂಧವ್ಯದ ಹೆಸರುಗಳು ಹೆಚ್ಚಾಗಿ ಕಾಣುವುದಿಲ್ಲ. ಪುರಂದರದಾಸರು ಲೋಕನೀತಿ, ಕೃಷ್ಣಲೀಲೆ ಮುಂತಾದವನ್ನು ಕೀರ್ತನೆಗಳಿಗೆ ವಸ್ತುವಾಗಿ ಸ್ವೀಕರಿಸಿರುವುದರಿಂದ ಅಧಿಕ ಸಂಖ್ಯೆಯಲ್ಲಿ ಬಾಂಧವ್ಯ ಸೂಚಕ ಪದಗಳನ್ನು ಬಳಸುವುದು ಸಾಧ್ಯವಾಯಿತು. "ಶಕ್ತನಾದರೆ ನೆಂಟರೆಲ್ಲ ಹಿತರು, ಅಶಕ್ತನಾದರೆ ಆಪ್ತಜನರೆ ವೈರಿಗಳು" (5-154) ಎಂಬ ಪುರಂದರದಾಸರ ಅಭಿಪ್ರಾಯ ಅನ್ನಮಾಚಾರ್ಯರಿಗೂ ಒಪ್ಪಿಗೆಯಾದುದೇ. ಈ ನೆಂಟರೆಲ್ಲಾ ಇಷ್ಟು ದಿನ ಎಲ್ಲಿದ್ದರೋ" (8-248) ಎಂಬ ಆಚಾರ್ಯರ ಮಾತಿನಲ್ಲೇ ನೆಂಟರ ಬಗೆಗಿನ ಅನುಮಾನ ವ್ಯಕ್ತವಾಗುತ್ತದೆ.

ವಿವಿಧ ಬಾಂಧವ್ಯಗಳ ಪೈಕಿ ಅತ್ತೆ ಸೊಸೆಯರನ್ನು ಕುರಿತು ಪ್ರತ್ಯೇಕವಾಗಿ ಹೇಳಬೇಕಾಗುತ್ತದೆ. "ಅತ್ತೆಯೆಂಬೋಳು ಬಲುಖೋಡಿ" (ಉ. ಪ್ರ., ಭಾ 4, ಪು.8) ಎಂದು ಪುರಂದರದಾಸರು ಲೋಕದ ಅಭಿಪ್ರಾಯವನ್ನೇ ಕೀರ್ತನೆಯಲ್ಲಿ ಅಡಗಿಸಿದ್ದಾರೆ. "ಅತ್ತೆ ಮಾವನ ಕೂಡ ಅತಿ ಮತ್ಸರವಮಾಡಿ ನೆತ್ತಿಗೆ ಮದ್ದನು ಊಡುವಳು" (5-106) ಎಂದು ಹೇಳುವಾಗಲೂ ದಾಸರು ಸಮಾಜದ ಸಾಮಾನ್ಯ ಅಭಿಪ್ರಾಯವನ್ನೇ ನಿರೂಪಿಸಿದ್ದಾರೆ. ಅತ್ತೆ, ಸೊಸೆ, ನಾದಿನಿ ಮುಂತಾದವರನ್ನು ಕುರಿತು ಅನ್ನಮಾಚಾರ್ಯರು ಕೂಡ ಬಹಳಮಟ್ಟಿಗೆ ಇವೇ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ "ಬಾರೆ ಸೊಸೆ, ರಚ್ಚೆಮಾಡುವ ಸೊಸೆ, ಹೋಗೇ ಹೋಗೇ ಅತ್ತಯ್ಯ" (ಅನ್ನ. ಸಂ., ಭಾಗ 2, ಪು. 44) ಎಂಬ ಅರ್ಥದ ಜನಪದ ಗೀತೆಯನ್ನು ಒಂದು ಕೀರ್ತನೆಯಲ್ಲಿ ಅನ್ನಮಯ್ಯ ಅಳವಡಿಸಿಕೊಂಡಿದ್ದಾರೆ. ಸಾಮಾನ್ಯ ಜನಾಭಿಪ್ರಾಯಗಳನ್ನು ಮಾತ್ರವಲ್ಲದೆ

ಜನಪದ ಸಾಹಿತ್ಯವನ್ನು ಕೂಡ ಇವರಿಬ್ಬರೂ ಎಷ್ಟರಮಟ್ಟಿಗೆ ಉಪಯೋಗಿಸಿ ಕೊಂಡಿದ್ದಾರೆಂಬುದು ಈ ಕೆಲವು ಉದಾಹರಣೆಗಳಿಂದ ವ್ಯಕ್ತವಾಗುವುದು.

ಸಾಮಾಜಿಕ ಸಂಸ್ಥೆಗಳಲ್ಲೇ ಜಾತಿಪದ್ಧತಿ ಸಮಾಜದ ಅನಿವಾರ್ಯ ಅಂಗವಾಗಿ ಮುಂದುವರಿಯುತ್ತಿದೆ. ಕನ್ನಡನಾಡಿನಲ್ಲಿ ವಚನಕಾರರಿಂದ ಜಾತ್ಯತೀತ ಸಮಾಜದ ಬಗೆಗಿನ ಕ್ರಾಂತಿಬೀಜಗಳು ಬಿತ್ತಲ್ಪಟ್ಟವು. ಅದಕ್ಕಿಂತ ಹಿಂದೆ ತಮಿಳುನಾಡಿನಲ್ಲಿ ನಾಯನ್ಮಾರರು ಮತ್ತು ಆಳ್ವಾರರು ಜಾತಿಭೇದಗಳನ್ನು ತಿರಸ್ಕರಿಸಿ, ಎಲ್ಲ ಜಾತಿಗಳವ ರನ್ನೂ ತಮ್ಮ ತಮ್ಮ ಧರ್ಮಗಳಿಗೆ ಸೇರಿಸಿಕೊಂಡರು. ರಾಮಾನುಜಾಚಾರ್ಯರು ತಮಿಳುನಾಡಿನಲ್ಲಿ ಮಾತ್ರವಲ್ಲದೆ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲೂ ಇಂಥ ಭಾವಗಳ ವ್ಯಾಪ್ತಿಗೆ ನೆರವಾದರು. ''ಕುಲದ ಮೇಲೆ ಹೋಗಬೇಡ ಮನುಜ, ಕುಲವಿಲ್ಲ ಜ್ಞಾನಿಗಳಿಗೆ'' (ಉ.ಪ್ರ., ಭಾಗ 3, ಪು. 62) ಎಂಬ ಪುರಂದರದಾಸರ ಮಾತು ಈ ಧಾರ್ಮಿಕ ಹಿನ್ನೆಲೆಯಿಂದ ಮೂಡಿಬಂದಂಥದೇ. ಧರ್ಮಶ್ರದ್ಧೆ ಇಲ್ಲದ ಬಾಹ್ಯವೇಷಧಾರಿ ಗಳನ್ನು ಇಬ್ಬರು ಕೀರ್ತನಕಾರರೂ ಟೀಕಿಸಿದ್ದಾರೆ. ''ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿ ಇಲ್ಲ'' (2-46) ಎಂದು ದಾಸರು ಹೇಳುತ್ತಾರೆ. ಕೆಟ್ಟ ವೃತ್ತಿಗೆ ತೊಡಗಿ ಘನವಂಶವನ್ನು ಹಾಳುಮಾಡುವ ಬ್ರಾಹ್ಮಣರನ್ನು ಅನ್ನಮಯ್ಯ ಟೀಕಿಸಿದ್ದಾರೆ (ಅಧ್ಯಾ, ಸಂ., ಭಾಗ 1. ಪು. 139). ಈ ಇಬ್ಬರು ಕೀರ್ತನಕಾರರೂ ತಮ್ಮ ಕಾಲದಲ್ಲಿ ಆಯಾ ವೃತ್ತಿಗಳಿಗಿದ್ದ ಸ್ಥಾನಮಾನಗಳನ್ನು ಸೂಚಿಸುವುದರ ಜೊತೆಗೆ,. ಭಕ್ತಿ ವೈರಾಗ್ಯಾದಿ ಭಾವಗಳನ್ನು ಪ್ರತಿಬಿಂಬಿಸಲು ಕೂಡ ವಿವಿಧ ವೃತ್ತಿಗಳ ಹೆಸರುಗಳನ್ನು ಜಾಣ್ಮೆಯಿಂದ ಬಳಸಿಕೊಂಡಿದ್ದಾರೆ.

ಒಟ್ಟಿನಲ್ಲಿ ನಮ್ಮ ದೇಶದ ಕೆಲವು ಧಾರ್ಮಿಕ ಚಳುವಳಿಗಳು ಭಕ್ತಿಮಾರ್ಗಾನುಸಾರ ಜಾತ್ಯತೀತ ಸಮಾಜವನ್ನು ಬಯಸಿದ ಸಂದರ್ಭಗಳನ್ನು ಇಬ್ಬರು ಕೀರ್ತನಕಾರರೂ ಪ್ರತಿಬಿಂಬಿಸಿರುವುದನ್ನು ನೋಡುತ್ತೇವೆ. ಈ ವಿಷಯದಲ್ಲಿ ಪುರಂದರದಾಸರ ಮೇಲೆ ವಚನಕಾರರ ಪ್ರಭಾವವಿತ್ತೆಂದು ಕಾಣುತ್ತದೆ. ಅನ್ನಮಾಚಾರ್ಯರು ಕೆಲವು ಕಡೆ ಈ ತರಹದ ಭಾವಗಳನ್ನು ವ್ಯಕ್ತಮಾಡಲು ರಾಮಾನುಜರ ಬೋಧೆಗಳು, ಆಳ್ವಾರರ ಪರಂಪರೆ ಕಾರಣವಾಗಿರಬಹುದು. ''ಆವಕುಲವಾದರೇನು ಭಾವದ ವಿಜ್ಞಾನ ತಿಳಿದವನಿಗೆ'' (5-86) ಎಂದು ಪುರಂದರದಾಸರು ಹೇಳಿದರೆ, ''ದುಂಬಿಯ ಕೈಗೆ ಬಿದ್ದ ಕೀಟಗಳು ದುಂಬಿಗಳಾಗುವಂತೆ, ಶ್ರೀಕಾಂತನ ಪಾದಸೇವಕರಾಗುವವರು ಯಾವ ಕುಲಜರಾದರೂ ಹೆಚ್ಚಾಗುವುದು ಆಚ್ಚರಿಯೇ'' (ಅಧ್ಯಾ. ಸಂ., 1, ಪು. 28) ಎಂದು ಅನ್ನಮಾಚಾರ್ಯರು ಬರೆದಿದ್ದಾರೆ. ಜಾತ್ಯತೀತ ಅಭಿಪ್ರಾಯಗಳಿಗೆ ಲಕ್ಷಣವೆಂಬಂತೆ ಅನ್ನಮಾಚಾರ್ಯರು ಹೀಗೆ ಹೇಳಿದ್ದಾರೆ :

> ವಿಜಾತಿಗಳೆಲ್ಲ ವೃಥಾವೃಥಾ
> ಅಜಾಮಿಲಾದಿಗಳಿಗೆ ಯಾವ ಜಾತಿ ಇದೆ
> ಜಾತಿಭೇದಗಳು ಶರೀರ ಗುಣಗಳು

ಜಾತಿ ಶರೀರದೊಡನೆ ಕೆಡುವುದು
ಆತ್ಮ ಪರಿಶುದ್ಧ ಎಂದೆಂದಿಗೂ ಅದು ನಿರ್ದೋಷಿ ಅನಾದಿ
ಈ ಕಡೆ ಹರಿ ವಿಜ್ಞಾನದ ದಾಸ್ಯವೊಂದೇ ಸುಜಾತಿ (ಅಧ್ಯಾ. ಸಂ., 2, ಪು. 28).

ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ ಉಲ್ಲೇಖಗಳನ್ನು ಕೊಡುವ ಮೂಲಕ ಕೀರ್ತನ ಕಾರರು ತಮ್ಮ ಕಾಲದ ಹಣದ ವ್ಯವಹಾರಗಳನ್ನು ಸೂಚಿಸಿದ್ದಾರೆ. ಇದಕ್ಕೆ ಸಂಬಂಧಿಸಿದ ಕಟ್ಟಳೆ, ಕಂದಾಯ, ಸುಂಕ, ಸಾಲ, ಬಡ್ಡಿ, ಸಂಬಳ, ಲಂಚ ಮುಂತಾದವನ್ನು ದಾಸರು ಪ್ರಸ್ತಾವಿಸಿದ್ದಾರೆ. ಅನ್ನಮಾಚಾರ್ಯರೂ ತಮ್ಮ ಕಾಲದಲ್ಲಿ ಚಲಾವಣೆಯಲ್ಲಿದ್ದ ರೂಕ, ರುವ್ವ, ಮಾಡ ಮುಂತಾದ ನಾಣ್ಯಗಳ ವಿಚಾರವನ್ನೂ ಸುಂಕ, ಲಂಚ ಇತ್ಯಾದಿ ವಿಚಾರ ಗಳನ್ನೂ ಹೇಳಿದ್ದಾರೆ. ಆರ್ಥಿಕ ವ್ಯವಸ್ಥೆಯ ವಿವಿಧ ಸ್ತರಗಳನ್ನು ನಿರೂಪಿಸುವಲ್ಲಿ ಇವರಿಬ್ಬರೂ ಸಾಮಾನ್ಯ ಸಂಸಾರಿಯೊಬ್ಬನ ದೃಷ್ಟಿಯಿಂದ ನೋಡಿರುವುದನ್ನು ಗಮನಿಸ ಬಹುದು.

ರಾಜಕೀಯ ವ್ಯವಸ್ಥೆಯನ್ನು ಇವರಿಬ್ಬರೂ ತಮ್ಮ ಕೀರ್ತನೆಗಳಲ್ಲಿ ನಿರೂಪಿಸಿದ್ದಾರೆ. ಪುರಂದರದಾಸರು ವಿಜಯನಗರದ ಅತ್ಯುನ್ನತ ಸ್ಥಿತಿಯನ್ನೂ ಪತನವನ್ನೂ ಕಂಡವರು. "ದೇಶಾಧಿಪತಿಗೆ ಬಂದ ಕುಹುಯೋಗವನು ನೂಕಿ ನೀ ಸಿಂಹಾಸನವೇರಿ ಮೆರೆದೆ ಜಗವರಿಯೆ" (1-6) ಎಂದು ವ್ಯಾಸರಾಯರ ಪ್ರಭಾವವನ್ನು ಹೇಳಿದ್ದಾರೆ. "ಆಳುವ ಅರಸರಿಗೆ ಕಾಂಚನದಾಸೆ ಮೇಲು ಮೇಲಾಯಿತಯ್ಯ"(5-136) ಎಂಬುದನ್ನೂ ಬಲ್ಲವರು. "ಯಾಕೆನ್ನನೀ ರಾಜ್ಯಕೆಳತಂದೆ ಹರಿಯೆ... ಮನ್ನಿಸುವ ದೊರೆಯಿಲ್ಲ" (ಹ. ಕೀ. ತ., ಪು. 163) ಎಂದು ರಾಜಕೀಯ ವ್ಯವಸ್ಥೆಯ ಅಸ್ತವ್ಯಸ್ತದಿಂದಾದ ಕಹಿ ಅನುಭವವನ್ನು ದಾಸರು ಹೇಳಿದ್ದಾರೆ. ಅನ್ನಮಾಚಾರ್ಯರಿಗೆ ರಾಜರಿಂದಾದ ತೊಂದರೆಗಳನ್ನು ಅವರ ಜೀವನ ಚರಿತ್ರೆ ಬರೆದ ಚಿನ್ನನ್ನ ಪ್ರಸ್ತಾವಿಸಿದ್ದಾನೆ. ಸರ್ವಕಾರಣಕರ್ತನಾದ ಭಗವಂತ ನಿಗಲ್ಲದೆ ಬೇರೊಬ್ಬರಿಗೆ ಹೇಳಿಕೊಳ್ಳಲಾಗದ ಪರಿಸ್ಥಿತಿಯಲ್ಲಿ ಅನ್ನಮಾಚಾರ್ಯರು "ಹೀನರಾದವರು ನಿನ್ನನ್ನು ಸೇವಿಸಿದರೆ ಘನವಾದ ಪದವಿಗಳಲ್ಲಿ ಅವರನ್ನಿಡುವಂತೆ" (ಅಧ್ಯಾ. ಸಂ., 1, ಪು, 241) ಎಂದಿದ್ದಾರೆ.

ವಸ್ತುಗಳ ರೂಪದಲ್ಲಿ ಸಂಸ್ಕೃತಿ ಹೇಗೆ ವ್ಯಕ್ತವಾಗುತ್ತದೆಂಬುದನ್ನು ಕೀರ್ತನೆಗಳ ಪರಿಶೀಲನೆಯ ಮೂಲಕ ತಿಳಿಯಲಾಯಿತು. ಕೀರ್ತನಕಾರರು ವರ್ಣಿಸಿರುವ ವೇಷ ಭೂಷಣಾಲಂಕಾರಗಳು ಕೃಷ್ಣ, ವೇಂಕಟೇಶ್ವರ ಮತ್ತು ಇತರ ದಿವ್ಯಪುರುಷರಿಗೆ ಸಂಬಂಧಿಸಿದಂಥವು. ಇದರ ನಡುವೆ ಸಾಮಾನ್ಯ ಜನರ ವೇಷಭೂಷಣಗಳನ್ನೂ ಇವರು ಮರೆತಿಲ್ಲ. "ಹರಿಕರುಣವೆಂಬಂಗಿ ಗುರುಕರುಣ ಮುಂಡಾಸು ಹರಿದಾಸರ ದಯವೆಂಬ ವಲ್ಲಿ" (2-133) ಎಂದಾಗ ವೇಷವೇ ಉಪಮೆಯಾಯಿತು. ಟೊಪ್ಪಿಗೆ, ಕಂಬಳಿ, ಶಾಲು, ಚೀಲ, ದಟ್ಟಿ ಮುಂತಾದವನ್ನು ವಿವಿಧ ಸಂದರ್ಭಗಳಲ್ಲಿ ಪುರಂದರದಾಸರು ಬಳಸಿದ್ದಾರೆ. ಕನ್ನಡಿಗರ ಮತ್ತು ತೆಲುಗರ ವೇಷಭೂಷಣಗಳಲ್ಲಿ ಅಷ್ಟೇನೂ ವ್ಯತ್ಯಾಸ ವಿಲ್ಲ ಎಂಬುದನ್ನು ಇವರಿಬ್ಬರ ಉಲ್ಲೇಖಗಳಿಂದ ತಿಳಿಯುತ್ತೇವೆ. ವೇಷಭೂಷಣಗಳ

ಹೆಸರುಗಳು ಕೂಡ ಒಂದೇ ಆಗಿದ್ದು ಭಾಷಾ ಸಂಸ್ಕೃತಿಗಳಲ್ಲಿರುವ ನಿಕಟ ಸಂಬಂಧವನ್ನು ತಿಳಿಸುತ್ತವೆ.

ಆಚಾರ್ಯರು ಮತ್ತು ದಾಸರು ಆಹಾರ ಪಾನೀಯಗಳ ಪಟ್ಟಿಗಳನ್ನೇ ಕೊಡುತ್ತಾರೆ. ಸಾಮಾನ್ಯ ಭೋಜನದಲ್ಲಿ ಬಳಸುವ ಪದಾರ್ಥಗಳನ್ನೂ ವಿಶೇಷ ಸಂದರ್ಭಗಳಲ್ಲಿ ಬಳಸುವ ಪದಾರ್ಥಗಳನ್ನೂ ಉಲ್ಲೇಖಿಸಿದ್ದಾರೆ. ಇವರಿಬ್ಬರಲ್ಲೂ ಆಹಾರ ಪದಾರ್ಥಗಳು ಆಧ್ಯಾತ್ಮಿಕ ಸಂಕೇತಗಳಾಗಿ ವಿಶೇಷಾರ್ಥಗಳನ್ನು ಪಡೆದಿವೆ. ಭವ ರೋಗಕ್ಕೆ ವೈದ್ಯನಾದ ಭಗವಂತನು ನಮಗೆ ಗೊತ್ತು ಮಾಡುವ ಪಥ್ಯವನ್ನು ಕುರಿತು ಇಬ್ಬರೂ ಬರೆದಿದ್ದಾರೆ.

ಉಪ್ಪಿನಕಾಯಿ, ಚಿತ್ರಾನ್ನ, ಅಪ್ಪಾಲು, ಅತಿರಸ, ದಧಿವಡೆ ಮುಂತಾದವು ದಕ್ಷಿಣ ಭಾರತೀಯರಿಗೆ ಪ್ರಿಯವಾದ ಆಹಾರ ಪದಾರ್ಥಗಳಾಗಿವೆ. ಖಾರಾಸಾರು, ಸಿಹಿಸಾರು ಮುಂತಾದವನ್ನೂ ದಾಸರು ಉಲ್ಲೇಖಿಸಿದ್ದಾರೆ. ವೇಂಕಟೇಶ್ವರನನ್ನು ಸ್ತುತಿಸುವಾಗ "ದೋಸೆ ಅನ್ನ ಮಾರಿಸುವ" (1-77) ಪ್ರಸಂಗ ತಂದಿರುವುದು ಅಂದಿನಿಂದ ಇಂದಿನ ವರೆಗೆ ನಡೆಯುತ್ತಿರುವ ಪ್ರಸಾದದ ಮಾರಾಟವನ್ನು ತಿಳಿಸುತ್ತದೆ. ಕಜ್ಜಾಯ. ಪಾನಕ ಮುಂತಾದವುಗಳ ವರ್ಣನೆ ದಕ್ಷಿಣಭಾರತದ ಹಬ್ಬ ಹರಿದಿನಗಳಲ್ಲಿ ತಯಾರಾಗುವ ಇಂಥ ವಿಶೇಷ ಪದಾರ್ಥಗಳನ್ನು ತಿಳಿಸಿಕೊಡುತ್ತದೆ. 'ಗತಿಯಿಲ್ಲದವನಿಗೆ ಕಂಡದ್ದೇ ಕೂಳು' ಎಂಬ ಸತ್ಯವನ್ನು ಬಲ್ಲವರಾಗಿದ್ದುದರಿಂದ ಬಡವರ ಆಹಾರವಾದ ಅಂಬಲಿಯಂಥದನ್ನೂ ಇಬ್ಬರು ಕೀರ್ತನಕಾರರೂ ಉಲ್ಲೇಖಿಸಿದ್ದಾರೆ. ಇಷ್ಟು ಸಣ್ಣ ಹೊಟ್ಟೆಗಾಗಿ ಎಷ್ಟೆಲ್ಲಾ ಪರದಾಡುತ್ತೇವೆಂಬುದನ್ನು ಆಚಾರ್ಯರು ನೆನೆಸಿಕೊಂಡರೆ ಎಲ್ಲರು ಮಾಡುವುದು ಹೊಟ್ಟೆ ಗಾಗಿ ಗೇಣು ಬಟ್ಟೆಗಾಗಿ ಎಂದು ಪುರಂದರದಾಸರು ಸತ್ಯವಾಕ್ಯವನ್ನು ನುಡಿದಿದ್ದಾರೆ.

ಈರುಳ್ಳಿ, ಬೆಳ್ಳುಳ್ಳಿ, ಮೂಲಂಗಿ ಮುಂತಾದವು ಬೇರೆ ದೇಶಗಳಿಂದ ಬಂದವೆಂಬ ಮತ್ತು ಕಟುವಾಸನೆ ಇರುವವೆಂಬ ಕಾರಣದಿಂದಲೊ ಏನೊ ಉನ್ನತ ವರ್ಗದ ಜನ ತಿನ್ನ ಬಾರದೆಂದು ನಿಷೇಧ ಹಾಕಲಾಗಿದೆ. ಹಬ್ಬ ಹರಿದಿನಗಳಲ್ಲಿ ಮತ್ತು ವಿಶೇಷ ದಿನಗಳಲ್ಲಿ ಇವುಗಳ ಮೇಲೆ ನಿಷೇಧವಿದೆ. 'ಉಳ್ಳಿ ತಿಂದ ಕೋಮಟಿ ಸುಮ್ಮನೆ ಇರುವಂತೆ' ಎಂಬ ಗಾದೆಯನ್ನು ಅನ್ನಮಯ್ಯ ಉಲ್ಲೇಖಿಸಿದ್ದಾರೆ. ಇಂಥ ನಿಷಿದ್ಧ ವಸ್ತುಗಳನ್ನು ತಿನ್ನ ಬಾರದೆಂಬ ಸೂಚನೆ ಪುರಂದರದಾಸರಲ್ಲೂ ಇದೆ. ಅವರ ಕಾಲಕ್ಕಾಗಲೇ ಇವೆಲ್ಲ ನಮ್ಮ ಆಹಾರ ಪದಾರ್ಥಗಳಲ್ಲಿ ಸೇರಿಬಿಟ್ಟಿದ್ದವೆಂಬುದು ಇದರಿಂದ ಗೊತ್ತಾಗುತ್ತದೆ.

ತಾಂಬೂಲ ಸೇವನೆ ರಸಿಕತೆಯ ಸಂಕೇತವಾಗಿ ನಮ್ಮಲ್ಲಿ ಬೆಳೆದು ಬಂದಿದೆ. ತಾಂಬೂಲದ ಅಭ್ಯಾಸ ಕೆಲವರಿಗಿದ್ದರೆ, ವಿವಿಧ ತರಹದ ತಾಂಬೂಲಗಳ ಸೇವನೆಯಿಂದ ರಸಿಕತೆಯನ್ನು ವ್ಯಕ್ತಪಡಿಸುವ ಹಂಬಲ ಕೆಲವರಿಗೆ. ಅಡಿಕೆ, ಏಲಕ್ಕಿ, ಜಾಯಿಕಾಯಿ, ಜಾಯಿಪತ್ರೆ, ಲವಂಗ, ಮೌಕ್ತಿಕದ ಸುಣ್ಣ ಮತ್ತು ಕರ್ಪೂರ ಬೆರೆಸಿದ ದಿವ್ಯ ತಾಂಬೂಲ ವನ್ನು ಪುರಂದರದಾಸರು ವರ್ಣಿಸಿದ್ದಾರೆ. ಇಂಥ ತಾಂಬೂಲವನ್ನು ವಿಜಯನಗರ ಕಾಲದಲ್ಲಿ ಸೇವಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ತಾಂಬೂಲರಸಪಾನ ಸೋಮ

ಪಾನಕ್ಕೆ ಸಮಾನವೆಂದು ಹೇಳಿ ಕಾಮಯಾಗವನ್ನು ವರ್ಣಿಸಿದ ಆಚಾರ್ಯರು ಈ ವಿಷಯ ದಲ್ಲಿ ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋದರೆನ್ನಬಹುದು.

ವಿವಿಧ ಭಾವಗಳನ್ನು ತಿಳಿಸಲು ಹಾಗೂ ಆಧ್ಯಾತ್ಮಿಕ ವಿಷಯಗಳಿಗೆ ಪ್ರತಿಮೆಗಳಾಗಿ ನಿತ್ಯ ಬಳಕೆಯ ಸಾಮಾನ್ಯವಸ್ತುಗಳನ್ನು ಕೀರ್ತನಕಾರರು ಬಳಸಿಕೊಂಡಿದ್ದಾರೆ. ಇವು ಗಳ ಪರಿಶೀಲನೆಯಿಂದ ಅಂದು ಬಳಕೆಯಲ್ಲಿದ್ದ ಭೌತಿಕ ವಸ್ತುಗಳ ಅರಿವಾಗುವುದರ ಜೊತೆಗೆ ಸಾಹಿತ್ಯಾಭಿವ್ಯಕ್ತಿಗೆ ಹೋಲಿಕೆಯ ವಸ್ತುಗಳಾಗಿ ಅವುಗಳ ಪಾತ್ರವೇನೆಂಬುದೂ ತಿಳಿಯುತ್ತದೆ. ಮಡಕೆ, ಬಿಂದಿಗೆ, ಗಂಗಾಳದಂಥವನ್ನು ಇಬ್ಬರೂ ಉಲ್ಲೇಖಿಸಿದ್ದಾರೆ. ಕೆಲವು ವಸ್ತುಗಳು ಕೇವಲ ಔಪಯೋಗಿಕ ಮೌಲ್ಯವುಳ್ಳವಾಗಿರುತ್ತವೆ ; ಕೆಲವು ಭೋಗ್ಯ ವಸ್ತುಗಳಾಗಿ ರಸಿಕತೆಯ ಚಿಹ್ನೆಯಾಗುತ್ತವೆ. ಹಾಸಿಗೆ, ಸುಪ್ಪತ್ತಿಗೆ, ಗಿಲುಕುಮಂಚ, ಚಪ್ಪರಮಂಚ, ಪಟ್ಟೆಮಂಚ ಮುಂತಾದವನ್ನು ದಾಸರು ಹೆಸರಿಸಿದ್ದಾರೆ. ಇವುಗಳಲ್ಲಿ ಕೆಲವು ಈಗಲೂ ಬಳಕೆಯಲ್ಲಿವೆ. ಅನ್ನಮಾಚಾರ್ಯರ ಕಾಲದಲ್ಲಿ ಸೊಳ್ಳೆಪರದೆಯ ಉಪಯೋಗವೂ ಇತ್ತೆಂದು ಕೆಲವು ಕೀರ್ತನೆಗಳಿಂದ ತಿಳಿದುಬರುತ್ತದೆ.

ಮಡಕೆ, ಚೆಂಬು, ಊಟದ ತಟ್ಟೆ, ಗೋಣಿಚೀಲದಂಥ ಸಾಮಾನ್ಯ ವಸ್ತುಗಳನ್ನೂ ಲೋಕನೀತಿಯ ವಿವೇಚನೆಗಾಗಿ ಅಥವಾ ವೈರಾಗ್ಯಭಾವಗಳ ಅಭಿವ್ಯಕ್ತಿಗಾಗಿ ಕೀರ್ತನ ಕಾರರು ಬಳಸಿಕೊಂಡಿದ್ದಾರೆ. ಬಾಯಿಗೆ ಬಂದಂತೆ ಮಾತನಾಡುವವರನ್ನು ಕುರಿತು ಹೇಳುತ್ತಾ 'ಕೆರೆಯನ್ನು ಮುಚ್ಚಲು ಮುಚ್ಚಳ ಇದೆಯೋ' (14-67) ಎಂದು ಅನ್ನಮಯ್ಯ ಕೇಳಿದ್ದಾರೆ.

ವಿಜಯನಗರ ಕಾಲದಲ್ಲಿ ಒಂದು ಬಗೆಯ ಗಡಿಯಾರದ ಬಳಕೆ ಇತ್ತೆಂದು ಪುರಂದರ ದಾಸರ ಮತ್ತು ಅನ್ನಮಾಚಾರ್ಯರ ಉಲ್ಲೇಖಗಳಿಂದ ತಿಳಿಯುತ್ತದೆ. ಗಡಿಯಾರ ಗಂಟೆ ಬಾರಿಸದಂತೆ ಬೂಸ ತುಂಬಿಸಿ ನಿದ್ರಿಸಿದ್ದರು. ಒಂದು ಕರು ಮನೆಗೆ ನುಗ್ಗಿ ಆ ಬೂಸ ಮೆಂದಾಗ ಗಂಟೆ ಬಾರಿಸಿದಂಥ ಪ್ರಸಂಗವನ್ನು ಆಚಾರ್ಯರು ಬರೆದಿದ್ದಾರೆ.

ಅಳತೆಯ ಸಾಧನಗಳನ್ನು ಕೂಡ ಕೀರ್ತನಕಾರರು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಿದ್ದಾರೆ. ದಾಸರ ಒಂದು ಉಲ್ಲೇಖದಂತೆ ವೇಂಕಟೇಶ್ವರನ ದೇವಸ್ಥಾನದಲ್ಲಿ ಇಪ್ಪತ್ತು ದುಡ್ಡಿಗೆ ಸೇರು ತೀರ್ಥ ಮಾರುತ್ತಿದ್ದರು. ಸಮಾಜ ಅಳತೆಯ ಸಾಧನವನ್ನು ನಿರ್ಮಿಸುತ್ತದೆ ಎಂಬುದನ್ನು 'ಊರು ಮಾಡಿದ ಕೊಳಗ' ಎಂಬ ಉಲ್ಲೇಖ ತಿಳಿಸುತ್ತದೆ. ಸೇರು ಆಂಧ್ರದಲ್ಲೂ ಅಳತೆಯ ಸಾಧನವಾಗಿದೆ. ಕರ್ನಾಟಕ ಮತ್ತು ಆಂಧ್ರಗಳಲ್ಲಿ ಒಂದೇ ಬಗೆಯ ಅಳತೆಯ ವ್ಯವಸ್ಥೆ ಇತ್ತು. ಮಣ, ಸೇರು, ಪಾವು ಮುಂತಾದವು ಮೊನ್ನೆ ಮೊನ್ನೆಯ ತನಕ ಬಳಕೆಯಲ್ಲಿದ್ದುವು.

ಆಟದ ಸಾಮಗ್ರಿಗಳು ಕೂಡ ಕರ್ನಾಟಕ ಮತ್ತು ಆಂಧ್ರಗಳಲ್ಲಿ ಬಹಳ ಮಟ್ಟಿಗೆ ಒಂದೇ ಆಗಿರುವುದನ್ನು ನೋಡುತ್ತೇವೆ. ಪಗಡೆ, ಚೆಂಡು, ಅಣ್ಣೆಕಲ್ಲು, ಗೋಲಿ, ಚಿಣ್ಣಿ ಕೋಲು, ಕಲ್ಲುಮಣೆ ಮುಂತಾದವನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಇಬ್ಬರು ಕೀರ್ತನ ಕಾರರೂ ಹೆಸರಿಸಿದ್ದಾರೆ.

ಆಯುಧ ಸಾಮಗ್ರಿಯ ಉಲ್ಲೇಖಗಳಲ್ಲಿ ಒಂದು ವಿಶೇಷವನ್ನು ಗಮನಿಸಬೇಕು. ಬಿಲ್ಲು ಬಾಣ, ಈಟಿ ಮುಂತಾದ ಅನೇಕ ತರಹದ ಆಯುಧಗಳ ಹೆಸರುಗಳನ್ನು ಇಬ್ಬರ ರಚನೆಗಳಲ್ಲೂ ಕಾಣಬಹುದು. ಆದರೆ ಅನ್ನಮಾಚಾರ್ಯರು ಪಂಚಾಯುಧಗಳ ವರ್ಣನೆಗೆ ಹೆಚ್ಚಿನ ಮಹತ್ತ್ವ ನೀಡಿದ್ದಾರೆ. ವೈಷ್ಣವ ಕವಿಗಳಿಗೆ ವಿಷ್ಣುವಿನ ಪಂಚಾಯುಧಗಳನ್ನು ವರ್ಣಿಸುವುದು ಕರ್ತವ್ಯ. ಅಂಬರೀಷನನ್ನು ಕಾಪಾಡಿದ ಚಕ್ರ, ಧ್ರುವನನ್ನು ಕಾಪಾಡಿದ ಪಾಂಚಜನ್ಯ, ಜರಾಸಂಧಾದಿಗಳನ್ನು ನಾಶಮಾಡಿದ ಗದೆ, ಪ್ರಹ್ಲಾದನನ್ನು ಕಾಪಾಡಿದ ಖಡ್ಗ, ರಾವಣನನ್ನು ಕೊಂದ ಶಾರ್ಙ್ಗ ಎಂದು ಹೇಳಿ(9-145) ಐದು ಆಯುಧಗಳನ್ನು ಆಚಾರ್ಯರು ಭಕ್ತಿಯಿಂದ ಸ್ಮರಿಸಿದ್ದಾರೆ.

ಚಿತ್ರಕಲೆ, ಶಿಲ್ಪ, ಗೃಹವಾಸ್ತು ಮುಂತಾದವುಗಳ ವಿಷಯದಲ್ಲೂ ಇಬ್ಬರ ಕೀರ್ತನಗಳನ್ನು ತುಲನಾತ್ಮಕವಾಗಿ ಪರಿಶೀಲಿಸಬಹುದು. ಕುಡ್ಯ ಚಿತ್ರಗಳು, ದೇವರಮೂರ್ತಿಶಿಲ್ಪ, ಉತ್ಸವ ವಿಗ್ರಹಗಳು, ಗೃಹವಾಸ್ತು ಕೆಲವು ಕೀರ್ತನೆಗಳಲ್ಲಿ ಸ್ಥಾನ ಪಡೆದಿವೆ. ಮನೆ ಎಂಬುದನ್ನು ತಾತ್ತ್ವಿಕ ಕಲ್ಪನೆಯ ಪ್ರತಿಮೆಯಾಗಿ ಇಬ್ಬರೂ ಬಳಸಿಕೊಂಡಿದ್ದಾರೆ. ಒಂಬತ್ತು ಬಾಗಿಲ ಮನೆ ತುಂಬಿದ ಸಂದಣಿಯಿರಲು ಕಂಬ ಮುರಿದು ಡಿಂಬ ಬಿದ್ದು ಅಂಬರಕೆ ಹಾರಿಹೋದ ಪ್ರಾಣವನ್ನು ಪುರಂದರದಾಸರು ವರ್ಣಿಸಿದ್ದಾರೆ. ಅಷ್ಟಕಂಬವ ನಿಕ್ಕಿ ಚೌಕದುಪ್ಪರಿಗೆಯು ಕಟ್ಟಿದಮನೆ ಇದ್ದಂತಿಹುದೆಂದು ದೇಹವನ್ನು ಮನೆಗೆ ಹೋಲಿಸಿದ್ದಾರೆ. ಚಾವಡಿ, ಚಪ್ಪರ, ಬಾಗಿಲು, ದೊಡ್ಡಿ, ಮಹಡಿ ಇತ್ಯಾದಿಗಳಿಂದ ಕೂಡಿದ ಮನೆಗಳು ಆಚಾರ್ಯರಲ್ಲಿ ಉಲ್ಲೇಖಗೊಂಡಿವೆ.

ವಸ್ತು ಸಂಸ್ಕೃತಿಯ ವಿವಿಧ ಭಾಗಗಳಾದ ವೇಷಭೂಷಣಗಳು, ಆಹಾರ ಪಾನೀಯಗಳು, ಉಪಕರಣಗಳು, ಚಿತ್ರಕಲೆ, ಶಿಲ್ಪ, ವಾಸ್ತು ಇತ್ಯಾದಿಗಳ ಉಲ್ಲೇಖಗಳಿಂದ ದಕ್ಷಿಣ ಭಾರತದ, ಅದರಲ್ಲೂ ಮುಖ್ಯವಾಗಿ ಕರ್ನಾಟಕ ಮತ್ತು ಆಂಧ್ರಗಳಲ್ಲಿ ಬಳಕೆಯಲ್ಲಿದ್ದ ವಸ್ತುಗಳು ಮತ್ತು ಅವುಗಳ ಉಪಯೋಗ ತಿಳಿದುಬರುತ್ತದೆ.

ಭಾರತೀಯರಲ್ಲಿ ಆಚಾರ, ನಂಬಿಕೆ, ಮತ್ತು ಧರ್ಮ ಹಾಸುಹೊಕ್ಕಾಗಿರುತ್ತವೆ. ಆಚಾರ, ನಂಬಿಕೆ ಮುಂತಾದವು ಇಲ್ಲದವರು ಜಗತ್ತಿನಲ್ಲೇ ಇಲ್ಲ. ಆಚಾರಾದಿಗಳ ನೇಪಥ್ಯದಿಂದಲೇ ಮೂಡಿಬಂದ ಸಾಹಿತ್ಯದಲ್ಲಿ ಇವುಗಳ ಸ್ಥಾನ ಇನ್ನೂ ಮಹತ್ತ್ವದ್ದು. ಕೀರ್ತನ ಸಾಹಿತ್ಯ ಭಕ್ತಿಪಂಥದ ಶಕ್ತಿಯುತ ಅಭಿವ್ಯಕ್ತಿಯಾಗಿ ಮೂಡಿಬಂದಿರುವುದರಿಂದ ಧಾರ್ಮಿಕ ಹಿನ್ನೆಲೆ ಅನಿವಾರ್ಯ.

ಹುಟ್ಟಿನಿಂದ ಸಾವಿನವರೆಗೆ ಮನುಷ್ಯ ಆಚರಿಸುವ ಆಚಾರಗಳು ನೂರಾರಿವೆ. ಜನನ ಮರಣಾದಿಗಳಲ್ಲಿರುವ ನಿಗೂಢತೆಯ, ಹೆದರಿಕೆಯ ಮತ್ತು ಶುಭ್ರತೆಯ ದೃಷ್ಟಿಯಿಂದ ಏರ್ಪಟ್ಟ ಹಲವಾರು ಆಚಾರಗಳನ್ನು ಇಬ್ಬರು ಕೀರ್ತನಕಾರರೂ ತಮ್ಮ ಕೀರ್ತನೆಗಳಲ್ಲಿ ಅಳವಡಿಸಿದ್ದಾರೆ. ಹೆತ್ತಸೂತಕ ಹತ್ತುದಿನಕೆ ಪರಿಹಾರ, ಮೃತ್ಯುಸೂತಕ ಹನ್ನೆರಡು ದಿನವೆಂದು ದಾಸರು ಹೇಳಿದ್ದಾರೆ. ಇದು ಇಂದಿಗೂ ನಮ್ಮಲ್ಲಿ ಆಚರಣೆಯಲ್ಲಿದೆ

ಮೂಢಾಚಾರಗಳನ್ನು ನಂಬದೆ ಶುದ್ಧಸಾತ್ತ್ವಿಕ ಭಕ್ತಿಯಲ್ಲೇ ದಾಸರು ಮತ್ತು ಆಚಾರ್ಯರು ನಂಬಿಕೆಯಿಟ್ಟಿದ್ದರೆಂಬುದು ಈಗಾಗಲೇ ಸ್ಪಷ್ಟವಾಯಿತು. "ತಂದೆ ಸತ್ತ ಮೇಲೆ ನೂರುಮಂದಿ ವಿಪ್ರರಿಗುಣಿಸಿ ತಂದೆ ತೃಪ್ತನಾದನೆಂಬರು ಮಂದಮತಿಯ ಜನಗಳು" (ಉ. ಪ್ರ., 1, ಪು. 79) ಎಂಬ ದಾಸರ ಮಾತನ್ನು ಗಮನಿಸಬೇಕು. ಜನ್ಮ ಸೂತಕ ಆಚರಿಸಿದ ಮಾತ್ರಕ್ಕೆ ಪ್ರಯೋಜನವೇನೂ ಇಲ್ಲ ಎಂದು ಅನ್ನಮಯ್ಯ ಹೇಳುತ್ತಾರೆ (8-119).

ಶುಭ್ರತೆಯು ದೃಷ್ಟಿಯಿಂದ ಏರ್ಪಟ್ಟ ಮಡಿ, ಮೈಲಿಗೆ ಮುಂತಾದವನ್ನು ಮೂಲಭೂತವಾಗಿ ಅರ್ಥಮಾಡಿಕೊಳ್ಳಬೇಕೆಂಬುದು ಇಬ್ಬರು ಸಂಕೀರ್ತನಾಚಾರ್ಯರ ಅಭಿಪ್ರಾಯವಾಗಿತ್ತು. "ಬಟ್ಟೆಯ ನೀರೊಳಗಿಟ್ಟು ಒಣಗಿಸಿ ಉಟ್ಟರೆ ಅದು ತಾ ಮಡಿಯಲ್ಲ, ಹೊಟ್ಟೆಯೊಳಗಿನ ಕಾಮಕ್ರೋಧಗಳ ಬಿಟ್ಟರೆ ಅದು ತಾ ಮಡಿಯೊ" (5-72) ಎಂಬುದು ದಾಸರ ದೃಢ ಅಭಿಪ್ರಾಯ.

ಇಂಥ ಪ್ರಗತಿಶೀಲ ಅಭಿಪ್ರಾಯಗಳಿದ್ದರೂ ಮತಾಚಾರಗಳ ಚೌಕಟ್ಟಿನೊಳಗೇ ಕೆಲಸ ಮಾಡಿದವರಾದುದರಿಂದ ಇವರು ಕೆಲವು ಮತಾಚಾರಗಳಿಗೆ ಕಟ್ಟುಬೀಳಬೇಕಾಯಿತು. ಮೃತ್ತಿಕಾಶೌಚದ ಬಗೆಗೆ ಕೆಲವು ಕೀರ್ತನೆಗಳಲ್ಲಿ ಪ್ರಸ್ತಾವಿಸಿದ ದಾಸರು 'ಮೃತ್ತಿಕಾ ಶೌಚವಿಲ್ಲದವನಿಗೆ ಸ್ನಾನ ಜಪವೇಕೆ' ಎನ್ನುತ್ತಾರೆ. ಆಚಮನ, ಆಪೋಶನ ಮುಂತಾದವನ್ನು ನಿತ್ಯಾನುಷ್ಠಾನಗಳಲ್ಲಿ ಬಿಡುವಂತಿಲ್ಲ. ಅರ್ಘ್ಯ, ಪಾದ್ಯ, ಆಚಮನ, ದೀಪ, ಧೂಪ, ನೈವೇದ್ಯ, ತಾಂಬೂಲ, ಆಸನ, ಗಂಧ, ಮಾಲ್ಯ, ವಸ್ತ್ರಾಭರಣ ಮುಂತಾದ ಆಚಾರಗಳನ್ನು ಒಪ್ಪಿ ಆಚರಿಸಿದ್ದಾರೆ, ತಮ್ಮ ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. ಉಪವಾಸ, ಜಾಗರಣೆ ಇತ್ಯಾದಿಗಳನ್ನು ಇಬ್ಬರೂ ಪ್ರಸ್ತಾವಿಸಿದ್ದಾರೆ.

ಭಾರತೀಯರಿಗೆ ತುಂಬ ಪವಿತ್ರವಾದ ಗೋವನ್ನು ಹತ್ಯೆ ಮಾಡುವವರು ಅಂದೂ ಇದ್ದರು. ಆಕಳನ್ನು ಮಾರುವಾಗ ಯಾರು ಕೊಂಡುಕೊಳ್ಳುವರೋ ಅವರಿಗೇ ಕರುಕೂಡ ಸೇರಬೇಕೆಂಬುದು (7-207) ನಮ್ಮ ಆಚಾರ. ಅಂಥ ನಾಡಿನಲ್ಲಿ "ಗೋಹತ್ಯೆ ಮಾಡುತ್ತಿದ್ದರೆ ಕರುಗಳು ಅಂಗಲಾಚುತ್ತಿರಲು ಧರ್ಮದೇವತೆ ಹೇಗೆ ಅಂಗೀಕರಿಸಿತೊ" (11-1-133) ಎಂದು ಹೇಳುವಲ್ಲಿ ಆಚಾರ್ಯರ ಕಳಕಳಿ ಅರ್ಥವಾಗುತ್ತದೆ.

ಕರ್ನಾಟಕಾಂಧ್ರಗಳಲ್ಲಿ ಚಾಂದ್ರಮಾನದ ಪ್ರಕಾರ ಹಬ್ಬಗಳನ್ನು ಆಚರಿಸುತ್ತಾರೆ; ತಮಿಳರು ಸೌರಮಾನವನ್ನು ಆಧರಿಸುವವರು. ಚಾಂದ್ರಮಾನ ಯುಗಾದಿಯಿಂದ ಹಿಡಿದು ಇನ್ನಿತರ ಹಬ್ಬಗಳು ಕನ್ನಡಿಗರಿಗೂ ತೆಲುಗರಿಗೂ ಸಮಾನವಾಗಿವೆ. ಎಷ್ಟೇ ಹಬ್ಬಗಳಾದರೂ ಧಾರಣೆ, ಪಾರಣೆ, ಭೀಷ್ಮಪಂಚಕ, ವಿಷ್ಣುಪಂಚಕ, ಪರಮ ಕಠಿಣ ಚಾಂದ್ರಾಯಣ ಮುಂತಾದವೆಲ್ಲವೂ ಪುರಂದರವಿಠಲನ ಧ್ಯಾನಕ್ಕೆ ಸರಿಯಿಲ್ಲ ಎಂದು ದಾಸರು ಅಭಿಪ್ರಾಯ ಪಟ್ಟಿದ್ದಾರೆ.

ಅನ್ನಮಾಚಾರ್ಯರು ಕೆಲವು ಹಬ್ಬಗಳನ್ನು ವಿಶೇಷವಾಗಿ ಪ್ರಸ್ತಾವಿಸಿದ್ದಾರೆ. ಅಂಥವುಗಳ ಪೈಕಿ ಕೃಷ್ಣ ಜನ್ಮಾಷ್ಟಮಿ ದಿನ ಆಚರಿಸುವ ನೆಲುವು ಹಬ್ಬ ಒಂದು. ಕೃಷ್ಣ

ನೆಲುವಿನಲ್ಲಿಟ್ಟ ಹಾಲು ಮೊಸರುಗಳನ್ನು ಕದ್ದ ಸಂದರ್ಭದ ನೆನಪಿಗಾಗಿ ಬೀದಿಯಲ್ಲಿ ನೆಲುವು ನೇತಾಡಿಸಿ ಕೋಲಿನಿಂದ ಬಡಿಯುವ ಹಬ್ಬ ಆಚರಣೆಗೆ ಬಂದಿದೆ. ಇದನ್ನು ದೇವಾಲಯೋತ್ಸವಗಳಿಗೆ ಅನುಬಂಧವಾಗಿ ಪ್ರಾರಂಭಿಸಿದವರು ಅನ್ನಮಾಚಾರ್ಯರೇ. ಇದರ ವೈಭವವನ್ನು ಕೀರ್ತನೆಗಳಲ್ಲಿ ವರ್ಣಿಸಲಾಗಿದೆ. ತಿರುಪತಿಯಲ್ಲಿ ನಡೆಯುತ್ತಿದ್ದ, ಇಂದಿಗೂ ನಡೆಯುತ್ತಿರುವ ರಥೋತ್ಸವ, ಗರುಡೋತ್ಸವ, ಬ್ರಹ್ಮೋತ್ಸವಗಳನ್ನು ಆಚಾರ್ಯರು ಭಕ್ತಿಯಿಂದ ಸ್ಮರಿಸಿಕೊಂಡಿದ್ದಾರೆ. ಆ ಕಾಲದಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಕ್ಷೇತ್ರವಾಗಿ ತಿರುಪತಿಗಿದ್ದ ಪ್ರಾಧಾನ್ಯವನ್ನು ಇವರ ಕೀರ್ತನೆಗಳು ತಿಳಿಸುತ್ತವೆ. ಗರುಡೋತ್ಸವ, ಶಯನೋತ್ಸವ ಮುಂತಾದವನ್ನು ಪುರಂದರದಾಸರೂ ಉಲ್ಲೇಖಿಸಿದ್ದಾರೆ.

ನಂಬಿಕೆಗಳ ವಿಷಯದಲ್ಲಿ ಕನ್ನಡಿಗರಿಗೂ ತೆಲುಗರಿಗೂ ಬಹಳಷ್ಟು ಹೋಲಿಕೆ ಇದೆ. ಆಣೆ ಇಡುವಂಥ ಸಾಮಾನ್ಯ ಜನರ ನಂಬಿಕೆಯನ್ನು ಕೀರ್ತನಗಳಲ್ಲೂ ಉಲ್ಲೇಖಿಸಲಾಗಿದೆ. ಒಳ್ಳೆಯ ಮತ್ತು ಕೆಟ್ಟ ಶಕುನಗಳೆಂದು ನಾವು ಭಾವಿಸಿರುವ ಕೆಲವನ್ನು ಇವರಿಬ್ಬರೂ ಕೊಟ್ಟಿದ್ದಾರೆ. ಮಾರಿ ಮಸಣಿ ಮುಂತಾದ ಕ್ಷುದ್ರದೇವತೆಗಳಲ್ಲಿ ಆ ಕಾಲದಲ್ಲೂ ನಂಬಿಕೆ ಇತ್ತು; ಈ ಕಾಲದಲ್ಲೂ ಇದೆ. ಆದರೆ ಹರಿಯನ್ನು ನಂಬಿದವರು ಈ ಕ್ಷುದ್ರದೇವತೆಗಳನ್ನು ಓಡಿಸಬಲ್ಲರೆಂದು ದಾಸರು ನಂಬಿದ್ದಾರೆ. ಆಚಾರ್ಯರು ಕೂಡ "ನಾರಾಯಣ ನಿನ್ನ ನಾಮವ ಮಂತ್ರಿಸಿ ಈ ಪ್ರಾಣಿಗಳ ಭ್ರಮೆ ಬಿಡಿಸು" (9-205) ಎಂದಿದ್ದಾರೆ.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ವಿಷ್ಣುಭಕ್ತರೇ ಆದರೂ ಬೇರೆ ಮಠಗಳಿಗೆ ಸೇರಿದವರು. ಇದರ ಪ್ರಭಾವ ಅವರ ಕೀರ್ತನೆಗಳಲ್ಲೂ ಇದ್ದೇ ಇದೆ. ಅನ್ನಮಾಚಾರ್ಯರು ತಿರುಪತಿಗೆ ಬರುವ ಕಾಲಕ್ಕಾಗಲೇ ಅದು ರಾಮಾನುಜ ಮತದ ಪ್ರಧಾನ ಕೇಂದ್ರವಾಗಿತ್ತು. ಅಲ್ಲಿ ವಿಶಿಷ್ಟಾದ್ವೈತವನ್ನು ಬೋಧಿಸುವ, ದೀಕ್ಷೆಕೊಡುವ, ಪ್ರಚಾರಮಾಡುವ ಗುರುಗಳು ಅನೇಕರಿದ್ದರು. ಅನಂತರಕಾಲದ ಶ್ರೀಕೃಷ್ಣದೇವರಾಯ ಈ ಸಂಪ್ರದಾಯವನ್ನೇ ಅನುಸರಿಸಿ 'ಆಮುಕ್ತ ಮಾಲ್ಯದ' ಎಂಬ ಭಕ್ತಿ ಪ್ರಬಂಧವನ್ನು ಬರೆದನು.

ಪುರಂದರದಾಸರು ಮಧ್ವದರ್ಶನ ಪ್ರಚಾರಕರಾಗಿ ಭಕ್ತಿ ಶ್ರದ್ಧೆಗಳಿಂದ ಸೇವೆ ಸಲ್ಲಿಸಿದವರು. ಈ ಧರ್ಮನಿಷ್ಠೆ ಇವರಿಬ್ಬರ ಕೀರ್ತನೆಗಳಲ್ಲಿರುವ ಕೆಲವು ವ್ಯತ್ಯಾಸಗಳಿಗೆ ಕಾರಣವಾಯಿತು. ಹರಿದಾಸರ ವೇಷಭೂಷಣಗಳು, ಆಚಾರ ಸಂಪ್ರದಾಯಗಳು ಮುಂತಾದವನ್ನು ಪುರಂದರದಾಸರು ತಮ್ಮ ಹಲವು ಕೀರ್ತನೆಗಳಲ್ಲಿ ಪ್ರಸ್ತಾವಿಸಿದ್ದಾರೆ. "ಮತದೊಳಗೆ ಒಳ್ಳೆಮತ ಮಧ್ವಮತವು ರಘುಪತಿ ಪೂಜಾ ವಿಧಾನಕೆ ಪಾವನ ಮತವು" (3-37) ಎಂಬುದು ಅವರ ದೃಢ ವಿಶ್ವಾಸ. ಪುರಂದರರ ಕಾಲಕ್ಕೆ ವೈಷ್ಣವ ತುಂಬ ಪ್ರಚಾರದಲ್ಲಿತ್ತು. ರಾಜರ ಮನ್ನಣೆಯೂ ಅದಕ್ಕೆ ದೊರಕಿತ್ತು. ಕನ್ನಡದಲ್ಲಿ ಕುಮಾರ ವ್ಯಾಸಾದಿ ಕವಿಗಳು, ತೆಲುಗಿನಲ್ಲಿ ಭಕ್ತಪೋತನ, ಶ್ರೀಕೃಷ್ಣದೇವರಾಯ ಮುಂತಾದವರು ವೈಷ್ಣವ ಭಕ್ತಿ ಪ್ರಚಾರದಲ್ಲಿ ತೊಡಗಿದ್ದರು. ಕರ್ನಾಟಕದಲ್ಲಿ ವೈಷ್ಣವದ ಜೊತೆ

ಜೊತೆಯಲ್ಲೇ ಮಧ್ವಮತವೂ ಪ್ರಚಾರ ಪಡೆಯಿತು. ಈ ಹಿನ್ನೆಲೆಯಲ್ಲಿ ದಾಸರು ಧಾರ್ಮಿಕ ಪ್ರಚಾರ ಕೈಗೊಂಡವರು.

ಆಚಾರ್ಯರು ವಿಷ್ಣುವಿನ ಸರ್ವೋತ್ತಮತ್ವವನ್ನು ಸ್ಥಾಪಿಸುವುದರ ಜೊತೆಗೆ ವಿಶಿಷ್ಟಾದ್ವೈತವೇ ಉತ್ತಮ ಮತವೆಂದೂ ಸಾರಿದ್ದಾರೆ. ಪುರಂದರದಾಸರಷ್ಟು ಅಧಿಕ ಸಂಖ್ಯೆಯಲ್ಲಿ ಮತಸಂಬಂಧ ಗೀತೆಗಳನ್ನು ಆಚಾರ್ಯರು ಬರೆದಿಲ್ಲ. ಆದರೆ ವಿಶಿಷ್ಟಾದ್ವೈತ ಪ್ರಚಾರಕ್ಕಾಗಿ ಆಂಧ್ರದ ಹಲವು ಪ್ರದೇಶಗಳಿಗೆ ಹೋಗಿ ಕೀರ್ತನಾದಿಗಳ ಮೂಲಕ ತಮ್ಮ ಅಭಿಪ್ರಾಯಗಳನ್ನು ಜನರಿಗೆ ತಿಳಿಸಿದವರೇ ಆಗಿದ್ದರು. ಅವರಿಗೆ ಕರ್ನಾಟಕದ ಹರಿದಾಸ ಪರಂಪರೆಯ ಪರಿಚಯವೂ ಇದ್ದಿರಬೇಕು. "ಎಲ್ಲದರಲ್ಲೂ ಹರಿದಾಸರು ಅಧಿಕರು, ಕಮಲಜಾದಿಗಳಿಗೆ ಕಣ್ಣಿನಂಥವರು" (ಅಧ್ಯಾ. ಸಂ., 2, ಪು. 114) ಎಂದಾಗ ಹರಿದಾಸ ಪರಂಪರೆ ಅವರ ದೃಷ್ಟಿಯಲ್ಲಿದ್ದಿರಬಹುದು. ವಿಶಿಷ್ಟಾದ್ವೈತದ ಹಿರಿಮೆಯನ್ನು ಹೇಳುವಾಗ ಬೇರೆ ಮತಗಳ ಅಲ್ಪತ್ವವನ್ನು ಅವರು ಹೇಳಿರುವರಾದರೂ ಮಧ್ವ ಮತವನ್ನು ಎಲ್ಲೂ ಟೀಕಿಸಿದಂತಿಲ್ಲ. ಅವರೂ ಹರಿಭಕ್ತರೇ ಆಗಿರುವುದು ಇದಕ್ಕೆ ಕಾರಣ ವಿರಬಹುದು. ಮಧ್ವ ಸಂಪ್ರದಾಯಕ್ಕೆ ಅನುಸಾರವಾಗಿ ಪುರಂದರದಾಸರು ಹನುಮ ಭೀಮ ಮಧ್ವರನ್ನು ಹಲವು ಕೀರ್ತನೆಗಳಲ್ಲಿ ಸ್ತುತಿಸಿದ್ದಾರೆ. ಅನ್ನಮಾಚಾರ್ಯರು ಕೂಡ ಹನುಮಂತನನ್ನು ಕುರಿತಂತೆ ಹಲವು ಸಂಕೀರ್ತನೆಗಳನ್ನು ಬರೆದಿರುವುದು ಗಮನಾರ್ಹ. ಆಚಾರ್ಯರ ಹನುಮಂತ್ಸಂಕೀರ್ತನೆಗಳದೇ ಒಂದು ಪುಸ್ತಕ ಪ್ರಕಟವಾಗಿದೆ (ಸಂ. ಕೆ. ಸರ್ವೋತ್ತಮನ್).

ಭಕ್ತಿಪಂಥದಲ್ಲಿ ವಿವಿಧ ಕ್ಷೇತ್ರ ಸಂದರ್ಶನವೂ ಒಂದು ಭಾಗವಾಗಿದೆ. ಪುರಂದರ ದಾಸರು ದಕ್ಷಿಣ ಭಾರತದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದ್ದರು. ಇವುಗಳಲ್ಲಿ ತಮಿಳು ನಾಡಿನ ಅರುಣಾಚಲಮ್, ಶ್ರೀರಂಗ ; ಆಂಧ್ರದ ಅಹೋಬಲ, ತಿರುಪತಿ, ಭದ್ರಾಚಲ ಮುಂತಾದವು ಸೇರಿವೆ. ದಾಸರು ಹಲವು ಬಾರಿ ತಿರುಪತಿಗೆ ಹೋಗಿದ್ದರು. ವೆಂಕಟರಮಣ ನನ್ನು ಕುರಿತು ಬರೆದ ಅವರ ಕೀರ್ತನೆಗಳು ಪ್ರಸಿದ್ಧವಾಗಿವೆ. ಅನ್ನಮಾಚಾರ್ಯರು, ದಾಸರು ಇಬ್ಬರೂ ಅಹೋಬಲ ನರಸಿಂಹ ಕ್ಷೇತ್ರವನ್ನು ಸಂದರ್ಶಿಸಿದವರು.

ಅನ್ನಮಾಚಾರ್ಯರ ಹೆಚ್ಚು ಸಂಖ್ಯೆಯ ಗೀತೆಗಳು ವೇಂಕಟೇಶ್ವರನನ್ನು ಕುರಿತವು. ನವವಿಧ ಭಕ್ತಿಗಳನ್ನು ಪ್ರದರ್ಶಿಸಿ ವೇಂಕಟೇಶ್ವರನನ್ನು ಮನಸಾರೆ ಹೊಗಳಿ ಹಾಡಿದ್ದಾರೆ. ಅವರು ಸಂದರ್ಶಿಸಿದ ಕ್ಷೇತ್ರಗಳಲ್ಲಿ ಕಂಚಿ, ಶ್ರೀರಂಗಂ ಮುಂತಾದ ತಮಿಳುನಾಡಿನ ಕ್ಷೇತ್ರಗಳು, ವಿಜಯನಗರ, ಹಂಪೆ, ಆಂಧ್ರದ ಅನೇಕ ಸ್ಥಳಗಳು ಸೇರಿವೆ.

ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಕಲಾತ್ಮಕ ರೂಪ ಗಳಾದ ಸಂಗೀತ, ನೃತ್ಯ, ರೂಪಕ, ಸಾಹಿತ್ಯ ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದು ಈ ಸಾಂಸ್ಕೃತಿಕ ಅಧ್ಯಯನದ ಕೊನೆಯಭಾಗ. ಇಬ್ಬರು ಕೀರ್ತನಕಾರರೂ ದೇಶಿ ಹಾಗೂ ಮಾರ್ಗ ಎಂಬ ಎರಡು ಸಂಗೀತ ಪದ್ಧತಿಗಳಲ್ಲೂ ಕೃತಿಗಳನ್ನು ರಚಿಸಿದವರು. ಲಾಲಿ,

ಜೋಗುಳ, ಒನಕೆಹಾಡು, ಬೀಸುವ ಕಲ್ಲಿನ ಹಾಡು ಮುಂತಾದ ಜನಪದ ಮಾಧ್ಯಮಂದ ಗೀತ ಪ್ರಕಾರಗಳನ್ನು ಇವರು ತಮ್ಮ ಕೀರ್ತನೆಗಳಲ್ಲಿ ಅಳವಡಿಸಿಕೊಂಡರು.

ವಿವಿಧ ರಾಗಗಳನ್ನು ಬಳಸುವುದರಿಂದ, ಅನೇಕ ರೀತಿಯ ಪದಗಳನ್ನು ರಚಿಸು ವುದರಿಂದ ಕರ್ಣಾಟಕ ಸಂಗೀತಕ್ಕೆ ಈ ಇಬ್ಬರು ಮಹನೀಯರು ಗಣನೀಯವಾದ ಸೇವೆ ಮಾಡಿದ್ದಾರೆ. ಪುರಂದರದಾಸರು ಮತ್ತು ಅನ್ನಮಾಚಾರ್ಯರು ಬಳಸಿದ ರಾಗಗಳು ಒಂದುನೂರು ಕೂಡ ಇಲ್ಲ ಎಂಬುದನ್ನು ಗಮನಿಸಬೇಕು. ಅದು ಕರ್ಣಾಟಕ ಸಂಗೀತ ವಿಕಾಸದ ಪ್ರಾರಂಭಕಾಲ. ಅನ್ನಮಾಚಾರ್ಯರ ಕಾಲಕ್ಕೆ ಹಿಂದೂಸ್ಥಾನೀ ರಾಗಗಳ ಬಳಕೆ ಅಷ್ಟಾಗಿ ಇರಲಿಲ್ಲ. ಪುರಂದರದಾಸರು ಕೆಲವು ಹಿಂದೂಸ್ಥಾನೀ ರಾಗಗಳನ್ನು ಕೂಡ ಬಳಸಿದ್ದಾರೆ. ಪಲ್ಲವಿ, ಅನುಪಲ್ಲವಿಯ ವಿಷಯದಲ್ಲಿ ಕೂಡ ಅನ್ನಮಾಚಾರ್ಯರ ಕಾಲಕ್ಕಿಂತ ಪುರಂದರದಾಸರ ಕಾಲಕ್ಕೆ ಪ್ರಗತಿ ಉಂಟಾಯಿತೆಂಬುದು ಗಮನಿಸಬೇಕಾದ ವಿಷಯ.

ಪುರಂದರದಾಸರು ಸಂಗೀತದ ಪ್ರಥಮ ಪಾಠಗಳಿಂದ ಹಿಡಿದು ಪ್ರೌಢರಚನೆಗಳ ವರೆಗೆ ಕೃತಿಗಳನ್ನು ರಚಿಸಿದ್ದಾರೆ. ಕರ್ಣಾಟಕ ಸಂಗೀತಾಭ್ಯಾಸದ ಪ್ರಥಮ ಗೀತೆಗಳನ್ನು ರಚಿಸಿದ ಖ್ಯಾತಿ ದಾಸರದು.[1] ಪದ, ಸುಳಾದಿ, ಉಗಾಭೋಗ ಎಂಬ ಮೂರು ತರಹದ ರಚನೆಗಳಿಂದ ವೈವಿಧ್ಯಮಯ ಸಂಗೀತ ರಚನೆಗಳನ್ನು ಕರ್ಣಾಟಕ ಸಂಗೀತಕ್ಕೆ ಅವರು ನೀಡಿದ್ದಾರೆ. ಹಿಂದಿನವರು ಹಾಕಿಕೊಟ್ಟ ಶಾಸ್ತ್ರದ ಚೌಕಟ್ಟನ್ನೇ ಅನುಸರಿಸಿ ಕೊಂಡು ಹೋದವರಲ್ಲ ಅವರು. ಎಲ್ಲ ತರಹದ ಸಂಗೀತ ಸಂಪ್ರದಾಯಗಳನ್ನೂ ಸಾಮಾನ್ಯರಿಗೆ ತಲುಪುವ ರೀತಿಯಲ್ಲಿ ರಚಿಸಿದರು. ಅನ್ನಮಾಚಾರ್ಯರು ಸಂಕೀರ್ತನ ಲಕ್ಷಣವನ್ನು ಸಂಸ್ಕೃತದಲ್ಲಿ ಬರೆದದ್ದು ಮಾತ್ರವಲ್ಲದೆ ಸಾವಿರಾರು ಸಂಕೀರ್ತನೆಗಳನ್ನೂ ಬರೆದು ಪದಕವಿತಾಪಿತಾಮಹರಾದರು. ಅನ್ನಮಾಚಾರ್ಯರ ಎಲ್ಲ ಸಂಕೀರ್ತನೆಗಳೂ ಶೃಂಗಾರ ಮತ್ತು ವೈರಾಗ್ಯ ಎಂಬ ಎರಡು ಮುಖ್ಯ ಭಾಗಗಳಲ್ಲಿ ಮೂಡಿಬಂದಿವೆ ಎಂಬುದನ್ನು ಗಮನಿಸಬೇಕು. ದಾಸರ ಹಾಡುಗಳಂತೆ ಲೋಕನೀತಿ, ಕೃಷ್ಣಲೀಲೆ, ಪೂಜಾತತ್ತ್ವ ಮುಂತಾದ ವಿಭಾಗಗಳನ್ನು ಅನ್ನಮಾಚಾರ್ಯರಲ್ಲಿ ಮಾಡುವುದು ಕಷ್ಟ. ಅವರ ಕೀರ್ತನೆಗಳಲ್ಲಿ ವೇಂಕಟೇಶ್ವರ ರೂಪವರ್ಣನೆ, ಕ್ಷೇತ್ರಮಹಿಮಾಭಿವರ್ಣನೆ, ವೇಂಕಟೇಶ್ವರನ ಶೃಂಗಾರ, ಆತ್ಮಾವಿಷ್ಕಾರ, ಭಕ್ತಿಯ ನಿವೇದನೆ, ಉತ್ಸವ ಸಂಕೀರ್ತನೆ

---

[1] ಅನ್ನಮಾಚಾರ್ಯರ ಮೊಮ್ಮಗನಾದ ಚಿನ್ನನ್ನ ಮತ್ತು ಪುರಂದರದಾಸರು ವಿಜಯನಗರದ ಅಚ್ಯುತರಾಯನ ಆಶ್ರಯದಲ್ಲಿ ಕರ್ಣಾಟಕ ಸಂಗೀತದ ಪ್ರಾಥಮಿಕ ಪಾಠಗಳನ್ನು ಸೃಷ್ಟಿಸಿದ ರೆಂದು ಡಾ. ವೇಟೂರಿ ಆನಂದಮೂರ್ತಿ ಊಹಿಸಿದ್ದಾರೆ (ಶ್ರೀ ಬಿ. ರಜನೀಕಾಂತರಾವ್ ಉಲ್ಲೇಖ, 'ವಾಗ್ಗೇಯಕಾರುಲಲೋ ಅನ್ನಮಾಚಾರ್ಯುನಿ ಸ್ಥಾನಮು', ತಾಳ್ಳಪಾಕ ಅನ್ನಮಾಚಾರ್ಯ ಜಯಂತಿ ಸಂಚಿಕ, ಪು. 59).

ಮುಂತಾದ ವಿಭಾಗಗಳನ್ನು ಮಾಡಬಹುದು. ಹೀಗೆ ಅಧಿಕ ವೈವಿಧ್ಯದಿಂದ ಇವರಿಬ್ಬರೂ ಕೀರ್ತನೆಗಳನ್ನು ಬರೆದಿದ್ದಾರೆ.

ತಮ್ಮ ಕಾಲದ ನೃತ್ಯ, ರೂಪಕಗಳನ್ನು ಕೂಡ ಇವರಿಬ್ಬರೂ ಉಲ್ಲೇಖಿಸಿದ್ದಾರೆ. ಪುರಂದರದಾಸರಲ್ಲಿ ಮತ್ತು ಅನ್ನಮಾಚಾರ್ಯರಲ್ಲಿ ಅಭಿನಯಯೋಗ್ಯವಾದ ಅನೇಕ ಗೀತೆಗಳನ್ನು ಗುರುತಿಸಬಹುದು. ಬಾಲಕೃಷ್ಣನ ಕುಣಿತದ ವರ್ಣನೆಗಳು, ಅಲಮೇಲು ಮಂಗೆಯ ಕುಣಿತದ ವರ್ಣನೆ ಮುಂತಾದವು ಈ ಕವಿಗಳ ನೃತ್ಯಪರಿಜ್ಞಾನವನ್ನು ತಿಳಿಸಿ ಕೊಡುತ್ತವೆ. ಕೋಲಾಟದಂಥ ನೃತ್ಯ ವಿನೋದಗಳನ್ನು ಇಬ್ಬರು ಕೀರ್ತನಕಾರರೂ ಹೆಸರಿಸಿದ್ದಾರೆ. ಅನ್ನಮಯ್ಯ ಚಿಂದು ಎಂಬ ಹೆಸರನ್ನು ಉಲ್ಲೇಖಿಸಿದ್ದು ಮಾತ್ರವಲ್ಲದೆ ಹಲವು ಚಿಂದುಗಳನ್ನೂ ಬರೆದಿದ್ದಾರೆ. ಚಿಂದು ಎಂಬ ಕುಣಿತದ ಹಾಡಿನ ಪ್ರಕಾರ ಆಂಧ್ರದಲ್ಲಿ ಮಾತ್ರವಲ್ಲದೆ ತಮಿಳುನಾಡಿನಲ್ಲೂ ಪ್ರಸಿದ್ಧವಾಗಿದೆ. ಗೊಬ್ಬಿ ಎಂಬ ಕುಣಿತದ ಬಗೆಗೂ ಅನ್ನಮಾಚಾರ್ಯರಲ್ಲಿ ಉಲ್ಲೇಖಗಳಿವೆ. ಇದನ್ನು ಕೂಡ ತಮಿಳು ನಾಡಿನಲ್ಲಿ ಕಾಣಬಹುದು.

ಗೊಂಬೆಯಾಟ ದಕ್ಷಿಣಭಾರತದಲ್ಲಿ ನೂರಾರು ವರ್ಷಗಳಿಂದ ಜನಪ್ರಿಯ ವಿನೋದ ವಾಗಿದೆ. ಸೂತ್ರದ ಗೊಂಬೆಯಾಟ ಮತ್ತು ತೊಗಲು ಗೊಂಬೆಯಾಟ ಎಂಬ ಎರಡನ್ನೂ ಕೀರ್ತನಕಾರರು ಹೆಸರಿಸಿದ್ದಾರೆ. ಇವನ್ನು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಬಳಸಿಕೊಳ್ಳ ಲಾಗಿದೆ. ಮುಖ್ಯವಾಗಿ ಸೂತ್ರದಗೊಂಬೆಯಾಟ ಸೂತ್ರಧಾರಿ ನಡೆಸಿ ಕೊಡುವುದಾದು ದರಿಂದ ಜೀವನಕ್ಕೆ ಅದು ಒಳ್ಳೆಯ ಪ್ರತಿಮೆಯಾಗಿದೆ. ತೊಗಲುಗೊಂಬೆಯಾಟದಂಥ ಜನಪದ ಕಲಾಮಾಧ್ಯಮಗಳಿಗೆ ಆಗಲೇ ಪೋಷಕರ ಆದರಣೆ ಕಡಿಮೆಯಾಗುತ್ತಿತ್ತೆಂಬು ದನ್ನು ಅನ್ನಮಾಚಾರ್ಯರು ಸೂಚಿಸಿದ್ದಾರೆ (ಅಧ್ಯಾ. ಸಂ., 1. ಪು. 110-11); ತೆರೆಯನಾಟಕ ಮತ್ತು ಬಯಲು ನಾಟಕ ಎಂಬ ಎರಡು ತರಹದ ನಾಟಕಗಳು ಆ ಕಾಲ ದಲ್ಲಿದ್ದುವೆಂದು ತಿಳಿದುಬರುತ್ತದೆ. ಬಹುರೂಪದಂಥ ಇತರ ಪ್ರದರ್ಶನ ಕಲೆಗಳನ್ನು ಅನ್ನಮಾಚಾರ್ಯರು ಹೆಸರಿಸಿದ್ದಾರೆ.

ಧಾತು ಮಾತುಗಳಿಗೆ ಸಮಪ್ರಾಧಾನ್ಯವನ್ನು ನೀಡಿರುವ ಈ ಕೀರ್ತನಕಾರರು ಸಾಹಿತ್ಯಕ್ಕೂ ಗಣನೀಯ ಸೇವೆ ಸಲ್ಲಿಸಿದ್ದಾರೆ. ವಾಗ್ಗೇಯಕಾರರಾದುದರಿಂದ ಅವರ ಸಾಹಿತ್ಯ ಲಿಖಿತ ಸಾಹಿತ್ಯಕ್ಕಿಂತ ಬೇರೆ ಆಗಿದೆ. ಯಾವುದೇ ಪ್ರಮಾಣದಿಂದ ನೋಡಿದರೂ ಉನ್ನತ ಮಟ್ಟಕ್ಕೆ ಉದಾಹರಣೆಯಾದ ಕೃತಿಗಳನ್ನೇ ಇವರಿಬ್ಬರೂ ರಚಿಸಿದ್ದಾರೆ. ಸಾಮಾನ್ಯ ಜನರಿಗೂ ಮೆಚ್ಚುಗೆಯಾದ ಇವರ ಸಾಹಿತ್ಯದಲ್ಲಿ ಗಾದೆ, ನುಡಿಗಟ್ಟು, ಉಪಮೆ, ನಾಣ್ಣುಡಿ, ಅಲಂಕಾರ ಮೊದಲಾದವು ಹೇರಳವಾಗಿವೆ. ಇವರಿಬ್ಬರಲ್ಲಿ ಯಾರೂ ಒಂದೆಡೆ ಕುಳಿತು ಒಂದೊಂದು ಕೀರ್ತನೆಗೂ ಮೆರುಗುಕೊಟ್ಟು ಬರೆದವರಲ್ಲ. ಅವು ಆಶುವಾಗಿ ಮೂಡಿಬಂದಂಥವು. ಇವರಿಗೆ ಶ್ರುತಿಸ್ಮೃತಿ ಪುರಾಣೇತಿಹಾಸ ಕಾವ್ಯಾದಿ ಪರಂಪರೆಯೆಲ್ಲಾ ಬೆನ್ನೆಲುಬಾಗಿತ್ತು. ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಗ್ರಂಥಗಳಿಂದ ಕೆಲವು ಪ್ರಸಂಗಗಳನ್ನು ಆಯ್ದುಕೊಂಡು ದಾಸರು ಅವನ್ನು

ಕೀರ್ತನರೂಪದಲ್ಲಿ ಹೇಳಿದ್ದಾರೆ. ಅನ್ನಮಾಚಾರ್ಯರು ಕಥನ ಕವನಗಳನ್ನು ಬರೆಯ ದಿದ್ದರೂ ಪ್ರಾಚೀನ ಸಾಹಿತ್ಯದ ಹಿನ್ನೆಲೆಯು ಅನೇಕ ಉಲ್ಲೇಖಗಳನ್ನು ಕೊಟ್ಟಿದ್ದಾರೆ. ಪುರಂದರದಾಸರು ಕೃಷ್ಣಲೀಲೆ ಹೇಳುವಾಗ ಭಾಗವತದ ಹಲವು ಸನ್ನಿವೇಶಗಳನ್ನು ಬಳಸಿಕೊಂಡಿದ್ದಾರೆ. ಆಚಾರ್ಯರು ಶೃಂಗಾರ ಸಂಕೀರ್ತನೆಗಳನ್ನು ಹೆಚ್ಚಾಗಿ ಬರೆದಿರು ವುದರಿಂದ ಅವರಲ್ಲಿ ರಸದೃಷ್ಟಿ ಅಧಿಕವಾಗಿ ಕಾಣುತ್ತದೆ. ಧ್ವನಿ, ರೂಪಕ, ಉಪಮೆ ಮುಂತಾದ ಕಾವ್ಯಗುಣಗಳು ಇಬ್ಬರ ರಚನೆಗಳಲ್ಲೂ ಸಮೃದ್ಧವಾಗಿ ಕಾಣದೊರೆಯುತ್ತವೆ.

# ಉಪಸಂಹಾರ

ತೌಲನಿಕ ಅಧ್ಯಯನಗಳಿಂದಾಗುವ ಪ್ರಯೋಜನವನ್ನರಿತು ಸಂಶೋಧಕರು ಆ ಕಡೆ ಹೆಚ್ಚು ಗಮನ ಕೊಡುತ್ತಿರುವ ಕಾಲ ಇದು. ಒಂದೇ ಕಾಲದ ಕವಿಗಳ ಸಮಾನದೃಷ್ಟಿ ಮತ್ತು ಭಿನ್ನ ಭಾಷೆ, ಕಾಲ, ಪ್ರದೇಶಗಳಿಗೆ ಸೇರಿದ ಕವಿಗಳ ಸಮಾನಾಂಶಗಳ ಪರಿಶೀಲನೆ ಮುಂತಾದವು ತೌಲನಿಕ ಅಧ್ಯಯನಗಳಿಗೆ ಕಾರಣವಾಗುತ್ತವೆ. ಪ್ರಕೃತ ಅಧ್ಯಯನವನ್ನು ಒಂದು ನಿರ್ದಿಷ್ಟ ಪರಿಧಿಗೆ ಒಳಪಡಿಸಿ ಇಬ್ಬರು ಹಿರಿಯ ವ್ಯಕ್ತಿಗಳ ಸಾಧನೆಯನ್ನು ಪರಿಶೀಲಿಸಲಾಗಿದೆ. ಈ ಪರಿಶೀಲನೆಯಿಂದ ತಿಳಿದುಬಂದ ಮುಖ್ಯ ವಿಷಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ.

ಪುರಂದರದಾಸರು ದೀಕ್ಷೆ ಪಡೆಯುವ ಮೊದಲೇ ಕೀರ್ತನೆಗಳ ರಚನೆಗೆ ತೊಡಗಿರ ಬೇಕು. ಪುರಂದರವಿಠಲಾಂಕಿತವನ್ನು ಅವರು ಮೊದಲೇ ಬಳಸುತ್ತಿದ್ದು ಅನಂತರ ವ್ಯಾಸರಾಯರಿಂದ ಅಧಿಕಾರಿಕವಾಗಿ ದೀಕ್ಷೆ ಪಡೆದಿರಬೇಕು.

ಪುರಂದರದಾಸರು ಚಿಕ್ಕ ವಯಸ್ಸಿನಲ್ಲಿ ಅನ್ನಮಾಚಾರ್ಯರನ್ನು ಸಂದರ್ಶಿಸಿದ್ದರು. ಆ ಕಾಲಕ್ಕೆ ಅವರು ವ್ಯಾಸರಾಯರಿಂದ ದೀಕ್ಷೆ ಪಡೆದಿರಲಿಲ್ಲ. ಆದರೂ ಕೀರ್ತನೆಗಳಿಂದ ಖ್ಯಾತರಾಗಿ ಅನ್ನಮಾಚಾರ್ಯರಿಂದ ಪ್ರಶಂಸೆ ಪಡೆದರು. ಅಷ್ಟು ಹೊತ್ತಿಗಾಗಲೇ ಆಚಾರ್ಯರು ತಮ್ಮ ಬಹುಪಾಲು ರಚನೆಗಳನ್ನು ಮುಗಿಸಿದ್ದರು. ಪುರಂದರದಾಸರ ಕೆಲವು ಕೀರ್ತನೆಗಳ ಮೇಲೆ ಅನ್ನಮಾಚಾರ್ಯರ ಪ್ರಭಾವ ಇರುವುದು ಸ್ಪಷ್ಟವಾಗಿದೆ.

ಕರ್ಣಾಟಕ ಸಂಗೀತದ ಪ್ರಾಥಮಿಕ ಹಂತದಲ್ಲಿ ಈ ಇಬ್ಬರು ಮಹನೀಯರೂ ಭದ್ರವಾದ ಬುನಾದಿ ಹಾಕಿಕೊಟ್ಟರು. ಅವರದು ಪ್ರಾಥಮಿಕ ಹಂತವಾದುದರಿಂದ ಕೇವಲ ಮಾರ್ಗಶೈಲಿಗೆ ಕಟ್ಟು ಬೀಳದೆ ದೇಶಿ ಶೈಲಿಗೂ ಸಮಪ್ರಾಧಾನ್ಯ ಕೊಟ್ಟು ಸಂಗೀತವನ್ನು ಸಾಮಾನ್ಯ ಜನರಿಗೂ ತಲುಪಿಸಿದರು. ಇದನ್ನು ಶಾಸ್ತ್ರದೃಷ್ಟಿಯಿಂದ ತ್ಯಾಗರಾಜಾದಿಗಳು ಮುಂದಕ್ಕೆ ತೆಗೆದುಕೊಂಡು ಹೋದರು.

ಇವರು ತಮ್ಮ ಕೀರ್ತನೆಗಳಲ್ಲಿ ಆಡುನುಡಿಗೆ ಪ್ರಾಧಾನ್ಯ ಕೊಟ್ಟರು. ಪುರಂದರ ದಾಸರದು ಉತ್ತರಕರ್ನಾಟಕದ ಕಡೆಯ ಭಾಷೆಗೆ ಸಮೀಪವಾದುದು. ಅನ್ನಮಾ ಚಾರ್ಯರದು ಆಂಧ್ರಪ್ರದೇಶದ ರಾಯಲಸೀಮೆಯ ಭಾಷೆ. ಭಾಷಾಪರವಾದ ಅಧ್ಯಯನಕ್ಕೆ ಇವರ ಕೀರ್ತನೆಗಳು ಒಳ್ಳೆಯ ಆಕರ ಗ್ರಂಥಗಳಾಗಿವೆ. ಇವರು ಬರೆದ ಕೀರ್ತನೆಗಳಲ್ಲಿ ಜನಪದ ಮಾಧ್ಯಮದ ಹಲವು ಮಟ್ಟುಗಳನ್ನು ಗುರುತಿಸಬಹುದು. ಲಾಲಿ, ಜೋಗುಳಗಳಿಂದ ಹಿಡಿದು ಜಾನಪದರು ಬಳಸುವ ಹಲವು ಗೀತ ಪ್ರಭೇದ ಗಳನ್ನು ಇವರು ರಾಗತಾಳಗಳಿಗೆ ಅಳವಡಿಸಿಕೊಂಡು ಕೀರ್ತನೆಗಳಾಗಿ ಮಾರ್ಪಡಿಸಿದರು.

ಸಂಸ್ಕೃತಿಯ ವಾಹಕವಾಗಿ ಕೀರ್ತನೆಯನ್ನು ರೂಪಿಸುವಲ್ಲಿ ಇವರು ಯಶಸ್ವಿಯಾದರು. ಸಂಸ್ಕೃತಿಯನ್ನು ಪರಿರಕ್ಷಿಸುವುದು ಸಾಹಿತ್ಯ ನಿರ್ವಹಿಸುವ ಪಾತ್ರಗಳಲ್ಲಿ ಒಂದು. ಕಾಲಪ್ರವಾಹದಲ್ಲಿ ಕಣ್ಮರೆಯಾಗುವ ಹಲವು ಸಾಂಸ್ಕೃತಿಕ ಅಂಶಗಳನ್ನು ಸಾಹಿತ್ಯ ತನ್ನಲ್ಲಿ ಉಳಿಸಿಕೊಂಡು ಮುಂದಿನ ಪೀಳಿಗೆಗೆ ನೀಡುತ್ತದೆ. ಇವರಿಬ್ಬರ ಕೀರ್ತನೆಗಳಲ್ಲಿ ಉಲ್ಲೇಖಗೊಂಡ ಸಾಂಸ್ಕೃತಿಕ ಅಂಶಗಳಲ್ಲಿ ಹಿಂದಿನ ಶತಮಾನಗಳಲ್ಲಿದ್ದು ಈಗ ಕಣ್ಮರೆಯಾಗಿರುವಂಥವು, ಮೊನ್ನೆ ಮೊನ್ನೆಯ ತನಕ ಇದ್ದು ಈಗ ಇಲ್ಲದಂಥವು, ಈಗಲೂ ಬಳಕೆಯಲ್ಲಿರುವಂಥವು ಸೇರಿವೆ. ಈ ಎಲ್ಲ ಅಂಶಗಳ ಪರಿಶೀಲನೆಯಿಂದ ಕರ್ನಾಟಕಾಂಧ್ರ ಸಾಂಸ್ಕೃತಿಕ ಸಂಬಂಧವನ್ನು ಒಂದು ವಿಶಿಷ್ಟವಾದ ದೃಕ್ಕೋನದಿಂದ ನೋಡಿದಂತಾಯಿತು.

ಭಾರತೀಯ ಜನಜೀವನದಲ್ಲಿ ಕಂಡುಬರುವ ವೈವಿಧ್ಯ, ಪ್ರಪಂಚದ ಎಲ್ಲ ವಿದ್ವಾಂಸರನ್ನೂ ಬೆರಗುಗೊಳಿಸಿದೆ. ಇಷ್ಟು ವೈವಿಧ್ಯದ ನಡುವೆ ಆಸೇತುಹಿಮಾಚಲವನ್ನು ಒಂದುಗೂಡಿಸುವ ಭಾರತೀಯತೆ ಅಂತರ್ಗಂಗೆಯಂತೆ ಹರಿಯುತ್ತಿದ್ದು ಬಯಸಿದವರ ಬಾಯಾರಿಕೆಯನ್ನು ತಣಿಸುವ ಸಿಹಿಜಲದಂತಿದೆ. ಜೀವನವನ್ನು ತಪಸ್ಸಿನಂತೆ ನಡೆಸಿ ಸಂಕೀರ್ತನಾಮೃತವನ್ನು ಜನರಿಗೆ ಹಂಚಿಕೊಟ್ಟ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಮೇರುಸದೃಶ ಭಾರತೀಯ ಹೃದಯಕ್ಕೆ ಹಿಡಿದ ಎರಡು ಕನ್ನಡಿಗಳಂತೆ ಇದ್ದಾರೆ.

# ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಬರುವ ಕೆಲವು ಉಲ್ಲೇಖಗಳ ಅಕಾರಾದಿ ಸೂಚಿ

ಸೂಚನೆ : 1. ಈ ಅನುಬಂಧದಲ್ಲಿ ಶ್ರೀ ಪುರಂದರದಾಸರ ಸಾಹಿತ್ಯದ (ಮಿಂಚಿನಬಳ್ಳಿ ಪ್ರಕಾಶನ) ಆರು ಸಂಪುಟಗಳಿಂದ ಆಯ್ದ ಉಲ್ಲೇಖಗಳನ್ನು ಸೂಚಿಸುವಾಗ ಸಂಪುಟದ ಸಂಖ್ಯೆ ಮತ್ತು ಕೀರ್ತನೆಯ ಸಂಖ್ಯೆಯನ್ನು ಕೊಡಲಾಗಿದೆ. ಉಳಿದವುಗಳ ವಿಷಯದಲ್ಲಿ ಮೊದಲ ಸಂಖ್ಯೆ ಭಾಗವನ್ನೂ ಎರಡನೆಯ ಸಂಖ್ಯೆ ಪುಟದ ಸಂಖ್ಯೆಯನ್ನೂ ಸೂಚಿಸುತ್ತವೆ.

2. 1 ರಿಂದ 18ರ ವರೆಗಿನ ಅನ್ನಮಾಚಾರ್ಯರ ಕೀರ್ತನೆಗಳ ಸಂಪುಟಗಳಿಂದ ಆಯ್ದ ಉಲ್ಲೇಖಗಳನ್ನು ಸಂಪುಟದ ಸಂಖ್ಯೆ ಮತ್ತು ಕೀರ್ತನೆಯ ಸಂಖ್ಯೆಯಿಂದ ಸೂಚಿಸಲಾಗಿದೆ. ಉಳಿದ ಸಂಪುಟಗಳ ಉಲ್ಲೇಖಗಳಲ್ಲಿ ಮೊದಲಸಂಖ್ಯೆ ಸಂಪುಟದ ಸಂಖ್ಯೆಯನ್ನೂ ಎರಡನೆಯದು ಪುಟದ ಸಂಖ್ಯೆಯನ್ನೂ ಸೂಚಿಸುತ್ತವೆ.

## ಪುರಂದರದಾಸರ ಕೀರ್ತನೆಗಳಲ್ಲಿ ಬರುವ ಉಲ್ಲೇಖಗಳು

### ವೇಷಭೂಷಣಗಳು

## ಆಹಾರ ಪಾನೀಯುಗಳು

## ಉಪಕರಣಗಳು

## ವಾದ್ಯಗಳು

## ಗಾದೆಗಳು, ನುಡಿಗಟ್ಟುಗಳು

ಆನೆಯ ಮೇಲೆ ಬಪ್ಪನ ಶ್ವಾನ ಕಚ್ಚಲು ಬಲ್ಲುದೆ (2-145)
ಆನೆ ಸಿಂಹನ ಕೂಡ ಅಣಕವಾಡುವುದುಂಟೆ (2-139)
ಇಕ್ಕಲಾರದ ಕೈ ಎಂಜಲು (5-158)
ಉಂಡಮನೆಗೆರಡನ್ನ ಬಗೆವಾತನೇ ಹೊಲೆಯ
ಉರಗಕ್ಕೆ ಕ್ಷೀರವನೆರೆಯಲು ಆದರ ವಿಷವು ಹೋಗಬಲ್ಲುದೆ (ಹ. ಕೀ. ತ. 1-19)
ಉರಗನ ಹೆಡೆಯಲಿ ನೆರಳಕೋರಿದ ಕಪ್ಪೆ
ಸ್ಥಿರವೆಂದು ಬಗೆವರೇಸಾತ್ಮಾ ? (5-26)
ಊರಹಂದಿಗೆ ಅಲಂಕಾರವ ಮಾಡಲು ನಾರುವ ದುರ್ಗಂಧ ಬಿಡಬಲ್ಲುದೆ (5-114)
ಊರ ಹಂದಿಗೆ ಷಡ್ರಸಾನ್ನವನಿಕ್ಕಲು
ನಾರುವ ದುರ್ಗಂಧ ಬಿಡುವುದುಂಟೆ (ಉ. ಪ್ರ. 1-49)
ಊರು ಮಾಡಿದ ಕೊಳಗ ತಾಯಿ ಮಾಡಿದ ಹೊಟ್ಟೆ (4-66)
ಊರೆಲ್ಲ ನೆಂಟರು ಉಣಬಡಿಸುವರ ಕಾಣೆ (ಉ. ಪ್ರ. 1-32)
ಎಸೆವ ತೆಂಗಿನಕಾಯ ಎತ್ತು ಮೆಲಬಲ್ಲುದೆ (5-14)
ಒಡಲ ಕಿಚ್ಚಿಗೆ ಮೇಲೆ ಬಡಿಗಲ್ಲು
ಕೆಡಹಿಕೊಂಡಡಿ ಬಿದ್ದ ಮೂಷಕನಂತಾದೆನಲ್ಲೊ (ಉ. ಪ್ರ. 5-64)
ಒಡಲ ಹಂಗಿಸುವರ ಮನೆಯ ಓಗರಕಿಂತ
ಕುಡಿನೀರ ಕುಡಿದುಕೊಂಡಿಹುದೇ ಲೇಸು (5-113)
ಒಪ್ಪತ್ತು ಭಿಕ್ಷವ ಬೇಡು ಒಬ್ಬರಿಗೆ ಒಂದಿಷ್ಟು ನೀಡು (2-66)
ಓಡಿನಲಿ ಉಂಬುವಗೆ ಹರಿವಾಣವೇಕೆ (5-88)
ಕತ್ತೆಗಮೃತವೇಕೆ
ಎತ್ತಿಗೆ ಕರೆಹವೇಕೆ (5-138)
ಕತ್ತೆ ಬಲ್ಲುದೆ ಹೊತ್ತ ವಸ್ತ್ರಾದಾಭೋಗವನು (ಹ. ಕೀ. ತ. 1-128)
ಕನ್ನಡಿಯೊಳಗಿನ ಗಂಟು ಕಳ್ಳ
ಕನ್ನವಿಕ್ಕಲು ವಶವಾಗುವುದೇ ? (2-142)
ಕಬ್ಬು ಡೊಂಕಾದರೇನು ಸಿಹಿಡೊಂಕೆ (ಹ. ಕೀ. ತ. 1-180)
ಕಳ್ಳಬಲ್ಲನೆ ತನ್ನ ಕರುಣದುಪಕಾರವನು (5-142)
ಕಾಗೆ ಬಲ್ಲುದೆ ಕೋಗಿಲಂತೆ ಸ್ವರಗೈವುದನು (5-142)
ಕಾಡಕಪಿ ಬಲ್ಲುದೇ ಮಾಣಿಕದ ಬೆಲೆಯ (ಉ. ಪ್ರ. 2-19)
ಕಾಡಿನೊಳು ತಿರುಗುವಗೆ ಕನಕಭೂಷಣವೇಕೆ (5-85)
ಕಾಣಬಲ್ಲನೆ ಕುರುಡ ಕನ್ನಡಿಯನು (5-142)
ಕಾಮವಿಲ್ಲದವಂಗೆ ಕಾಂತೆಯರ ಗೊಡವೇಕೆ (5-85)
ಕಾಸಾರದೆದುರಿಗೆ ಹರಿಕಥೆ ಹೇಳ್ದರೆ

ಸೋಸಿಕೇಳ್ಕಾ ತಲೆದೂಗೀತೆ (5-144)
ಕಂರಂಡ ಬಲ್ಲನೆ ಹಗಲಂ ಇರುಳ ? (5-140)
ಕೆಂಡಕ್ಕೆ ಗೊರಲಿ ಮುತ್ತುವುದುಂಟೆ (2-139)
ಕೆಟ್ಟು ನೆಂಟರ ಸೇರುವುದಂ ಬಹಳ ಕಠಿನ (ಉ. ಪ್ರ. 3-33)
ಕೊಂಕಣದವಳ್ಗೆ ಕೊಡತಿಯೆ ಮದ್ದು (3-103)
ಕೊಳ್ಳಿಬಲ್ಲುದೆ ತನ್ನ ಮನೆಯೆಂಬುದ (5-142)
ಕೋಡಗವು ಬಲ್ಲುದೇ ರತ್ನದಾಭರಣವ (5-139)
ಕೋಣನಿದಿರಿಗೆ ಕಿನ್ನರಿ ಮೀಟಿದಂತೆ (ಉ.ಪ್ರ. 1-93)
ಕೋಣಬಲ್ಲುದೆ ಕುದುರೆಯಂತೆ ವೈಹಾಳಿಯನು (5-142)
ಕೋಣ ಬಲ್ಲುದೆ ವೇದಗಳನೋದಿ ಪಠಿಸಲಿಕೆ (5-140)
ಕೋಪಿಬಲ್ಲನೆ ಶಾಂತ ಸುಗುಣದ ಘನವ (ಹ.ಕೀ.ತ. 1-128)
ಕೋಳಿಗೆ ಹೊನ್ನಪಂಜರವು ಇನ್ನೇಕೆ (3-28)
ಕ್ರೋಧವ ಬಿಡದಿಹ ಸಂನ್ಯಾಸವೇಕೆ (5-11)
ಗಾಣ ತಿರಂಗುವ ಎತ್ತಿನಂತೆ (2-1)
ಗಾಳಿಗಿಕ್ಕಿದ ದೀಪ ಬಾಳು ಬದುಕೆಲ್ಲ (ಉ.ಪ್ರ. 2-68)
ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೊ (ಉ.ಪ್ರ. 2-10)
ಗೂಗೆ ಬಲ್ಲುದೆ ಹಗಲ ಹರಿದಾಟವ (5-142)
ಗೋಣಿ ಬಲ್ಲುದೆ ಎತ್ತಿನಾ ದುಃಖವಾ (5-140)
ಚಳಿಗೆ ನಡುಗುತ ಹೋಗಿ ಜಲದೊಳಗೆ ಪೊಕ್ಕಂತೆ (2-45)
ಚೋರನು ಚಂದ್ರಗೆ ಕೈಮರೆ ಮಾಡಲು
ಚೌರ್ಯಕೆ ಕತ್ತಲು ಒದಗೀತೆ (5-144)
ಜೋಲುವ ಹೋತಿನ ಮೊಲೆಗಳ ಹಿಂಡಲು
ಹಾಲಿನ ಹನಿಯಂದು ಹೊರಟೀತೆ (5-144)
ಡಂಭಕರ ಮನೆಯಂಪಮಾನದೂಟಕ್ಕಿಂತ
ತುಂಬಿದ ಪಟ್ಟಣದಿ ತಿರಿದುಂಬುಂದೇ ಲೇಸು (5-113)
ತಾನು ಉಣ್ಣದ ದ್ರವ್ಯ ತಾಳಿಯುಂದ್ದ ಇದ್ದರೇನು (ಹ. ಕೀ. ತ. 1-144)
ತಾಯುಮಾರಿ ತೊತ್ತನು ತರುವಿರೊ (2-145)
ತೃಪ್ತಿಯಹುದೆ ಹೆತ್ತತಾಯಿ ಇಕ್ಕದನಕ (5-145)
ದಾನವಿಲ್ಲದ ಮನೆಯು ದೊಡ್ಡದಾದರೇನು (5-143)
ದೋಸೆಯ ಛಿದ್ರದಿ ಆರಿಸೆ ಕಾಳಿನ
ರಾಶಿಯು ಹಸನವು ಆದೀತೆ (5-144)
ನದಿಯು ಡೊಂಕಾದರೇನು ಉದಕಡೊಂಕೆ (ಹ. ಕೀ. ತ. 1-180)

ನಿತ್ಯ ನಪುಂಸಕನೈದಲು ತರುಣಿಗೆ
ಚಿತ್ತಸುಖವು ಸೂರಾದೀತೆ (5-144)
ನೀರ ಕಡೆದರೆ ಬೆಣ್ಣೆಯುಂಟೇನಾತ್ಮಾ ? (5-26)
ನೀರಿಲ್ಲದ ಕೆರೆಯೊಳಗೆ ಮತ್ಸ್ಯದಾ
ಹಾರಿಗೆ ಮೀನವು ದೊರಕೀತೆ (5-144)
ನೆಲೆ ತಪ್ಪಿದಮೇಲೆ ನಂಟ ಬಂಧಂಗಳೇಕೆ (5-112)
ಪರಿ ಪರಿ ಬಂಗಾರವಿಟ್ಟರೆ ದಾಸಿ ತಾ ಅರಸಿಯಾಗಬಲ್ಲಳೆ (3-51)
ಪ್ರಧಾನಿಯಿಲ್ಲದ ಅರಸುತನವೇಕೆ (5-85)
ಪಾಡಲರಿಯಂದೆ ಪ್ರೌಢತನವೇಕೆ (5-85)
ಪಾಪಿ ಬಲ್ಲನೆ ಪರರ ಸುಖ ದುಃಖವ (ಹ. ಕೀ. ತ. 1-128)
ಬಡತನ ಬಂದರೆ ನಂಟರ ಬಾಗಿಲ ಸೇರಬಾರದು (5-126)
ಬಡವ ನಿನಗೊಬ್ಬರ ಗೊಡವೆಯಾತಕ್ಕೊ (ಉ. ಪ್ರ. 4-75)
ಬಾಲರ ಭಾಷೆಯ ನಂಬಿ ನಡೆದರೆ ಶೀಲದ ಕೆಲಸಗಳಾದೀತೆ (5-144)
ಬಾವನ್ನ ನೆಳಲಿರಲು ಬೇಲಿಯ ಬಯಸುವಿರೊ (2-145)
ಬಾಳೆ ಬಲ್ಲಂದೆ ತಾನಂ ಮೇಲೊಗೆವ ಫಲಗಳನು (5-142)
ಬಿಡದೆ ಕಡಿದಾಡಂವವರ ನೆರೆಯಂಲಿಹಂದಕಿಂತ
ಅಡವಿಯೊಳಜ್ಞಾತವಾಸವೆ ಲೇಸು (5-113)
ಬಿಲ್ಲು ಡೊಂಕಾದರೇನು ಬಾಣ ಡೊಂಕೆ (ಹ. ಕೀ. ತ. 1-180)
ಬೆಟ್ಟಕ್ಕೆ ಕಲ್ಲನು ಹೊತ್ತೊಯ್ದೊಗೆಯಲು
ಹೊಟ್ಟೆಗೆ ಓದನ ಸಿಕ್ಕೀತೆ (5-144)
ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ ಜೇನಮಳೆಗರೆದರೆ
ವಿಷ ಹೋಹಂದೇನಯ್ಯ (5-153)
ಬೇಡಿದರೆ ಕೊಡದ ಲೋಭಿಗೆ ಬಿಂಕವೇಕೆ (5-85)
ಬೇವು ಬೆಲ್ಲದೊಳಿಡಲೇನು ಫಲ, ಹಾವಿಗೆ ಹಾಲೆರೆದೇನಂ ಫಲ (5-141)
ಬೋರಗಲ್ಲಿನ ಮುಂದೆ ಬಡತನ ಹೇಳಲು ಸಾರಸುಖಕ್ಕನುವಾದೀತೆ (5-144)
ಭಾಷೆಯ ನುಡಿಗಳಿಗಾಶೆ ಮಾಡೆ ಮನ
ದಾಸೆಯ ಕಾರ್ಯಗಳಾದೀತೆ (5-144)
ಭೋಗಿ ಬಲ್ಲನೆ ಕೆಲಸ ಉದ್ಯೋಗವ (5-142)
ಮಂಡೆಬೋಳಿಗೆ ಮುತ್ತಿನ ದಂಡೆಯೇಕೆ (5-138)
ಮಃಸೆದು ಮತ್ಸರಿಸುವನ ಬಳಿಯಲಿಹಂದಕಿಂತ
ಹಸನಾದ ಹಾಳಂ ಗುಡಿಗಳೆ ಲೇಸು (5-113)
ಮಳೆಯ ರಭಸಕೆ ಮರನೇರಿ ಕುಳಿತಂತೆ (2-45)

ಮಾಂಸದಾಸೆಗೆ ಮತ್ಸ್ಯ ಸಿಲುಕಿ
ಹಿಂಸೆಪಟ್ಟ ಪರಿಯಂತೆ (ಉ.ಪ್ರ. 1-5)
ಮಾಣಿಕ ಕೋಡಗನ ಕೈಯಲ್ಲಿ ಇದ್ದಂತೆ (ಉ.ಪ್ರ. 1-98)
ಮಾತೆಪಿತರ ತೊರೆದ ಮಕ್ಕಳಿನ್ನೇಕೆ (5-11)
ಮಾನಹೀನನಿಗಭಿಮಾನವೇಕೆ (ಉ.ಪ್ರ. 2-27)
ಮಿಂಚಿನ ಬೆಳಕಲಿ ದಾರಿಯ ನಡೆದರೆ
ಮುಂಚುವ ಊರಿಗೆ ಮುಟ್ಟೀತೆ (5-144)
ಮಿಥ್ಯಾವಚನಿಯ ಮಾತನು ನಂಬಲು
ಹೊತ್ತಿಗೆ ಅದು ಬಂದೊದಗೀತೆ (5-144)
ಮೀನು ಬಲ್ಲುದೆ ನೀರು ಸೌಳುಸ್ವಾದೆಂಬುದನು (ಹ.ಕೀ.ತ. 1-128)
ಮೂಗನ ಕೂಡ ಏಕಾಂತವಿನ್ನೇನು (5-143)
ಮೃತ್ಯು ಬಲ್ಲುದೆ ದಯಾದಾಕ್ಷಿಣ್ಯವ (ಹ.ಕೀ.ತ. 1-128)
ಮೇಲು ಬಣ್ಣದಾ ಆಲದ ಹಣ್ಣು ನಾಲಗೆ ಸವಿಯನು ಕೊಟ್ಟೀತೆ (5-144)
ಮೋಡಕೆ ಮಯೂರ ಕುಣಿವಂತೆ ಕುಕ್ಕುಟ
ನೋಡಿ ಕುಣಿಯಬಲ್ಲದೆ (3-51)
ಯೋಗಿ ಬಲ್ಲನೆ ಭೋಗದೊಳಗಣಾ ಸುದ್ದಿಯನು (5-142)
ವ್ರಣವನಾಶಿಪ ಕುರುಡನೋಣ ಮೊಸರಕಂಡಂತೆ (5-20)
ಶಕ್ತನಾದರೆ ನೆಂಟರೆಲ್ಲ ಹಿತರು ಅ
ಶಕ್ತನಾದರೆ ಆಪ್ತರವರೆ ವೈರಿಗಳು (5-154)
ಶ್ವಾನನ ಮೊಲೆಯೊಳು ಹಾಲಿದ್ದರೇನು (5-143)
ಶ್ವಾನ ಬಲ್ಲುದೆ ರಾಗಭೇದಂಗಳ (ಹ. ಕೀ. ತ. 1-128)
ಷಂಡಗೆ ಹೆಂಡತಿಯೇಕೆ
ತೊಂಡರಿಗೆ ಖಂಡೆಯವೇಕೆ (5-138)
ಸತ್ತವನೆದುರಿಗೆ ಸುತ್ತಲು ಕುಳಿತು
ಅತ್ತರೆ ಆ ಹೆಣ ಕೇಳೀತೆ (5-144)
ಸರಸಿಜದ ಪರಿಮಳವ ಮಧುಕರನು ಅರಿವಂತೆ
ನಿರುತ ಬಳಿಯೊಳಗಿರುವ ಕಪ್ಪೆಗಳು ಬಲ್ಲುವೆ (5-14)
ಸ್ತನ್ಯಪಾನದ ರುಚಿಯು ಚಿಣ್ಣರು ಬಲ್ಲರಲ್ಲದೆ
ಮಣ್ಣ ಬೊಂಬೆಗಳದರ ಬಗೆ ಬಲ್ಲುವೆ (5-12)
ಸುಣ್ಣವ ತಿಂದ ತಿಮ್ಮಣ್ಣನಂದದಿ (ಹ. ಕೀ. ತ. 2-288)
ಸೂಸಲಾಸೆಗೆ ಹೋಗಿ ಬಡಿಗಲ್ಲಿನೊಳು ಸಿಕ್ಕಿದ ಮೂಷಕನ ಪರಿಯಂತೆ (2-145)
ಸೂಳೆ ಬಲ್ಲಳೆ ಮನೆಯ ಬಡತನಗಳ (5-142)

ಸೆಟ್ಟಿ ಮೆಟ್ಟಿದ್ದೆ ಪಟ್ಟಣವೆಂಬುದೇ ನಿಜವು (1-140)
ಹಂಚಿನ ಇದಿರಲಿ ಹಲ್ಲನು ತೆಗೆಯಲು
ಮಿಂಚುವ ಕನ್ನಡಿಯಾದೀತೆ (5-144)
ಹಂಚು ಬಲ್ಲುದೆ ಹಲ್ಲ ತೆಗೆದರಪಕಾರವನು (5-142)
ಹಂದಿಗೆ ಗಂಧವೇಕೆ
ಅಂಧಗೆ ಕನ್ನಡಿಯೇಕೆ (5-138)
ಹಂದಿಗೆ ಸಕ್ಕರೆ ತುಪ್ಪ ತಿನಿಸಲು ಗಜೇಂದ್ರಸಾಗಬಲ್ಲುದೆ (ಹ. ಕೀ. ತ. 1-19)
ಹಣ್ಣಾದ ಹೊತ್ತು ಬಾಯ್ ಹುಣ್ಣಾದ ತೆರನಂತೆ (ಉ. ಪ್ರ. 2-73)
ಹಸು ಕರೆದ ಪಾಲ ಸವಿ ಸುಖಿಗಳಿಗೆ ಅಲ್ಲದೆ
ಕಸದಿ ವಸಿಸುವ ಉಣ್ಣೆಗಳು ಬಲ್ಲವೆ (5-14)
ಹಾಸಿಗೆಯರಿತು ಕಾಲ ನೀಡಲರಿಯದ ಮನುಜನೇಕೆ (ಉ. ಪ್ರ. 4-73)
ಹಾಳೂರ ಕೋಳಕೆ ಕಾಲು ಚಾಚಿದ ಹಾಗೆ (6-37)
ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೆ (1-148)
ಹುಟ್ಟುಬಂಜೆಗೆ ಹಡೆಯುವ ವ್ಯಥೆ ಹೇಳಲು
ಹೊಟ್ಟೆಯಲಿ ಕಳವಳ ಹುಟ್ಟೀತೆ (5-144)
ಹೇನುಬಲ್ಲುದೆ ಮುಡಿದ ಹೂಗಳ ಪರಿಮಳವ (ಹ. ಕೀ. ತ. 1-128)
ಹೋತಿನ ಕೊರಳೊಳು ಮೊಲೆಯಿದ್ದರೇನು (5-143)
ಹೊಲ ಬೇಲಿ ಮೇದರೆ ಮೊಲ ಎದ್ದು ಇರಿದರೆ (2-27)
ಹೋಗದೂರಿನ ಹಾದಿ ಕೇಳಿ ಮಾಡುವುದೇನು (5-143)

## ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಬರುವ ಉಲ್ಲೇಖಗಳು

### ವೇಷಭೂಷಣಗಳು

ಅಂದೆ (ಅಂದುಗೆ) 12-24
ಉಂಗುರಮು 18-61
ಒಡ್ಡಾಣಮು (ಒಡ್ಯಾಣ) 13-432
ಕಂಕಣಮು 12-156
ಕಂಚುಟುಂಗರಾಲು (ಕಂಚಿನ ಉಂಗುರ) 12-103
ಕಂಚುಮಟ್ಟೆಲು (ಕಂಚಿನ ಕಾಲುಂಗುರ) 12-103
ಕಂಟಮಾಲ (ಕಂಠಮಾಲೆ) 12-183
ಕಾಸೆ (ಕಚ್ಚೆ) 13-48
ಕಾಸೆಚೀರ (ಕಚ್ಚೆ ಸೀರೆ) 13-126
ಕಿರೀಟಮು 5-75
ಕುಂಡಲಾಲು (ಕುಂಡಲ) 6-207
ಕುಂದನಪು ಮುತ್ಯಾಲ ಕುಚ್ಚುಲು (ಕುಂದನದ ಮುತ್ತಿನ ಕುಚ್ಚು) 12-73
ಕೇಯೂರ 12-156
ಕೌಸ್ತುಭಮಣಿ 13-48
ಗಜ್ಜಲು (ಗೆಜ್ಜೆ) 12-302
ಗಾಜುಲು (ಬಳೆ) 18-379
ಚೀರ (ಸೀರೆ) 7-185

ಚೆಂಗಾವಿ ಮಂಸಂಗು 13-58
ನಾರಚೀರ (ನಾರಂಸೀರೆ) 12-103
ನೀಲಮಣಿಹಾರಮು 12-258
ನೂಪುರಮಂ 12-163
ಪಟ್ಟುಚೀರ (ರೇಶ್ಮೆಸೀರೆ) 4-108
ಪದಕಮು 13-432
ಪಸಿಡಿ ಮಂಟ್ಟೆಲುಂ
(ಚಿನ್ನದ ಕಾಲುಂಗುಂರ) 12-201
ಪುವ್ವುದಂಡ (ಹೂವಿನ ಹಾರ) 13-432
ಪೈಡಿದಟ್ಟಿ (ಚಿನ್ನದ ದಟ್ಟಿ)
ಶೃ. ಸಂ. 24-10
ಭುಜಕೀರ್ತಿ 5-75
ಮಂಟ್ಟೆಲುಂ 18-344
ಮುಂಗೈ ಮುರಾಲು (ಭುಜಕೀರ್ತಿ)
ಅಧ್ಯಾ. ಸಂ. 1-91
ಮುವ್ವಲುಂ (ಕಿರಂಗೆಜ್ಜೆ) 12-302
ಮುವ್ವಲ ಗಂಟಲುಂ (ಕಿರಂಗಂಟೆ) 4-144
ಮುತ್ತೆಪು ನಾಮಂಮಂ
(ಮುತ್ತಿನ ನಾಮ) 13-218
ಮುತ್ತೆಪು ಸರಮುಂಲು
(ಮುತ್ತಿನ ಸರ) 12-163
ಮೊಲಗಂಟ (ಸೊಂಟದ ಗಂಟೆ) 13-12
ಮೊಲನೂಲಿ ಗಂಟಲುಂ
(ಉಡುದಾರದ ಗಂಟೆ) 15-236
ಮೊಲಸೂಳ್ಳು (ಉಡಂದಾರ) 12-257
ಮೊಲಪೂಸಲು (ಸೊಂಟದ ಮಣಿ) 7-9
ವಜ್ರಾಲ ಕಮ್ಮಲುಂ
(ವಜ್ರದ ಕಿವಿಯೋಲೆ) 3-523
ಸವರಮಂ (ಚೌರಿ) 13-432

## ಅಹಾರ ಪಾನೀಯಂಗಳು

ಅಂಬಲಿ 14-166
ಅಡುಕುಲುಂ (ಅವಲಕ್ಕಿ) 10-27
ಅಪ್ಪಡಮುಲು (ಹಪ್ಪಳ) 6-90
ಅಪ್ಪಮು (ಅಪ್ಪಾ) ಅಧ್ಯಾ. ಸಂ. 1-94
ಅಪ್ಪಾಲುಂ 12-197
ಇಡ್ಡೆನಲು (ಇಡ್ಲಿ) 9-10
ಊರುಗಾಯ (ಉಪ್ಪಿನಕಾಯಿ)
ಅಧ್ಯಾ. ಸಂ. 1-94
ಒಗರಂ ಕಾರಪು ವಿಡೆಮು
(ಒಗರಂ ಖಾರದ ವೀಳ್ಯ) 7-189
ಕರ್ಜಿಕಾಯಿ 4-4
ಕೂರ (ಪಲ್ಯ) ಅಧ್ಯಾ. ಸಂ. 1-157
ಗಡ್ಡ ಪೆರುಗು (ಗಟ್ಟಿಮೊಸರು) 14-51
ಗಾರೆ (ವಡೆ) 4-4
ಚಕ್ಕೆರ (ಸಕ್ಕರೆ) ಅಧ್ಯಾ. ಸಂ. 1-94
ಚಕ್ಕಿಲಾಲುಂ(ಚಕ್ಕುಲಿ) ಅಧ್ಯಾ.ಸಂ. 1-171
ಚಿಂತಕಾಯತೊಕ್ಕು
(ಹುಣಸೆಕಾಯಿ ತೊಕ್ಕು) 6-234
ತಾಂಬೂಲಮು ಅನ್ನ. ಸಂ. 2-42
ದಧ್ಯನ್ನಮು 4-4
ದುಗ್ಧಾನ್ನಮು ಅಧ್ಯಾ. ಸಂ. 1-94
ನಿಪ್ಪಟಿ (ನಿಪ್ಪಟ್ಟು) ಅಧ್ಯಾ. ಸಂ. 2-5
ಪಂಚದಾರ (ಸಕ್ಕರೆ) 17-253
ಪಚ್ಚಳ್ಳು (ಪಚ್ಚಡಿ) 5-22
ಪಪ್ಪು (ತೊವ್ವೆ) ಅಧ್ಯಾ. ಸಂ. 1-94
ಪರಮಾನ್ನಮು 4-4
ಪಾನಕಮು 12-14
ಪಾಸೆಮುಲು (ಪಾಯಸ) 4-163
ಪಿಂಡಿಮಂಟಲುಂ (ಹಿಟ್ಟಿನ ಪದಾರ್ಥ)
ಅಧ್ಯಾ. ಸಂ. 1-94

ಪುಲಗಮು (ಹುಗ್ಗಿ) ಅಧ್ಯಾ. ಸಂ. 1-94
ಪೂರಣ ಕಂಡುಮುಲು
(ಹೂರಣದ ಕಡುಬು) 4-4
ಪೊಂಗಲಿ (ಹುಗ್ಗಿ) 14-10
ರಾಜಾನ್ನಮು (ರಾಜಾನ್ನ) 10-27
ವಡಪಪ್ಪು (ಕೋಸಂಬರಿ) 10-27
ವಡಲು (ವಡೆ) 12-14
ಸನಿಗೆ ಪಪ್ಪುಲು (ಕಡಲೆ ಬೀಜ)
ಅಧ್ಯಾ. ಸಂ. 1-171

## ಉಪಕರಣಗಳು

ಅದ್ದಮು (ಕನ್ನಡಿ) 14-109
ಅಮ್ಮುಲು (ಬಾಣ) 13-189
ಉಟ್ಲ (ನೆಲುವು) 3-67
ಉಯ್ಯಾಲ ತೊಟ್ಟಿ
(ಉಯ್ಯಾಲೆ ತೊಟ್ಟಿಲು) 5-270
ಉಯ್ಯಾಲ ಮಂಚಮು 12-13
ಒರಗಲ್ಲು 5-235
ಕಂಚಮು (ಊಟದ ತಟ್ಟೆ) 12-154
ಕಡವ (ಕೊಡ) 12-154
ಕತ್ತಿ 6-85
ಕಾಗು (ಕಡಾಯಿ) 4-114
ಕಾರ್ಮುಕಮು 11-218
ಕುಂಚಮು (ಅಳತೆಯ ಸಾಧನ)
ಅಧ್ಯಾ. ಸಂ. 2-116
ಕುಂಡ (ಮಡಕೆ) 6-130
ಕೂಟಿಕುಂಡ (ಅನ್ನದ ಮಡಕೆ) 12-154
ಕಠಾರು (ಕಠಾರಿ) 6-101
ಕೋಲ (ಕೋಲು) 5-57
ಖಡ್ಗಮು 12-209
ಗಡ್ಡಪಾರ (ಗಡಪಾರ) 5-119
ಗದ 12-209
ಗಾದೆ (ಕಣಜ) ಶೃ. ಸಂ. 29-334
ಗೊಡ್ಡಲಿ (ಕೊಡಲಿ) 5-190
ಚಕ್ರಮು 12-209
ಚಪ್ಪರ ಮಂಚಮು 12-16
ಚೆಂಡು 14-149
ತೂಗುಟುಯ್ಯಾಲ ಮಂಚಮು
(ತೂಗುಯ್ಯಾಲೆ ಮಂಚ) 12-68
ತೆಡ್ಡು (ದೊಡ್ಡ ಸೌಟು) 11-1-101
ತೂಪುಲು (ಬಾಣ) 4-33
ದೋಮತೆರ (ಸೊಳ್ಳೆಪರದೆ) 12-41
ಧನುಸ್ಸು 12-209
ನಾಗೇಲು (ನೇಗಿಲು) 12-274
ಪಟ್ಟೆ ಮಂಚಮು 4-108
ಪೀಟ (ಮಣೆ) 3-606
ಬಲ್ಲೆಮು (ಭಲ್ಲೆ) 6-93
ಬಾಣಮು 3-217
ಬಿಲ್ಲಗೋಟು (ಚಿಣ್ಣಕೋಲು) 10-172
ಮಂಚಮು 12-154
ಮುಂತ (ಚಿಕ್ಕಪಾತ್ರೆ) ಅಧ್ಯಾ. ಸಂ. 1-48
ಮೂಕುಡು (ಮುಚ್ಚಳ) 14-67
ರೋಕಲಿ (ಒನಕೆ) 5-72
ರೋಲು (ಒರಳು) 4-156
ವಜ್ರಾಯುಧಮು 6-72
ವಾನಗುಂಟಲು (ಅಳಿಗುಳಿಮಣೆ) 13-201
ಶಾರ್ಙ್ಗಮು 6-101
ಶೂಲಮು 13-191

## ವಾದ್ಯಗಳು



## ಗಾದೆಗಳು–ನುಡಿಗಟ್ಟುಗಳು

ಎಂತ ವೆಲುಗುನಕು ಅಂತೇ ಚೀಕಟಿ
(ಎಷ್ಟು ಬೆಳಕಿದ್ದರೆ ಅಷ್ಟು ಕತ್ತಲೆ) 9-277
ಏನುಗುಮೀದವಾನಿ ಸುನ್ನಂಬಡುಗು
(ಆನೆ ಮೇಲಿರುವವನ ಸುಣ್ಣ ಕೇಳಿದಂತೆ) 5-187
ಏರುಗುಡಿಚಿ ಕಾಲುವ ಪೊಗಡನೇಲ
(ನದಿ ನೀರ ಕುಡಿದು ಕಾಲುವೆಯನ್ನು ಹೊಗಳುವುದೇಕೆ) 9-124
ಔಷಧಮುಪಥ್ಯಮುನು ಸರಿ
(ಔಷಧ ಅಪಥ್ಯಕ್ಕೆ ಸರಿ) 9-277
ಕನಕಮು ಕನಕಮೇ ಇನುಮಿನುಮೇ
(ಕನಕ ಕನಕವೇ ಕಬ್ಬಿಣ ಕಬ್ಬಿಣವೇ) 8-119
ಕನ್ನುಲ ಮೂಸಿ ಪಾಲು ತಾಗಿನಟ್ಲು
(ಕಣ್ಣುಮುಚ್ಚಿ ಹಾಲು ಕುಡಿದಂತೆ) 16-45
ಕರ್ಣಧಾರುಡು ಲೇನಿ ಜಲಧಿನಡುಮಿಯೋಡ
(ಅಂಬಿಗನಿಲ್ಲದ ಜಲಧಿನಡುವಿನ ಹಡಗು) 7-86
ಕಲ್ಲಲಾಡನೇಲ ಆನಲು ಪೆಟ್ಟುಕೋನೇಲ
(ಸುಳ್ಳು ಹೇಳುವುದೇಕೆ ಆಣೆ ಇಡುವುದೇಕೆ) 17-253
ಕಾಮಧೇನುವು ಮಾನಿ ಯೆದ್ದು ಪಿತುಕಂಟ
(ಕಾಮಧೇನುವ ಬಿಟ್ಟು ಎತ್ತ ಕರೆದಂತೆ) 11-2-65
ಕುಕ್ಕಕಾಟು ಚೆಪ್ಪುಟೇಟು
(ನಾಯಿ ಕಚ್ಚಿದರೆ ಚಪ್ಪಲಿ ಏಟು) 11-3-77
ಕುಮ್ಮರವಾಡು ಲೇಕೇ ಕುಂಡದಾ ಬುಟ್ಟುನಾ
(ಕುಂಬಾರನಿಲ್ಲದೆಯೇ ಮಡಕೆ ಹುಟ್ಟುವುದೆ) 6-130
ಕೂಡುಲೇಕ ಆಕಲಿಕಿ ಕೂರದಿನ್ನಟ್ಲು
(ಹಸಿವಾದಾಗ ಅನ್ನ ತಿನ್ನದೆ ಪಲ್ಯ ತಿಂದಂತೆ) 5-137
ಕೂಡುವಂಡುಟ ಗಂಜಿ ಕೊರಕಾ
(ಕೂಳು ಬೇಯಿಸುವುದು ಗಂಜಿಗಾಗಿಯೋ ?) 11-3-49
ಕೂಲಿಚ್ಚಿನವಾರು ಪನಿಗೊನಕ ವಿಡುವರು
(ಕೂಲಿ ಕೊಟ್ಟವರು ಕೆಲಸ ತೆಗೆಯದೆ ಬಿಡರು) 14-184
ಕೊಂಡದವ್ವಿ ಎಲುಕಬಟ್ಟು
(ಬೆಟ್ಟ ಅಗೆದು ಇಲಿ ಹಿಡಿಯುವುದು) 11-49
ಕೊಂಡಲ ಮೀದ ಪಿಡುಗು ಪಡ್ಡಟ್ಲು
(ಬೆಟ್ಟಕ್ಕೆ ಸಿಡಿಲು ಬಡಿದಂತೆ) 5-64

ಕೋಟಿ ವಿದ್ಯಲು ಕೂಟಿ ಕೊರಕೆ
(ಕೋಟಿ ವಿದ್ಯೆ ಕೂಳಿಗಾಗಿ) 11–44

ಕೋತಿಕಿ ವೆರ್ರೆತ್ತಿನಟ್ಲು
(ಕೋತಿಗೆ ಹುಚ್ಚೇರಿದಂತೆ) 2–369

ಕೋಪಗಿಂಚುಕೊನನೇಲ ಕೋರಿ ವೇಡುಕೊನನೇಲ
(ಕೋಪಿಸಿಕೊಳ್ಳುವುದೇಕೆ ಕೋರಿ ಬಿಡುವುದೇಕೆ) 7–253

ಗಡ್ಡಪಾರ ಮಿಂಗಿತೇ ಆಕಲಿದೀರೇನಾ
(ಗಡಪಾರೆ ನುಂಗಿದರೆ ಹಸಿವಿಂಗುವುದೇ ?) 5–119

ಗಾಜು ಗಾಜೇ ಮಾಣಿಕ್ಯಮು ವೇರೇ
(ಗಾಜು ಗಾಜೇ ಮಾಣಿಕ್ಯವೇ ಬೇರೆ) 3-571

ಗುಡಿಕೊಂಚಮಯಿನ ಗುಡಿಲೋ ದೇವುನಿ ಮಹಿಮ ಘನಮು
(ಗುಡಿ ಚಿಕ್ಕದಾದರೂ ಗುಡಿಯ ದೇವರ ಮಹಿಮೆ ಘನ) 7-273

ಗುಡ್ಡಿ ಕನ್ನು ತೆರಚೆನೇಮಿ ಮೂಸೆನೇಮಿ
(ಕುರುಡುಗಣ್ಣು ತೆರೆದರೇನು ಮುಚ್ಚಿದರೇನು) 5–281

ಗೋಡ ಕಡುಗ ಬೋತೇ ರೊಂಪೇ
(ಗೋಡೆ ತೊಳೆದರೆ ರೊಚ್ಚು) 9–279

ಗೋರಪೋವುಟಕು ಗೊಡ್ಡಲಿದಗುನಾ
(ಉಗುರಿನಿಂದಾಗುವುದಕ್ಕೆ ಕೊಡಲಿಯೇಕೆ) 9–285

ಚೆಟ್ಟು ಮೀದಿ ಪಿರುಲೈನಾ ಚೇತುಲ ಗೋಯಕ ರಾವು
(ಗಿಡದ ಮೇಲೆ ಹೂವಿದ್ದರೂ ಕೀಳದೆ ಬರುವುದಿಲ್ಲ) 13–8

ಚೆಪ್ಪಿನ ಬಾಯುನು ಸೇಸಿನ ಪಾಪಮು
(ಆಡಿದರೆ ಹೋಗುತ್ತದೆ ಮಾಡಿದ ಪಾಪ) 2–8

ಚೆರಕು ಕೊನಯೇಮಿ ಮೊದಲೇಮಿ
(ಕಬ್ಬಿಗೆ ಮೊದಲೇನು ಕೊನೆಯೇನು) 15–66

ಚೆರುವು ಮುಯ್ಯ ಮೂಕುಡುನ್ನದಾ
(ಕೆರೆ ಮುಚ್ಚಲು ಮುಚ್ಚಳ ಇದೆಯೇ) 14–67

ಚೇದು ತಿನನೇಲ ಪಂಚದಾರ ನಂಜನೇಲ
(ಕಹಿ ತಿನ್ನುವುದೇಕೆ ಸಕ್ಕರೆ ನಂಜಿಕೊಳ್ಳುವುದೇಕೆ) 17-253

ತಲ್ಲಿಕಿ ಲೇನಿ ಮುದ್ದು ದಾದಿಕಿ ಗಲದಾ
(ತಾಯಿಗಿಲ್ಲದ ಮುದ್ದು ದಾದಿಗಿದೆಯೇ) 8–167

ತಾಟಿಮಾನೆಕ್ಕೇಟಿ ವಾನಿನಿ ಎಂದಾಕಾ ತೋಯುಟ
(ತಾಳೆಮರ ಹತ್ತುವವನನ್ನು ಎಷ್ಟುದೂರ ತಳ್ಳುವುದು) 11–3–79

ತಿನರ ಚೇದಂನು ತೀಪು ತೆಲಿಯಂನೇ ರಾದಂ
(ತಿನ್ನದೇ ಕಹಿ ಸಿಹಿ ತಿಳಿಯಲಾಗುವುದೇ ಇಲ್ಲ) 5–11
ತುಮ್ಮಿದ ಚೇ ಪಡ್ಡ ಕೀಟವಂ
(ದುಂಬಿಯ ಕೈಯಲ್ಲಿ ಬಿದ್ದ ಕೀಟ) 5–215
ದಪ್ಪಿಕಿ ನೇಯಿ ತಾಗಿನಟ್ಲು
(ದಾಹಕ್ಕೆ ತುಪ್ಪ ಕುಡಿದಂತೆ) 5–1
ದಿಕ್ಕುಲೇನಿವಾರಿಕಿ ದೇವುಡೇ ದಿಕ್ಕು
(ದಿಕ್ಕಿಲ್ಲದವರಿಗೆ ದೇವರೇ ದಿಕ್ಕು) 9–2
ದೇವುಡಿಚ್ಚಿನನು ಪೂಜಾರಿ ವರಮೀಡಂ
(ದೇವರು ಕೊಟ್ಟರೂ ಪೂಜಾರಿ ವರ ಕೊಡ) 8–220
ನದುಲ ಯಿಸುಕಲೆಲ್ಲ ನದುಲೇ ಯೆರುಗುನು
(ನದಿಯ ಮರಳೆಲ್ಲ ನದಿಗೇ ಗೊತ್ತು) 10–121
ನರುಡುಲೇಕ ಎದ್ದೇ ದುನ್ನಗಾ
(ನರನಿಲ್ಲದೆ ಎತ್ತು ಉಳುವುದೇ) 6–130
ನಿಜಮಾಡಿತೇ ನಿಷ್ಠೂರಮು
(ನಿಜವಾಡಿದರೆ ನಿಷ್ಠೂರ) 17–284
ನಿಪ್ಪುಲಮೀದ ಚಲ್ಲಿನ ನೂನೆಲು
(ಕೆಂಡದ ಮೇಲೆ ಚೆಲ್ಲಿದ ಎಣ್ಣೆ) 5–1
ನೀರು ಕೊದ್ದೀ ತಾಮರ
(ನೀರಿನಂತೆ ತಾವರೆ) 14–200
ನೀಳ್ಳಲೋ ನೀಡ ಕನಪಡಕ ಮಾನದು
(ನೀರಿನಲ್ಲಿ ನೆರಳು ಕಾಣದಿರದು) 13–194
ನೂತುಲು ದವ್ವಗ ಬೋತೇ ಬೇತಾಳವುಲು ಪುಟ್ಟು
(ಬಾವಿತೋಡಲು ಹೋದರೆ ಬೇತಾಳ ಹುಟ್ಟುವುದು) 6–8
ನೆಯ್ಯನಿ ಪೋಸುಕೋರಾದು ನೀಳ್ಳನಿ ಚಲ್ಲಗರಾದು
(ತುಪ್ಪ ಎಂದು ಸುರಿದುಕೊಳ್ಳಬಾರದು ನೀರೆಂದು ಚೆಲ್ಲಬಾರದು) 14–35
ಪತಿಲೇನಿ ಭೂಮಿಕಿ ಬಲವಂತುಡೇ ರಾಜು
(ಪತಿಯಿಲ್ಲದ ಭೂಮಿಗೆ ಬಲವಂತನೇ ರಾಜ) 6–63
ಪಾಮು ಪಿಲ್ಲಕು ಪಾಲುಪೋಸಿ ಪೆಂಚು
(ಹಾವಿನ ಮರಿಗೆ ಹಾಲೆರೆದು ಬೆಳೆಸು) 4–163
ಪಾರೇ ಬಂಡಿಕಿಂದ ಪಾದಮು ಚಾಚು
(ಓಡುವ ಬಂಡಿ ಕೆಳಗೆ ಪಾದ ಚಾಚಿದಂತೆ) 16–1–49

ಪಿಂಡಿ ಅಂತೇ ನಿಪ್ಪಟಿ
(ಹಿಟ್ಟಿನಷ್ಟೇ ನಿಪ್ಪಟ್ಟು) 14–200
ಪಿಚ್ಚುಕಪೈ ಬ್ರಹ್ಮಾಸ್ತ್ರವು
(ಗುಬ್ಬಿ ಮೇಲೆ ಬ್ರಹ್ಮಾಸ್ತ್ರ) 9–285
ಪೂವುಲು ಮುಡಿಚಿನ ಸಿರಸುನ ಕಟ್ಟೆಲು ಮೋಚಂಟ
(ಹೂವು ಮುಡಿದ ಶಿರಸ್ಸಿನಲ್ಲಿ ಸೌದೆ ಹೊತ್ತಂತೆ) 9–167
ಪೆದವುಲ ಚೇಟಿಂತೇ ಪೇದವಾನಿ ಕೋಪಮು
(ಬಡವನ ಕೋಪ ತುಟಿಗೆ ಕೇಡು) 10–110
ಬಂಗಾರಮಂ ಕರಗಕ ವನ್ನೆಲೇದು
(ಚಿನ್ನ ಕರಗದೆ ಬಣ್ಣ ಇಲ್ಲ) 13–8
ಮನಸು ನಮ್ಮ ನೇರ್ಚಿತೇ ಮನುಜುಂಡೇ ದೇವುಡೇನು
(ಮನಸ್ಸನ್ನು ನಂಬಿದರೆ ಮನುಷ್ಯನೇ ದೇವರು) 7–118
ಮನಸುಲೋನಿ ನೊಪ್ಪಿಕಿ ಮಂದು ಲೇದು
(ಮನಸ್ಸಿನ ನೋವಿಗೆ ಮದ್ದಿಲ್ಲ) 13–196
ಮಂಂಜೇತ ಪೆಟ್ಟಿನ ಸೊಮ್ಮುಲಕದ್ದಮೇಲ
(ಮುಂಗೈಯ ಒಡವೆಗೆ ಕನ್ನಡಿ ಏಕೆ) 2–481
ಮುಲ್ಲು ಮಂಟಗಾನಿ ಪೋದು
(ಮುಳ್ಳನ್ನು ಮುಳ್ಳಿನಿಂದ ತೆಗೆಯಬೇಕು) 12–168
ಶಿರಸುಂಡಗ ಮೋಕಾಲಿಕಿ ಸೇಸಲು ಚಲ್ಲಿನಯಟ್ಲು
(ಶಿರಸ್ಸಿರುವಾಗ ಮೊಣಕಾಲಿಗೆ ಸೇಸೆ ಚೆಲ್ಲಿದಂತೆ) 14–171
ಸತಿಲೇನಿವಾನಿಕೆ ಜರಿಗಿನದೇ ಯಾಲು
(ಸತಿಯಿಲ್ಲದವನಿಗೆ ಬಂದವಳೇ ಹೆಂಡತಿ) 6–63
ಹಂಸಚೇತಿ ಪಾಲು ನೀರು
(ಹಂಸದ ಕೈಯ ಹಾಲು ನೀರು) 6–6

## ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಉಲ್ಲೇಖಗೊಂಡಿರುವ ಸಮಾನ ರಾಗಗಳು

| | |
|---|---|
| ಆರಭಿ | ಗುಂಡಕ್ರಿಯ |
| ಆಹಿರ | ಗುಜ್ಜರಿ |
| ಕಾಂಬೋದಿ | ಗೌಳ |
| ಕೇದಾರಗೌಳ | ತೋಡಿ |

ದೇಶಾಕ್ಷಿ
ದೇಸಿ
ಧನ್ಯಾಸಿ
ನಾಟ
ನಾದನಾ (ರಾ) ಮಕ್ರಿಯ
ನೀಲಾಂಬರಿ
ಪಾಡಿ
ಭೂಪಾಳಿ
ಭೈರವಿ
ಮಧ್ಯಮಾವತಿ
ಮಲಹರಿ
ಮಾರ (ಳ) ವಿ
ಮುಖಾರಿ
ಮೇಘರಂಜನಿ
ರಾಮಕ್ರಿಯಂ
ವರಾಳಿ
ವಸಂತ
ಶಂಕರಾಭರಣ
ಶ್ರೀರಾಗ
ಸಾರ (ಳ) ಂಗ
ಸಾವೇರಿ
ಸಾಳಗ
ಸೌರಾಷ್ಟ್ರ

# ಮುಖ್ಯ ಆಕರ ಗ್ರಂಥಗಳು


## ಕನ್ನಡ

ಕಾವ್ಯಪ್ರೇಮಿ (ಸಂ.) : ಪುರಂದರದಾಸರ ಹಾಡುಗಳು, ಸಮಾಜ ಪುಸ್ತಕಾಲಯ, ಧಾರವಾಡ, 1976.

ಕೃಷ್ಣಶರ್ಮ, ಬೆಟಗೇರಿ ಹುಚ್ಚರಾವ, ಬೆಂಗೇರಿ : ಪೂಜಾತತ್ವ (1963), ಆರ್ತಭಾವ (1963), ಮಾಹಾತ್ಮ್ಯಜ್ಞಾನ (1964), ಕೃಷ್ಣಲೀಲಾ (1965), ಲೋಕನೀತಿ (1965), ಸಂಕೀರ್ಣ ಸಂಗ್ರಹ (1966), ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ.

ಪಾವಂಜೆ ಗುರುರಾವ್ ಅಂಡ್ ಸನ್ಸ್ (ಪ್ರ.) : ಪುರಂದರದಾಸರ ಕೀರ್ತನೆ, ಭಾಗ 1–5, ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ, 1953-55.

ರಾಮಚಂದ್ರರಾವ್, ಎಸ್. ಕೆ. (ಸಂ.): ಪುರಂದರ ಸಾಹಿತ್ಯ ದರ್ಶನ, ಸಂ. 1—4, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1985.

ರಾಮರಾವ್, ಸುಬೋಧ ಎಂ. (ಸಂ.): ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ, ಭಾಗ 1–2, ಶ್ರೀ ಪುರಂದರದಾಸರ ಕೃತಿಗಳು, ಸುಬೋಧ ಪ್ರಕಟನಾಲಯ, ಬೆಂಗಳೂರು, 1964.

ಹನುಮಂತರಾವ್, ಗೋರಬಾಳ (ಸಂ): ಕರ್ನಾಟಕ ಹರಿದಾಸರ ಉಗಮ ಮತ್ತು ಶ್ರೀ ಪುರಂದರದಾಸರ ಸುಳಾದಿಗಳು, ಲಿಂಗಸುಗೂರು, 1958.

## ತೆಲುಗು

ತಿರುಮಲ ತಿರುಪತಿ ದೇವಸ್ಥಾನಗಳು ಪ್ರಕಟಿಸಿದ ತಾಳ್ಳಪಾಕ ಸಾಹಿತ್ಯಮು, ಸಂಪುಟ 1-30 (1935 ರಿಂದ 1984ರ ತನಕ ಪ್ರಕಟಿಸಿದ ಎಲ್ಲ ಸಂಪುಟಗಳಲ್ಲಿರುವ ಶೃಂಗಾರ ಸಂಕೀರ್ತನೆಗಳು ಮತ್ತು ಅಧ್ಯಾತ್ಮ ಸಂಕೀರ್ತನೆಗಳು).

# ಉಪಯುಕ್ತ ಗ್ರಂಥಸೂಚಿ

## ಕನ್ನಡ


ಅನಂತಕೃಷ್ಣಶರ್ಮ, ರಾಳ್ಳಪಲ್ಲಿ : ಗಾನಕಲೆ, ಕಾವ್ಯಾಲಯ ಪ್ರಕಾಶನ, ಮೈಸೂರು, 1952.

—,,— : ಸಾಹಿತ್ಯ ಮತ್ತು ಜೀವನಕಲೆ, ಕಾವ್ಯಾಲಯ ಪ್ರಕಾಶನ, ಮೈಸೂರು, 1971.

ಅಪ್ಪಣ್ಣಾಚಾರ್ಯ, ಕೆ. (ಸಂ.) : ಪುರಂದರದಾಸರು ಬರೆದ ಶ್ರೀನಿವಾಸನ ಹಾಡುಗಳು, ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ, 1981.

ಎಚ್ಚೆಸ್ಕೆ (ಸಂ.) : ದಾಸ ಸಾಹಿತ್ಯ ದರ್ಶನ, ಮಂಗಳ ಭಾರತಿ ಪ್ರಕಾಶನ, ಮೈಸೂರು, 1984.

ಕೃಷ್ಣಶರ್ಮ, ಬೆಟಗೇರಿ : ಕನಾಟಕ ಜನಜೀವನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1983.

ಕೃಷ್ಣರಾಯ, ಅ. ನ. : ಸಂಸ್ಕೃತಿಯ ವಿಶ್ವರೂಪ, ವಿಶ್ವವಾಣಿ ಪ್ರಕಟನ ಮಂದಿರ, ಬೆಂಗಳೂರು, 1955.

ಕೃಷ್ಣರಾವ್, ಕೆ. ಎಂ. : ಶ್ರೀಜಗನ್ನಾಥದಾಸರು, ಉಷಾ ಸಾಹಿತ್ಯ ಮಾಲೆ, ಮೈಸೂರು, 1956.

ಕೇಶವದಾಸ, ಭದ್ರಗಿರಿ : ಪುರಂದರೋಪನಿಷತ್, ಭಾಗ 1-4, ದಾಸಾಶ್ರಮ ಪ್ರಕಾಶನ, ಬೆಂಗಳೂರು, 1962, 63, 64.

ಗುಂಡಪ್ಪ, ಡಿ. ವಿ. : ಸಂಸ್ಕೃತಿ, ಕಾವ್ಯಾಲಯ ಪ್ರಕಾಶನ, ಮೈಸೂರು, 1953.

ಚಿದಾನಂದಮೂರ್ತಿ, ಎಂ. : ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1979.

ಜಯರಾಮಪ್ಪ, ಇಲ್ಲೂರು : ದಾಸಸಾಹಿತ್ಯ ಹಾಗೂ ಸಾರ್ವತ್ರಿಕ ಮೌಲ್ಯಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1981.

ತಪಸ್ವಿಕುಮಾರ್, ಸಂ. : ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1982.

ತಿಪ್ಪೇರುದ್ರಸ್ವಾಮಿ, ಎಚ್. : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ. ವಿ. ಕೆ. ಮೂರ್ತಿ (ಪ್ರ.), ಮೈಸೂರು, 1974.

ದಿವಾಣಜಿ : ಪ್ರಸಾದಯೋಗ, ಉಷಾಸಾಹಿತ್ಯಮಾಲೆ, ಮೈಸೂರು, 1972.

ಧರ್ಮಾರಾವ್, ತಾಪಿ ಅನು : ರವಿಬೆಳಗೆರೆ : ವಿವಾಹ ಹುಟ್ಟು ಮತ್ತು ಪೂರ್ವೋತ್ತರ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ದ್ವಿತೀಯ ಮುದ್ರಣ, 1985.

ನಾಗರತ್ನ, ಟಿ. ಎನ್. : ಹರಿದಾಸವಾಙ್ಮಯ, ಗಾನಭಾರತಿ, ಮೈಸೂರು, 1985.

ನಾಗೇಗೌಡ, ಎಚ್. ಎಲ್. : ಪ್ರವಾಸಿಕಂಡ ಇಂಡಿಯಾ, ಸಂಪುಟ 1-7, 1969-83.

ನಾಡಕರ್ಣಿ, ಜಿ. ಡಿ. : ಕನ್ನಡಕ್ಕೆ ಶ್ರೀಪುರಂದರದಾಸರು ನೀಡಿದ ಕೊಡುಗೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1964.

ಪಾರ್ಥಸಾರಥಿ, ಅರಳುಮಲ್ಲಿಗೆ : ಹರಿದಾಸ ಸಾಹಿತ್ಯ ವೈಭವ ಶ್ರೀಪಾದರಾಜರ 5ನೆಯ ಶತಮಾನೋತ್ಸವ ಸಮಾರಂಭದ ಪ್ರಕಟಣೆ, ಬೆಂಗಳೂರು, 1982.

ಪುರಂದರೆ, ಎ. ಎಂ. : ಭಾರತೀಯ ವಾದ್ಯಗಳು, ಪತ್ರ ಪುಸ್ತಕ ನಿರ್ದೇಶನಾಲಯ, ಧಾರವಾಡ, 1974.

ಬಸವರಾಜು, ಎಲ್. : ಶಿವದಾಸ ಗೀತಾಂಜಲಿ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು, 1963.

ಬಿಂದು ಮಾಧವರಾವ್, ಬುರ್ಲಿ (ಸಂ.) : ಶ್ರೀಪುರಂದರದಾಸರು, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, 1964.

ಮುಗಳಿ, ರಂ. ಶ್ರೀ. : ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯಮಾಲೆ, ಮೈಸೂರು, ಆರನೆಯ ಮುದ್ರಣ, 1978.

ರಾಮಚಂದ್ರರಾವ್, ಎಸ್. ಕೆ. : ತಿರುಪತಿ ತಿಮ್ಮಪ್ಪ, ಐ. ಬಿ. ಎಚ್. ಪ್ರಕಾಶನ, ಬೆಂಗಳೂರು, 1980.

ರೆಡ್ಡಿ, ಜಿ. ಎ. : ಶ್ರೀ ಪುರಂದರದಾಸರು, ಮಯೂರ ಪ್ರಕಾಶನ, ಹಾಸನ, 1963.

ವರದರಾಜರಾವ್, ಜಿ. : ಪುರಂದರದಾಸರು, ಸಾಹಿತ್ಯ ಅಕಾಡೆಮಿ, ನವದೆಹಲಿ, 1983.

—,,— : ಹರಿದಾಸ ಹೃದಯ,ಶಾರದಾ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು, 1967.

ವಿಶ್ವಂಭರ ಉಪಾಧ್ಯಾಯ, ಕೆ. : ಪುರಂದರದಾಸ ದರ್ಶನ, 1963.

ವೆಂಕಟೇಶಮೂರ್ತಿ, ಎಚ್. ಎಸ್. : ಕೀರ್ತನಕಾರರು (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1975.

ವೇದವ್ಯಾಸಾಚಾರ್ಯ, ಎಚ್. ಕೆ. : ಕರ್ನಾಟಕ ಹರಿದಾಸರು, ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು, 1965.

ಶಣ್ಯೆ, ವೆಂಕಟರಾಯ ಆನಂದ : ಪುರಂದರದರ್ಶನ. ಮುಂಬಯಿ, 1963.

ಶ್ರೀಕಂಠಯ್ಯ, ಕೆ. : ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನಚಿತ್ರ, ಗೀತಾಬುಕ್ ಹೌಸ್, ಮೈಸೂರು, 1983.

ಶ್ರೀನಿವಾಸರಾವ್, ಕೊರಟಿ : ದಾಸಸಾಹಿತ್ಯ ಪ್ರವರ್ತಕರು, ಆನಂದನಿಲಯ ಪ್ರಕಾಶನ, ಬೆಂಗಳೂರು, 1983.

—"— : ಶ್ರೀಪುರಂದರದಾಸರು, ಆನಂದನಿಲಯ ಪ್ರಕಾಶನ, ಬೆಂಗಳೂರು, 1984.

ಸಂಪತ್ಕುಮಾರಾಚಾರ್ಯ, ವಿ. ಎಸ್. : ಕರ್ಣಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1983.

ಸೀತಾರಾಮಯ್ಯ, ವಿ. : ಶ್ರೀ ಪುರಂದರದಾಸರು, ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ, 1979.

## ತೆಲುಗು

ಆನಂದಮೂರ್ತಿ, ವೇಟೂರಿ : ತಾಳ್ಲಪಾಕ ಕೃತುಲು, ವಿವಿಧ ಸಾಹಿತೀ ಪ್ರಕ್ರಿಯಲು, ಹೈದರಾಬಾದ್, 1974.

ಕೃಷ್ಣಮಾಚಾರ್ಯ, ಎಕ್ಕಿರಾಲ : ಕಳ್ಯಾಣ ಸಂಸ್ಕೃತಿ, ತಿ.ತಿ.ದೇ., ತಿರುಪತಿ, 1980.

ಗಂಗಪ್ಪ, ಎಸ್. : ತೆಲುಗು ವಾಗ್ಗೇಯಕಾರುಲು, ಯುವಭಾರತಿ, ಸಿಕಿಂದರಾಬಾದು, 1983.

ಪ್ರತಾಪರೆಡ್ಡಿ, ಸುರವರಮು : ಆಂಧ್ರುಲ ಸಾಂಘಿಕ ಚರಿತ್ರ, ಸಾಹಿತ್ಯ ವೈಜಯಂತಿ, ಹೈದರಾಬಾದ್, 1982.

ರಜನೀಕಾಂತರಾವು, ಬಾಲಾಂತ್ರಪು : ಆಂಧ್ರವಾಗ್ಗೇಯಕಾರ ಚರಿತ್ರಮು, ವಿಶಾಲಾಂಧ್ರ ಪಬ್ಲಿಷಿಂಗ್ ಹೌಸ್, ವಿಜಯವಾಡ, 1975.

ರಾಮಲಕ್ಷ್ಮೀ ಆರುದ್ರ (ಸಂ.) : ತಾಳ್ಲಪಾಕವಾರಿ ಪಲುಕುಬಳ್ಳು, ಆಂಧ್ರಪ್ರದೇಶ ಸಾಹಿತ್ಯ ಅಕಾಡೆಮಿ. ಹೈದರಾಬಾದ್, 1971.

ರಾಮಸುಬ್ಬಶರ್ಮ, ಗೌರಿಪೆದ್ದಿ (ಸಂ.) : ಶ್ರೀ ತಾಳ್ಲಪಾಕ ಅನ್ನಮಾಚಾರ್ಯುಲ ಜೀವಿತ ಚರಿತ್ರಮು, ತಿ. ತಿ. ದೇ., ತಿರುಪತಿ, 1978.

ಲಕ್ಷ್ಮೀರಂಜನಂ, ಖಂಡವಲ್ಲಿ
ಬಾಲೇಂದುಶೇಖರಂ, ಖಂಡವಲ್ಲಿ : ಆಂಧ್ರುಲ ಚರಿತ್ರ-ಸಂಸ್ಕೃತಿ, ಬಾಲಸರಸ್ವತೀ ಬುಕ್ ಡಿಪೋ, ಕರ್ನೂಲ್, ಮದ್ರಾಸ್, 1951.

ವಿದ್ಯಾವತಿ, ವಿ. : ತಾಳ್ಲಪಾಕ ಕವುಲ ಸಾಹಿತ್ಯ ಸೇವ, ಮಚಲೀಪಟ್ಟಣಂ, 1979.

ಶ್ರೀನಿವಾಸುಲು ಶೆಟ್ಟಿ, ಕಾಮಿಶೆಟ್ಟಿ (ಸಂ.) : ತಾಳ್ಲಪಾಕ ಅನ್ನಮಯ್ಯ ಪಾಟಲು. ತಿ.ತಿ.ದೇ., ತಿರುಪತಿ, 1976.

—,,— : ಅನ್ನಮಾಚಾರ್ಯ ಸಂಕೀರ್ತನಮುಲು, ತಿ. ತಿ. ದೇ., ತಿರುಪತಿ, 1978.

—,,— : ತಾಳ್ಲಪಾಕ ಅನ್ನಮಾಚಾರ್ಯ ಜಯಂತಿ ಉತ್ಸವ ಸಂಚಿಕ, ತಿ. ತಿ. ದೇ., ತಿರುಪತಿ, 1978.

ಸಂಗಮೇಶಂ, ಮುಟ್ನೂರಿ : ಅನ್ನಮಾಚಾರ್ಯ ಸಾಹಿತೀ ಕೌಮುದಿ, ತಿ. ತಿ. ದೇ., ತಿರುಪತಿ, 1981.
ಅನ್ನಮಯ್ಯ, ಯುವಭಾರತಿ, ಸಿಕಿಂದರಾಬಾದ್, 1983.

ಸತ್ಯನಾರಾಯಣ, ಕಂಭಂ ಪಾಟಿ ಮಹೀಧರ ರಾಮ ಮೋಹನರಾವು(ಅನು.) : ಆಂಧ್ರುಲ ಸಂಸ್ಕೃತಿ ಚರಿತ್ರ, ಭಾಗ 1, 2, ಹೈದರಾಬಾದ್ ಬುಕ್ ಟ್ರಸ್ಟ್, 1981, 82.

ಸರ್ವೋತ್ತಮನ್, ಕೆ. : ಅನ್ನಮಯ್ಯ-ಶ್ರೀ ಪಾದರಾಯಲು.
ಅನ್ನಮಯ್ಯ-ಪುರಂದರದಾಸು, ಪಾರಿಜಾತ ಪ್ರಚುರಣಲು, ತಿರುಪತಿ, 1982.

—,,— : ಅನ್ನಮಯ್ಯ ಹನುಮತ್ಸಂಕೀರ್ತನಲು, ಪಾರಿಜಾತ ಪ್ರಚುರಣಲು, ತಿರುಪತಿ, 1983.

—,,— : ಅನ್ನಮಯ್ಯ-ತ್ಯಾಗಯ್ಯ, ಪಾರಿಜಾತ ಪ್ರಚುರಣಲು, ತಿರುಪತಿ, 1983.

ಸುಂದರಂ, ಆರ್ವಿಯಸ್ : ತೆಲುಗು ಸಾಹಿತ್ಯಮುಲೋ ದೇಶಿ ಕವಿತ, ಮಾನಸ ಸರೋವರ ಪ್ರಚುರಣಲು, ನೆಲ್ಲೂರು, 1970.

—,,— : ತೆಲುಗು-ಕನ್ನಡ ಜಾನಪದ ಗೇಯಾಲು, ಜಾನಪದ ವಿಜ್ಞಾನ ಭಾರತಿ, ಮೈಸೂರು, 1979.

—,,— : ಆಂಧ್ರುಲ ಜಾನಪದ ವಿಜ್ಞಾನಂ, ಆಂಧ್ರಪ್ರದೇಶ ಸಾಹಿತ್ಯ ಅಕಾಡೆಮಿ, ಹೈದರಾಬಾದ್, 1983.

ಸುಂದರಂ, ಆರ್ವಿಯಸ್ ಅಶ್ವತ್ಥನಾರಾಯಣ, ಜಿ. (ಸಂ.) : ರಾಳ್ಳಪಲ್ಲಿ ಪೀಠಿಕಲು, ರಾಳ್ಳಪಲ್ಲಿ ಅಭಿನಂದನ ಸಮಿತಿ, ಬೆಂಗಳೂರು, 1978.


## ENGLISH


Appannacharya, K. Suryanarayan Rao, V. (Tr.) : *Purandaradasa, T.T.D. Tirupathi, 1983.*

Aurobindo : *The foundations of Indian culture, Sri Aurobindo Ashram, Pondichery, 1968.*

Baidyanath Saraswathi : *Contribution to understanding of Indian civilization, Karnataka University, Dharwar, 1970.*

Bharadwaj, R. : *A Study on the Methodological contributions of Haridasarus of Karnataka, Directorate of Kannada and culture, Bangalore, 1983.*

Chamanlal : *Text Book of Indian Culture, Modern School, New Delhi, 1968.*

Devadoss, T. S. : *Hindu Family and Marriage, University of Madras, 1979.*

Eliot, T. S. : *Notes towards a definition of Culture, London, 1948.*

Herskovits, M. J. : *Cultural Anthropology, 1969.*

Krishna Rao, M. V. : *Purandara and Haridasa Movement, Karnataka University, Dharwar, 1966.*

Mahalingam, T. V. : *Administration and Social Life under Vijayanagar Empire, 1951.*

—,,— : *Economic Life in Vijayanagar Empire, 1951.*

Majundar, A. K. : *Elements of Indian Culture, Bharatiya Vidya Bhavan, Bombay, 1972.*

Majumdar, D. N.
Madan, T. N. : *An Introduction to Social Anthropology, Asia Publishing House, Bombay, 1957.*

Munshi, K. M. : *Foundations of Indian Culture, Bharatiya Vidya Bhavan, Bombay, 1965.*

Saletore : *Social and Political Life in the Vijayanagar Empire Vols, I and II.*

Tylor, E. B. : *Primitive Culture, 1971.*

# ವಿಶ್ವಕೋಶಗಳು—ಪತ್ರಿಕೆಗಳು

ಕನ್ನಡ ವಿಶ್ವಕೋಶಗಳು, ಸಂ. 1-12, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕನ್ನಡ ಜಾನಪದ ವಿಶ್ವಕೋಶ, ಚಂದ್ರಶೇಖರ ಕಂಬಾರ (ಸಂ.), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

'ಕರ್ನಾಟಕ', ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ఆంధ్ర విజ్ఞాన సర్వస్వము, తెలుగు భాషా సమితి, మద్రాసు.

సంగ్రహాంధ్ర విజ్ఞాన కోశము.

Encyclopaedia Britannica.

Encylopaedio of Religion and Ethics.

Encyclopaedia of Social Sciences.

ಕನ್ನಡನುಡಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಜಯಂತಿ, ಜೀವನ, ಪ್ರಬುದ್ಧ ಕರ್ಣಾಟಕ, ಸಾಧನೆ; ತರಂಗ, ಕರ್ಮವೀರ, ಸಪ್ತಗಿರಿ, ಸುಧಾ, ಪ್ರಜಾಮತ ಇತ್ಯಾದಿ.

ಭಾರತಿ, ಸಪ್ತಗಿರಿ ಮುಂತಾದ ತೆಲುಗು ಪತ್ರಿಕೆಗಳು.

# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 3 | 6 | ಕರ್ನಾಟಕಾಂಧ | ಕರ್ನಾಟಕಾಂಧ್ರ |
| 5 | 27 | ಮೀಸಲಿಡಲಾಗುತ್ತದೆ | ಮೀಸಲಿಡಲಾಗಿದೆ |
| 13 | 20 | ನೆರವಾಗುತ್ತದೆ | ನೆರವಾಗುತ್ತವೆ |
| 17 | 28 | ಪೆಕ್ಕಿ | ಪೈಕಿ |
| 32 | 26 | ಏನಗಾಯಿತು | ಏನಗಾಯಿತು ಇನ್ನೇನಿನ್ನೇನು |
| 35 | 22 | ಸಂಕೀರ್ತನೆಗಳು'' | ಸಂಕೀರ್ತನೆಗಳು'' (ಅನು). |
| 38 | 11 | ಗಾನೆರಕ್ತಿ | ಗಾನರಕ್ತಿ |
| 38 | 12 | ಇರುವನೆಂದ | ಇರುವನೆಂದು |
| 41 | 1 | ಕಂಡು ಒರುತ್ತದೆ | ಕಂಡು ಬರುತ್ತದೆ |
| 53 | 25 | ಸುತರಸಗೆ | ಸುತರೆನಗೆ |
| 64 | ಅಡಿಟಿಪ್ಪಣಿ [2] | ದಿಗುರುವಾರೇ | ದಿರುಗುವಾರೇ |
| 72 | 10 | ಕುಲವಿಲ್ಲವೆಂದ್ಯ | ಕುಲವಿಲ್ಲವೆಂದು |
| 72 | 14 | ಬಾಂಧಮ | ಬಾಂಧವ್ಯ |
| 78 | 17 | ತಿರಸ್ಕರಿದವರೇ | ತಿರಸ್ಕರಿಸಿದವರೇ |
| 81 | 23 | ಆಡಿಸುತ್ತವೆ | ಆಡಿಸುತ್ತದೆ |
| 86 | ಅಡಿಟಿಪ್ಪಣಿ [1] | ಅಧಾ | ಅಧ್ಯಾ |
| 87 | 3 | ರಾಜಶೇಖರಾಯ | ರಾಜಶೇಖರರಾಯಂ |
| 91 | 18 | ಪುರಂದರದಾಸರು, | ಪುರಂದರದಾಸರು. |
| 94 | ಅಡಿಟಿಪ್ಪಣಿ [1] | ಗಕ್ಷಿವಾಹನ | ಪಕ್ಷಿವಾಹನ |
| 95 | 15 | ಉಲ್ಲೇಖಿಸಿದ್ಧಾರೆ | ಉಲ್ಲೇಖಿಸಿದ್ದಾರೆ |
| 101 | 8 | ನೀಡುತಿದ್ದರೆಂಬುದನ್ನೂ | ನೀಡುತ್ತಿದ್ದರೆಂಬುದನ್ನೂ |
| 104 | 19 | ಚರೆದಿದ್ದಾರೆ | ಬರೆದಿದ್ದಾರೆ |
| 105 | 23 | ಯಂಂಥವು | ಯಂಥವು |
| 105 | 29 | ಲೇಲೆ | ಲೀಲೆ |
| 107 | 11 | ಊಟದ ತಟ್ಟೆ | ಊಟದ ತಟ್ಟೆ |
| 107 | ಅಡಿಟಿಪ್ಪಣಿ [5] | ವಡಿಂಚಗಾನು | ವಡ್ಡಿಂಚಗಾನು |

| | | | |
|---|---|---|---|
| 108 | 4 | ಅನ್ನಮಾಚಾರ್ಯರಿಗೆ | ಅನ್ನಮಾಚಾರ್ಯರಿಗೆ |
| 108 | 5 | ಯೊಚಿಸದೆ | ಯೋಚಿಸಿದೆ |
| 111 | 15 | ಉಲ್ಲೇಖಿಸುವುದಸ | ಉಲ್ಲೇಖಿಸುವುದರ |
| 118 | 7 | ಸುಣ್ಣ ಒಳಿದು | ಸುಣ್ಣ ಬಳಿದು |
| 118 | ಅಡಿಟಿಪ್ಪಣಿ [1] | ಗಂಪಂತಯಿತ | ಗಂಪಂತಯಿನ |
| 122 | 8 | ಮಾತೆಗಳೆಲ್ಲ | ಮಾತುಗಳೆಲ್ಲ |
| 124 | ಅಡಿಟಿಪ್ಪಣಿ [1] | ಪುರುಡ | ಪುರುಡು |
| 124 | ಅಡಿಟಿಪ್ಪಣಿ [2] | ಈಲೀಲ | ಈಲೀಲ |
| 125 | ಅಡಿಟಿಪ್ಪಣಿ [1] | ಭಕ್ಷುಲಾಕಾಶಾನ | ಬಕ್ಷುಲಾಕಾಶಾನ |
| 127 | 30 | ಧಾರಿಣಿ | ಧಾರಣಿ |
| 129 | 9 | ನಲುವು ಹಬ್ಬ | ನೆಲುವು ಹಬ್ಬ |
| 130 | 10 | ಒಂದೊಂದ | ಒಂದೊಂದು |
| 136 | 5 | ಬರುತ್ತಿಯೆ | ಬರುತ್ತೀಯೆ |
| 136 | ಅಡಿಟಿಪ್ಪಣಿ [1] | ಪಾದಲಮೀದನೇ | ಪಾದಾಲಮೀದನೇ |
| 146 | 1 | ಇವರಲ್ಲಿರುವ | ಇದರಲ್ಲಿರುವ |
| 148 | 7 | ಬಲುಕಪಿಫಳ | ಬಲುಕಟಿಗಳ |
| 154 | ಅಡಿಟಿಪ್ಪಣಿ [1] | ಭಾರ್ಗವೂಟು,ಕಾನುಗವಾನಿ | ಭಾಗೋ೯ಡು, ಕಾನುಗವಾನು |
| 165 | 15 | ಆಚಾರ್ಯ ರರಚನೆ | ಆಚಾರ್ಯರ ರಚನೆ |
| 166 | 16 | E.C. x rd | E.C. x sd |
| 172 | 21 | ಹೊಂಡಿಕೊಂಡು | ಹೊಂದಿಕೊಂಡು |
| 173 | 12 | ಭಾವನಾಶ್ಕ್ತಿಯನೂ | ಭಾವನಾಶಕ್ತಿಯನ್ನೂ |
| 184 | 6 | ನಿಧಿಯಂದಿದೆ | ನಿಧಿಯಂತಿದೆ |
| 184 | ಅಡಿಟಿಪ್ಪಣಿ [1] | ಏಂತಮಾಟಲೆಲ್ಲಾ | ಏಂತಮಾಟಲೆಲ್ಲಾ |
| 185 | ಅಡಿಟಿಪ್ಪಣಿ | ತಾಲಮಿ | ತಾಲಿಮಿ |

ದಕ್ಷಿಣ ಭಾರತದ ಕೀರ್ತನಕಾರರಲ್ಲಿ ಮೇರು ಸದೃಶರಾದ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಸಂಗೀತ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಮಹತ್ತ್ವಪೂರ್ಣವಾದುದು. ಇವರ ಕೀರ್ತನೆಗಳ ಪರಿಶೀಲನೆಯಿಂದ ದಕ್ಷಿಣ ಭಾರತೀಯ ಸಂಸ್ಕೃತಿಯ ಹಲವು ಮುಖಗಳ ಪರಿಚಯ ಆಗುತ್ತದೆ. ಕೀರ್ತನ ಸಾಹಿತ್ಯ ಜನರೊಡನೆ ನೇರ ಸಂಬಂಧವನ್ನು ಪಡೆಯುವ ಶಕ್ತಿಯುಳ್ಳಂಥದು. ಜನರ ಸಂಸ್ಕೃತಿಯ ಸಾರವನ್ನು ಈ ಸಾಹಿತ್ಯ ಗ್ರಹಿಸಿ ಅದನ್ನು ಕೀರ್ತನವೆಂಬ ಮಧುರ ಮಾಧ್ಯಮದ ಮೂಲಕ ಜನರಿಗೇ ನೀಡಿತು. ಈ ಕಾರಣದಿಂದ ಇದು ಸಾಂಸ್ಕೃತಿಕ ಅಧ್ಯಯನಕ್ಕೆ ನೆರವಾಯಿತು.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ತಮ್ಮ ಸಮಕಾಲೀನರ ಮೇಲೆ ಪ್ರಭಾವ ಬೀರಿದ್ದು ಮಾತ್ರವಲ್ಲದೆ, ರಸಭರಿತ ಸಂಗೀತ ಸಾಹಿತ್ಯಗಳಿಂದ ಇಂದಿಗೂ ರಸಿಕರ ಮನಸ್ಸನ್ನು ರಂಜಿಸುತ್ತಿದ್ದಾರೆ.

ಭಾರತೀಯ ಜನಜೀವನದಲ್ಲಿ ಕಂಡು ಬರುವ ವೈವಿಧ್ಯ, ಪ್ರಪಂಚದ ಎಲ್ಲ ವಿದ್ವಾಂಸರನ್ನೂ ಬೆರಗುಗೊಳಿಸಿದೆ. ಇಷ್ಟು ವೈವಿಧ್ಯದ ನಡುವೆ ಆಸೇತು ಹಿಮಾಚಲವನ್ನು ಒಂದುಗೂಡಿಸುವ ಭಾರತೀಯತೆ ಅಂತರ್ಗಂಗೆಯಂತೆ ಹರಿಯುತ್ತಿದ್ದು ಬಯಸಿದವರ ಬಾಯಾರಿಕೆಯನ್ನು ತಣಿಸುವ ಸಿಹಿಜಲದಂತಿದೆ. ಜೀವನವನ್ನು ತಪಸ್ಸಿನಂತೆ ನಡೆಸಿ ಸಂಕೀರ್ತನಾಮೃತವನ್ನು ಜನರಿಗೆ ಹಂಚಿ ಕೊಟ್ಟ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಮೇರುಸದೃಶ ಭಾರತೀಯ ಹೃದಯಕ್ಕೆ ಹಿಡಿದ ಎರಡು ಕನ್ನಡಿಗಳಂತೆ ಇದ್ದಾರೆ.